

ಪತ್ರಿಕಾ ಸಂಗ್ರಹಣೆ

# ಮ.ಅ.ವೆಂಕಟೇಶ್

ವಿಳಾಸ : ನಂ 140/ ಸಿ , 13ನೇ ಮುಖ್ಯ ರಸ್ತೆ, 3ನೇ ಬ್ಲಾಕ್ ಪೂರ್ವ, ಜಯನಗರ,ಬೆಂಗಳೂರು-11 ದೂರವಾಣಿ : 22447322

ಪಾ.ವೆಂ. ಜನ್ಮದಿನೋತ್ಸವ

# ಶಬ್ದ ಪ್ರಪಂಚದ 'ಭವಾವಳಿ'ಗಳು

ನಾವು ಪುನರ್ಜನ್ಮದಲ್ಲಿ ವಿಶ್ವಾಸವಿದ್ದವರಷ್ಟೆ. ಪುನರಪಿ ಜನಿಸಿ ಪುನರಪಿ ಮರಣಿಸಿ ಜನ್ಮ ಜನ್ಮಾಂತರಗಳ ಪಾಪ ಪುಣ್ಯಗಳ ಪರಿಪಾಕದ ಹಾವು ಏಣಿಗಳ ಏರುಬೀಳುಗಳಲ್ಲಿ' ತೊಳಲುವ ಜೀವರಾಶಿಯ ಮೋಕ್ಷದ ಆಕಾಂಕ್ಷೆಯ ಕಲ್ಪನೆ ನಮಗೆ ಸುಪರಿಚಿತ.

ಇದರ ಸತ್ಯತೆ ಇಂದು ಅನಿಶ್ಚಿತ. ಆದರೆ ವಿಶ್ವಭಾಷೆಗಳ ಶಬ್ದಗಳ ಇಂಥ 'ಭವಾವಳಿ'ಗಳ ಅಸ್ತಿತ್ವ ವೈಜ್ಞಾನಿಕವಾಗಿ ಸಾಬೀತಾಗಿರುವ ಸತ್ಯ. ವಿಶೇಷವೆಂದರೆ ಶಬ್ದಗಳು ಹೆಚ್ಚಿನ ಸಂದರ್ಭಗಳಲ್ಲಿ ಪುನರಪಿ ಮರಣಿಸದೆ ಪುನರಪಿ ಜನಿಸುತ್ತವೆ. ಅವುಗಳ ಹೊಸ ಜನುಮಗಳೊಂದಿಗೆ ಹಳೆಯ ಜನುಮಗಳೂ ಉಳಿಯುತ್ತವೆ.

### ಅಸಾಮಾನ್ಯತೆ

ಅಲಾಡಿನ್‌ನ ಅದ್ಭುತ ದೀಪದ ಕತೆಯನ್ನು ನಾವೆಲ್ಲ ಬಲ್ಲೆವು. ಆ ಅದ್ಭುತ ಹಳೆಯ ಹಣತೆಯನ್ನು ತಿಕ್ಕಿದುದೇ ತಡ ಭೂತವೊಂದು ಆವಿರ್ಭೂತವಾಗಿ ಕಾಮಿತಾರ್ಥಗಳ ಲೋಕವನ್ನೇ ನಿರ್ಮಿಸಿಕೊಡುತ್ತಿತ್ತಲ್ಲವೆ? ಅಂತೆಯೇ ನಾವು ಬಳಸುವ ಯಾವ ಶಬ್ದವನ್ನು ನಾವು ತಿಕ್ಕಿದೊಡನೆಯೇ ಭೂತಕಾಲಕ್ಕೆ ಭೂತ ಕಾಲವೇ ಆವಿರ್ಭೂತವಾಗಿ ನಷ್ಟ ನಾಗರಿಕತೆಗಳೆಲ್ಲವೂ ತಮ್ಮ ಅನ್ಯೋನ್ಯ ಕೊಳುಕೊಡೆಗಳಲ್ಲಿ ಕಣ್ಣೆದುರು ಕಟ್ಟಿಕೊಳ್ಳುತ್ತವೆ. ಶಬ್ದಗಳ ಸಾಮಾನ್ಯತೆ ಒಂದು ಮಾಯೆ. ಅನ್ವೇಷಣೆ ಆ ಮಾಯೆಯ ತೆರೆಯನ್ನು ತೆರೆಸಿದರೆ ಅವುಗಳ ಅಸಾಮಾನ್ಯತೆಯ ಅರಿವು ನಮ್ಮನ್ನು ಬೆರಗುಗೊಳಿಸುತ್ತವೆ.

ಶಬ್ದಗಳು ಚಿರಂಜೀವಿ, ಕಾಮರೂಪಿ, ವಿಶ್ವಸಂಚಾರಿ. ಅವುಗಳ ಹತ್ತಾರು ಅರ್ಥಾವತಾರಗಳ ಶೋಧಕ್ಕೆ ವಿವಿಧ ಭಾಷೆಗಳ ಬೃಹತ್ಕೋಶಗಳಿಗೆ ನಾವು ಶರಣು ಹೋಗಬೇಕು. ಸುಲಿದ ಬಾಳೆಯ ಹಣ್ಣಿನಂದದಿ ನಮಗೆ ಅವು ಗ್ರಾಹ್ಯವಾಗಬೇಕೆಂದರೆ ಇತ್ತೀಚೆಗೆ ಪುಸ್ತಕರೂಪದಲ್ಲಿ ಪ್ರಕಟವಾಗಿರುವ ಪಾ.ವೆಂ. ಆಚಾರ್ಯರ 'ಪದಾರ್ಥ ಚಿಂತಾಮಣಿ'ಯಂಥ ಗ್ರಂಥದ ಪುಟಗಳಲ್ಲಿ ಕಣ್ಣಾಡಿಸಿದರೂ ಸಾಕು.

'ಕಸ್ತೂರಿ' ಪತ್ರಿಕೆ ಕೈಸೇರಿದಾಗೆಲ್ಲಾ ನಾನದನ್ನು ತೆರೆಯುತ್ತಿದ್ದುದು ಆಚಾರ್ಯರ ಈ ಲೇಖನಮಾಲೆ ಕಾಣಿಸುತ್ತಿದ್ದ ಪುಟದ ಬಳಿ. ನನ್ನ ಸ್ವಭಾವದ ಓದುಗನಿಗಂತೂ ಅಲ್ಲಿಯೇ 'ಕಸ್ತೂರಿ'ಯ ಗಂಧಕೋಶದ ನಾಭಿ. ಎಂಭತ್ತೆಂಟು ಲೇಖನಗಳು ಒಟ್ಟುಗೂಡಿರುವ ಈ ಪುಸ್ತಕದ ಮುಖಪುಟದ ವಿನ್ಯಾಸ, ಶೀರ್ಷಿಕೆಯಲ್ಲಿನ ಪದ ಎಂಬ ಪದದ ಅರ್ಥಾಂತರವೂ ಕಣ್ಣಿಗೆ ಹೊಡೆಯುವಂತೆ ಕಾಲಸೈಕತದ ಪಾದ ಚಿಹ್ನೆಗಳ ಚಿತ್ರವನ್ನೂ ಒಳಗೊಂಡಿದೆ. ಆ ಚಿತ್ರ ಅತ್ತ ಯಾತಾಯಾತದ ಇತ್ತ ಅನ್ವೇಷಣೆಯ ಸಂಕೇತವೂ ಆಗಿದೆ.

ಶಬ್ದಗಳ ಜನನಾಂತರ ಸೌಹೃದ ಅಸೌಹೃದಗಳ ಅರಿವಿಗೆ ಈ ಪುಸ್ತಕದ ಮೂರನೆಯ ಲೇಖನ ನೆರವು ನೀಡುತ್ತದೆ. ಗ್ರೀಕಿನ 'ಥಿಯೋಸ್' ಹಾಗೂ ಲ್ಯಾಟಿನ್‌ನ 'ದೀವಸ್' ನಮ್ಮ 'ದೇವ' ಶಬ್ದದ ಜ್ಞಾತಿಗಳು, ದೈವೀ ಶಕ್ತಿಯನ್ನು ಸೂಚಿಸುವುವು. ಆದರೆ ಆರ್ಯಬಂಧುಗಳಾದ ನೆರೆಯ ಇರಾಣಿಗಳಿಗೆ 'ದವ್ವ' ನಾವು ಯಾವುದನ್ನು ಅಸುರ ಎನ್ನುವೆವೋ ಅದರ ಪ್ರತೀಕ. ಹಾಗೆಯೇ ನಮ್ಮ ಪಿತೃದೇವತೆ, ಆದಿತ್ಯರಲ್ಲೊಬ್ಬ, ಅರ್ಯಮನ್, ಅವರ ಭಾಷೆಯಲ್ಲಿ 'ಅಹ್ರಿಮನ್', ಅವರಿಗೆ ನಮ್ಮ ಅಸುರನಂತೆ.

ನಮ್ಮ 'ಅಸುರ'ನೇ, ಅವರ ಭಾಷೆಯಲ್ಲಿ 'ಅಹುರ', ಅವರಿಗೆ ದೈವ. ಈ ವೈಪರೀತ್ಯದ ಶೋಧನೆಗೆ ತೊಡಗಿದಾಗ ನಾವು ಮೊದಲು ಗಮನಿಸುವುದು ನಮ್ಮ ಅಸುರ ಶಬ್ದವೂ ಋಗ್ವೇದದ ಪುರಾತನಭಾಗಗಳಲ್ಲಿ ದೈವೀಶಕ್ತಿಗೆ ಅನ್ವಯವಾಗುತ್ತಿತ್ತೆಂಬುದನ್ನು ಅಲ್ಲದೆ ಅಸುರರಿಗೆ 'ಪೂರ್ವದೇವಾಃ' (ಮುಂಚೆ ದೇವತೆಗಳಾಗಿದ್ದವರು) ಎಂಬ ಪರ್ಯಾಯ ಶಬ್ದವೂ ಉಂಟು. ನಾನು ಮೋನಿಯರ್ ವಿಲಿಯಂಸ್‌ನ ಕೋಶಗ್ರಹಣ ಮಾಡುವ ಮುನ್ನ 'ಸುರ' ಶಬ್ದ ಮೊದಲಿದ್ದುದೆಂದೂ ದೇವತೆಗಳಲ್ಲದವರನ್ನು ಸೂಚಿಸಲು 'ಅ' ಸೇರಿ 'ಅಸುರ' ಆಯಿತೆಂದೂ ಭಾವಿಸಿದ್ದೆ. ಅನಂತರ ತಿಳಿದೆ 'ಅಸುರ' ಮೂಲ ಶಬ್ದವೆಂದು, ಅದೇ ಬಹು ಹಿಂದೆ ದೇವತಾ ವಾಚಕವಾಗಿತ್ತೆಂದು. ಈ ಇರಾಣೀ ಆರ್ಯ ದೇವಾಸುರ ಶಬ್ದಗಳ ವೈರುಧ್ಯವನ್ನು ಕುರಿತು ಆಚಾರ್ಯರು ಹೀಗೆ ವಿಚಾರ ಮಾಡುತ್ತಾರೆ.

"ಹಿಂದೊಂದು ಕಾಲದಲ್ಲಿ ಒಟ್ಟಾಗಿ ಜೀವಿಸುತ್ತಿದ್ದ ಭಾರತೀಯ ಮತ್ತು ಇರಾಣಿ ಆರ್ಯ ಪಂಗಡಗಳಲ್ಲಿ ಯಾವುದೋ ಕಾರಣಕ್ಕಾಗಿ ಹೋರಾಟವಾಗಿ ಅದು ಧಾರ್ಮಿಕ ಕಲ್ಪನೆಗಳ ವೈಷಮ್ಯವಾಗಿ ರೂಪಗೊಂಡಿರಬೇಕು...... ಪುರಾಣಗಳಲ್ಲಿ ಬರುವ ದೇವಾಸುರ ಯುದ್ಧಗಳು ಆರ್ಯರ ಈ ಪಂಗಡ ಹೋರಾಟದ ಅಲೌಕಿಕೀಕರಣವಾಗಿರಬಹುದು."

## ಸಾಹಿತ್ಯ ಲೋಕ



ಪಾ.ವೆಂ. ಆಚಾರ್ಯರ 'ಪದಾರ್ಥ ಚಿಂತಾಮಣಿ' ಕನ್ನಡದಲ್ಲಿ ಒಂದು ಅಪೂರ್ವ ಕೃತಿ. ಕನ್ನಡದ ಪದಪರಂಪರೆಯ (ವರ್ಲ್ಡ್‌ಲೋರ್) ಅಧ್ಯಯನಕ್ಕೆ ನಾಂದಿ ಹಾಡಿರುವ ಕೃತಿ. ಪದ ಅರ್ಥಗಳ ಸಂಬಂಧ ಸರಳವಲ್ಲ. ಅದು ಭಾಷಾ ವಿಜ್ಞಾನದ ಗಡಿ ದಾಟಿ ಹಲವು ಶಾಸ್ತ್ರೀಯ ಅಧ್ಯಯನ ಕ್ಷೇತ್ರಗಳಿಗೆ ಚಾಚಿಕೊಂಡಿದೆ. ಪದದ ಹುಟ್ಟು, ಸ್ವರೂಪ, ರೂಪಾಂತರ, ಅವಸಾನಗಳನ್ನು ಗುರುತಿಸುವ ಕೆಲಸ ನಮ್ಮಲ್ಲಿ ಹೆಚ್ಚಾಗಿ ಆಗಿಲ್ಲ. ಆಗಿರುವಷ್ಟು ಕೆಲಸಕ್ಕೂ ಸಾಕಷ್ಟು ಇತಿಮಿತಿ.
ಪಾ.ವೆಂ. ಆಚಾರ್ಯರದು ಬಹುಶ್ರುತ ಪಾಂಡಿತ್ಯ. ಸಹಜವಾಗಿ ಎಂಬಂತೆ ಅಧ್ಯಯನದಿಂದ ಗಳಿಸಿಕೊಂಡ ವಿಶೇಷ. ಅದರ ಫಲವಾಗಿ 'ಕಸ್ತೂರಿ' ಮಾಸಿಕದಲ್ಲಿ ಮೂಡಿಬಂದ ಅಂಕಣ 'ಪದಾರ್ಥ ಚಿಂತಾಮಣಿ'. ಅಂಕಣದ ಲೇಖನಗಳು ಈಗ ಅದೇ ಹೆಸರಿನಲ್ಲಿ ಪುಸ್ತಕವಾಗಿ ಹೊರಬಂದಿದೆ.

**ಕೆ. ನರಸಿಂಹಮೂರ್ತಿ**

ವಸ್ತುಗಳ ಹೆಸರುಗಳಿಂದ ವಸ್ತುಗಳ ಚರಿತ್ರೆಯ ಅರಿವು ಉಂಟಾಗುವುದಕ್ಕೆ ಆಚಾರ್ಯರ ಪುಸ್ತಕದ ಉದ್ದಕ್ಕೂ ಉದಾಹರಣೆಗಳು ದೊರಕುತ್ತವೆ. 'ಕಬ್ಬಿಣ'ವೆಂದರೆ, 'ಕರ್ಬೊನ್'; ಕರೇ ಹೊನ್ನು 'ಹೊನ್ನು' ಶಬ್ದ ಚಿನ್ನಕ್ಕೆ ಅಂಟಿಕೊಳ್ಳುವ ಮುನ್ನ ತಾಮ್ರ ಮತ್ತು ಇತರ ಲೋಹಗಳಿಗೂ ಅನ್ವಯವಾಗುತ್ತಿದ್ದ ಸಂಭವ ಇದೆ. ಹೊನ್ನು ಮೊದಲಿದ್ದುದರಿಂದಲ್ಲವೆ ಕರಿಯ ಹೊನ್ನು ಮುಂದೆ ಸಾಧ್ಯ ಆದುದರಿಂದ ತಾಮ್ರ, ತವರ, ಚಿನ್ನ ಇವುಗಳು ಮಾನವನಿಗೆ ಸಿಕ್ಕ ನಂತರವೇ ಕಬ್ಬಿಣ ಶೋಧವಾಯಿತೆನ್ನುವುದು ಅದರ ಹೆಸರಿನಿಂದ ಸಿದ್ಧವಾಗುತ್ತದೆ. ಈ ಸತ್ಯ ಅಗೆತಗಳಿಂದ ದೃಢೀಕರಿಸಲ್ಪಟ್ಟಿದೆ.

'ಕುದುರೆ' ಶಬ್ದದ ವ್ಯುತ್ಪತ್ತಿಯನ್ನು ವೀಕ್ಷಿಸಿದರೆ ಆಶ್ಚರ್ಯವಾಗುತ್ತದೆ. ಅಶ್ವ ಮೊದಲಾದ ಹಲವು ಶಬ್ದಗಳು ಸಂಸ್ಕೃತದಲ್ಲಿರುವಾಗ ಸಂಸ್ಕೃತಜನ್ಯವಾದ ಭಾಷೆಗಳಲ್ಲಿಯೂ ದ್ರಾವಿಡ ಭಾಷೆಗಳಲ್ಲಿಯೂ ಒಂದು ವಿದೇಶಿ ಪದ ಹೊಕ್ಕು ನಿಂತಿವೆ. ಹಿಕ್ಸೋಸ್ ಎಂಬ ಏಷಿಯಾದ ಜನ ಈಜಿಪ್ಟನ್ನು ಆಕ್ರಮಿಸಿ ಆಳಿದಾಗ ಅವರಿಂದ ಅಲ್ಲಿನ ಭಾಷೆಗೆ ಸೇರಿದ ಭಾರಹೊರುವ ಪ್ರಾಣಿ ಎಂಬ ಅರ್ಥದ 'ಹಥ್‌ತ್‌ರ್' ಎಂಬ ಶಬ್ದ ಹೋತ್ರ ≥ ಘೋಟ ≥ ಘೋಡಾ ಎಂದೂ ಗುದ್ರ, ಗುರ್‍ರ, ಕುದುರೆ ಎಂದೂ ರೂಪಾಂತರವಾಗಿ ಈಜಿಪ್ಟ್‌ನಿಂದ ಆಮದಾಗುತ್ತಿದ್ದ ಉತ್ತಮಾಶ್ವಗಳೊಡನೆ ಭಾರತೀಯ ಭಾಷೆಗಳನ್ನು ಸೇರಿಕೊಂಡಿದೆ.

'ಸವಾರ' ಎನ್ನುವ ಶಬ್ದ ಹಳೆ ಪರ್ಶಿಯನ್‌ನಿಂದ ಅಶೋಕನ ಕಾಲದಲ್ಲಿ 'ಅಸವಾರ' (ಅಶ್ವ- ಭಾರಿ) ಎಂದೂ ಮುಸ್ಲಿಮರ ಆಳಿಕೆಯೊಡನೆ ಹೊಸ ಪಾರಸಿಕ ಭಾಷೆಯಿಂದ 'ಸವಾರ' ಎಂದೂ ಒಂದು ಪ್ರಚಲಿತವಾಗಿದೆ.

'ರೈತ' ಶಬ್ದದ ವ್ಯುತ್ಪತ್ತಿಯೂ ಸ್ವಾರಸ್ಯವಾಗಿದೆ. ಅರಬ್ಬೀ ಭಾಷೆಯಲ್ಲಿ ಕುರಿ ಕಾಯುವವ ಎಂಬರ್ಥದ 'ರಯಾ' ಶಬ್ದದಿಂದ ಬೆಳೆದ 'ರ ಅಯ್ಯತ್' ಎಂಬ ಶಬ್ದದ ಅರ್ಥ ತಲೆತೆರಿಗೆಗೆ ಅರ್ಹನಾದ ಮುಸ್ಲಿಮೇತರ ಪ್ರಜೆ. ಮುಸ್ಲಿಂ ರಾಜರ ಹಿಂದೂ ಪ್ರಜೆ ಎನ್ನುವ ಅರ್ಥದಲ್ಲಿ ಭಾರತಕ್ಕೂ ಈ ಶಬ್ದದ ಪ್ರವೇಶ. 'ಕಂದಾಯ' ಸಂಸ್ಕೃತ ಜನ್ಯ ಆಯ ಎಂದರೆ ಗ್ರಾಮಗಳಿಂದ ರಾಜನಿಗೆ ಬರಬೇಕಾದ ಆದಾಯ. ಸ್ಕಂದ್ ಎಂದರೆ ಹೆಗಲು. ಸ್ಕಂಧ್ ಧಾತುವಿಗೆ ವಸೂಲು ಮಾಡು ಎಂದರ್ಥ. ಪೂರ್ವದಲ್ಲಿ ಕಂದಾಯ ಧಾನ್ಯ ರೂಪದಲ್ಲಿ ಸಲ್ಲುತ್ತಿತ್ತು ಎನ್ನುವುದು ಈ ಶಬ್ದದಿಂದ ವಿದಿತ. 'ಕುದುರೆ', 'ರೈತ' 'ನಾಮಯಾತ್ರೆ'ಯ ಉದಾಹರಣೆಗಳು.

'ಮೊಸರು' ಪದದ ಜ್ಞಾತಿ ಶಬ್ದ ತಮಿಳಿನ 'ಮೋರ್'. ಆದರೆ ತಮಿಳಿನಲ್ಲಿ 'ಮೋರ್' ಎಂದರೆ 'ಮಜ್ಜಿಗೆ'! ಮೊಸರಿಗೆ ತಮಿಳಿನಲ್ಲಿ 'ತೈರ್'. 'ಮಜ್ಜಿಗೆ'ಗೆ ಸಂಸ್ಕೃತದಲ್ಲಿ ಪರ್ಯಾಯವಾದ 'ತಕ್ರ'ದಿಂದ 'ತೈರ್' ಬಂದಿದೆ. ಆಚಾರ್ಯರು ಕೇಳುತ್ತಾರೆ, 'ಸಂಸ್ಕೃತವನ್ನು ಆದಷ್ಟು ದೂರ ಇಟ್ಟ ತಮಿಳು ಏಕೆ ಸಂಸ್ಕೃತದ ತಕ್ರವನ್ನು ಒಳಗೆ ಕರೆಯಿತೋ ಕಂಡವರಾರು?

### ಶಿವ - ರುದ್ರ

'ಶಿವ' ಆರ್ಯರ ಆಗಮನಕ್ಕೆ ಮುಂಚೆಯೇ ಇಲ್ಲಿದ್ದ ದೇವತೆ. ಹಳೇ ತಮಿಳಿನಲ್ಲಿ 'ಚಿವನ್' ಎಂದರೆ ಕೆಂಪು ಬಣ್ಣದವನು. 'ಶಂಭು' ಎನ್ನುವುದೂ 'ಚೆಂಬು, ತಾಮ್ರ, ಕೆಂಪು' ಎನ್ನುವಂತಹುದು. ಯಜುರ್ವೇದದಲ್ಲಿ ಶಿವ 'ನೀಲಲೋಹಿತ' (ನೀಲಿ ಕೆಂಪಾದವನು). ಈ ದ್ರಾವಿಡ ಶಿವನನ್ನು ವೈದಿಕರು ತಮ್ಮ ಹಳೆಯ ರುದ್ರನೊಡನೆ ಸಮೀಕರಿಸಿಕೊಂಡರು. ರುದ್ರ - ರುಧಿರ ಶಬ್ದ ಆರ್ಭಟಿಸುವವನು ಎನ್ನುವುದರ ಜೊತೆಗೆ 'ಕೆಂಪು' ಎನ್ನುವ ಸೂಚನೆಯನ್ನೂ ತಳೆದಿದೆ. ಹೀಗೆ ವಿವರಿಸುವ ಆಚಾರ್ಯರು 'ಹನುಮಂತ' ಶಬ್ದ ಸಂಸ್ಕೃತದ 'ಹನೂ + ಮಾನ್' ಎಂದು ಅರ್ಥೈಸಲಾಗಿದ್ದರೂ ಅದೂ ದ್ರಾವಿಡವೇ ಎನ್ನುತ್ತಾರೆ. 'ಆಣ್ (ಗಂಡು) + ಮಂತಿ ಮಂಗ)' ಎಂದು ಈ ಶಬ್ದದ ವ್ಯುತ್ಪತ್ತಿಯನ್ನು ಕೊಡುವ ಸುನೀತಿಕುಮಾರ ಚಟರ್ಜಿಯವರ ಮಾತನ್ನು ಅವರು ಒಪ್ಪುತ್ತಾರೆ. ಆದರೆ ಹನೂ (ದವಡೆ, ಗಲ್ಲ) + ಮಾನ್ (ಉಳ್ಳವ)' ಎಂದು ವ್ಯುತ್ಪತ್ತಿ ಹೇಳುವ ಮೋನಿಯರ್ ವಿಲಿಯಂಸ್ 'ಶಿವ' ಶಬ್ದಕ್ಕೂ 'ಶೀ' ಮತ್ತು 'ಶ್ರೀ' . '(ಎಲ್ಲವೂ ಅವನಲ್ಲಿವೆ', 'ಮಂಗಳಕರ') ಶಬ್ದಗಳಿಂದ ನಿಷ್ಪನ್ನ ಎಂದು ಸಂಸ್ಕೃತದಲ್ಲಿಯೇ ವ್ಯುತ್ಪತ್ತಿಯನ್ನು ಕಾಣುತ್ತಾನೆ.

### ಸ್ವಾಗತಾರ್ಹ

ಸಾಮಾನ್ಯ ವಸ್ತುವೊಂದನ್ನು ನಿರ್ದೇಶಿಸಲು ಸೃಷ್ಟಿಯಾದ ಒಂದು ಶಬ್ದ ಅದರ ಅರ್ಥ ವಿಕಾಸವಾಗುತ್ತಾ ಹೋಗಿ ಅಲೌಕಿಕವಾಗುವುದಕ್ಕೆ 'ಲಕ್ಷ್ಮಿ' ಶಬ್ದವನ್ನು ನೋಡಬಹುದು. 'ಲಕ್ಷ್' ಧಾತು ಸಂಸ್ಕೃತದಲ್ಲಿ 'ಗುರುತಿಸು, ಗುರಿಯಿಡು' ಎಂಬ ಅರ್ಥವುಳ್ಳದ್ದು. ಬಾಣದ ಪ್ರಯೋಗಕ್ಕೆ ಇಟ್ಟುಕೊಂಡ ಗುರಿ, ಗುರುತು, ಚುಕ್ಕಿ 'ಲಕ್ಷ', ಲಕ್ಷ್ಮ. ಆಚಾರ್ಯರ ಮಾತಿನಲ್ಲಿಯೆ ಹೇಳುವುದಾದರೆ, ಈ ಮೂಲದಿಂದ ಹೊರಟ ಶಬ್ದವೊಂದು ದೇವತಾ ಪಟ್ಟಕ್ಕೆ ಏರಿತು. ಒಂದು ಕುರುಹು, ಚುಕ್ಕಿ ಶುಭಾಶುಭಕರವಾಗಿರಬಹುದೆಂಬ ನಮ್ಮ ಪೂರ್ವಜರ ವಿಶ್ವಾಸ ವಿಶ್ವರೂಪ ತಾಳಿದ ಉದಾಹರಣೆ "ಲಕ್ಷ್ಮೀ".

ಸುಮಾರು ಎಂಟುನೂರು ಪದಗಳ ಬಗ್ಗೆ ವಿದ್ವತ್‌ಪೂರ್ಣವಾಗಿಯೂ ಸ್ವಾರಸ್ಯವಾಗಿಯೂ ವ್ಯುತ್ಪತ್ತಿಯನ್ನು ಅರ್ಥಾಂತರ ವಿವಕ್ಷೆಯನ್ನೂ ನೀಡುವ ಕನ್ನಡದಲ್ಲಿ ಈ ಕ್ಷೇತ್ರದಲ್ಲಿ ಪ್ರಾಯಶಃ ಪ್ರಪ್ರಥಮ ಪ್ರಯತ್ನವೆಂದು ತೋರುವ ಪಾ.ವೆಂ. ಆಚಾರ್ಯರ 'ಪದಾರ್ಥ ಚಿಂತಾಮಣಿ' ನಿಜಕ್ಕೂ ಸ್ವಾಗತಾರ್ಹ.

# ಪಾವೆಂ ಕಾವ್ಯ: ಪ್ರಗತಿಪರ ನಿಲುವು



**ಹೌಸಿಂಗ್ ಕಾಲನಿ (ಪಾ.ವೆಂ. ಆಚಾರ್ಯರ ಸಮಸ್ತ ಪದ್ಯಗಳು)**

**ಸಂ: ಎಸ್.ಎಲ್. ಶ್ರೀನಿವಾಸಮೂರ್ತಿ**

**ಪ್ರ: ಪಾ.ವೆಂ. ವಿಶ್ವಸ್ತ ಸಮಿತಿ, ಹುಬ್ಬಳ್ಳಿ.**

**ಪುಟಗಳು: 176, ಬೆಲೆ: ರೂ. 70.**

ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ ಮಹನೀಯರಲ್ಲಿ ಪಾ.ವೆಂ. ಆಚಾರ್ಯ ಅವರೂ ಒಬ್ಬರು. ಅವರದು ಬಹುಮುಖ ಪ್ರತಿಭೆ. ಪತ್ರಿಕೋದ್ಯಮ ಹಾಗೂ ಸಾಹಿತ್ಯ ಕ್ಷೇತ್ರಗಳೆರಡರಲ್ಲೂ ಅವರದು ವಿಶಿಷ್ಟ ಛಾಪು. ಅವರದು ಬಹುಭಾಷಿಕ ಸಂವೇದನೆ. ಹರಟೆ, ನಗೆ ಬರಹಗಳಲ್ಲಿ ಅವರದು ಎತ್ತಿದ ಕೈ. ಡಾ. ಶ್ರೀನಿವಾಸ ಹಾವನೂರ ಅವರ ನೇತೃತ್ವದಲ್ಲಿ ಸಮಗ್ರ ಪಾ.ವೆಂ ಸಾಹಿತ್ಯ ಒಂದೆಡೆ ದೊರಕಿರುವುದು ಸಂತೋಷದ ಸಂಗತಿ. ಪಾವೆಂ ಅವರ ಕಾರಯಿತ್ರೀ ಹಾಗೂ ಭಾವಯಿತ್ರಿ ಪ್ರತಿಭೆಯನ್ನು ಒಟ್ಟಾಗಿ ಅವರ ಸಾಹಿತ್ಯವನ್ನು ಓದುವುದಕ್ಕೆ, ಪುನರ್ ವಿಮರ್ಶೆ ಮಾಡುವುದಕ್ಕೆ ಸಾಧ್ಯವಾಗಿದೆ. ಪ್ರಸ್ತುತ ಹೌಸಿಂಗ್ ಕಾಲನಿ ಪಾವೆಂ ಕುರಿತು ಬಂದ ಹದಿನೈದನೆಯ ಎಸಳು!

'ಹೌಸಿಂಗ್ ಕಾಲನಿ' ಪಾವೆಂ ಅವರ ಸಮಗ್ರ ಕಾವ್ಯ ಸಂಪಾದನ ಕೃತಿ. ಈ ಕೃತಿಯ ಆರಂಭದಲ್ಲಿ ಡಾ. ಹಾವನೂರ ಅವರು ಬರೆದ ಸಾಲುಗಳನ್ನು ಪ್ರಸ್ತಾಪಿಸಲೇಬೇಕು. ಅದು ಇಂತಿದೆ.

"ವ್ಯಂಗ್ಯದ ಸಂಗತಿಯೆಂದರೆ ಉಳಿದ ಎಲ್ಲ ಸಾಹಿತ್ಯ ರೂಪಗಳಿಗಿಂತ ಕವಿತೆಯೇ ಅವರಿಗೆ ಅಚ್ಚುಮೆಚ್ಚಿನದು. ಆಪ್ಯಾಯಮಾನವಾದುದು. ಅವರಿಗೆ ಸಹಜಸ್ಫೂರ್ತವಾಗಿ ಹೊರಹೊಮ್ಮುವ ಅಭಿವ್ಯಕ್ತಿ ಎಂದರೆ ಕವಿತೆ. ಆದರೆ ಅವರ ಈ ಸಾಹಿತ್ಯ ಪ್ರಕಾರವನ್ನು ಕೊನೆಯಲ್ಲಿ ಪ್ರಕಟಿಸಿದ್ದೇವೆ. ಅವರ 35 ವರ್ಷಗಳ ಸಾಹಿತ್ಯ ಕೃಷಿಯಲ್ಲಿ ಮೊದಲ ಕವನದಿಂದ ಮೊದಲ್ಗೊಂಡು ಕೊನೆಯದೆಲ್ಲವನ್ನು ಇಲ್ಲಿ ಕೊಡಲಾಗಿದೆ" ಎಂದಿದ್ದಾರೆ. ಪಾವೆಂ ಆಚಾರ್ಯ ಅವರು ಕನ್ನಡದ ಉತ್ತಮ ಕವಿಗಳಲ್ಲಿ ಒಬ್ಬರು. ಆದರೆ ಅವರು ಕಾವ್ಯವನ್ನು ತಮ್ಮ ಅಭಿವ್ಯಕ್ತಿ ಮಾಧ್ಯಮವಾಗಿ ಕೊನೆಯವರೆಗೂ ಉಳಿಸಿಕೊಳ್ಳದೇ ಹೋದುದು ಕನ್ನಡಕ್ಕಾದ ನಷ್ಟವೆಂದೇ ಹೇಳಬೇಕು.

ಪ್ರಸ್ತುತ ಪಾವೆಂ ಸಮಗ್ರ ಕಾವ್ಯದಲ್ಲಿ ಎಪ್ಪತ್ತಾರು ಇಡಿಗವಿತೆಗಳು, ಚೌಪದಿಮಾದರಿಯ 'ಪೆಂಗೋಪದೇಶ' ಎಂಬ ಶೀರ್ಷಿಕೆಯಲ್ಲಿಯ ಎಪ್ಪತ್ತನಾಲ್ಕು ಕಿರುಕವನಗಳು, ಒಂದು ಹಿಂದಿ ಪದ್ಯ ಇವಿಷ್ಟು ಬೆಳಕು ಕಂಡಿವೆ. ಪಾವೆಂ '1952 ರಲ್ಲಿ 'ನವನೀರದ' ಹಾಗೂ 1978 ರಲ್ಲಿ 'ಕೆಲವು ಪದ್ಯಗಳು' ಎಂಬ ಎರಡು ಸಂಕಲನಗಳನ್ನು ಹೊರತಂದಿದ್ದರು. ಪಾ.ವೆಂ. ಒಳ್ಳೆಯ ಕವಿ ಎಂಬುದನ್ನು ಗಮನಿಸಿದ ಲಂಕೇಶ್ ತಮ್ಮ ಅಕ್ಷರ ಹೊಸ ಕಾವ್ಯದಲ್ಲಿ ಮೂರು ಕವಿತೆಗಳನ್ನು ಬಳಸಿಕೊಂಡು ಗೌರವಿಸಿದ್ದರು.

ನವ್ಯದ ಭರಾಟೆಯ ದಿನಗಳಲ್ಲಿ ಕಾವ್ಯ ರಚನೆಯಲ್ಲಿ ತೊಡಗಿಕೊಂಡಿದ್ದ ಪಾವೆಂ ಅವರ ಮೇಲೂ ಅದರ ಪ್ರಭಾವವಾಗದೇ ಇರಲಿಲ್ಲ. "ನನ್ನನ್ನು ನವ್ಯ ಎಂದುಕೊಳ್ಳಲಾರೆ. ರೊಮ್ಯಾಂಟಿಕ್ ಒಂದು ವ್ಯಂಗ್ಯದೃಷ್ಟಿ ಇಲ್ಲಿ ಕಾಣಿಸುತ್ತಿದ್ದರೆ ಅದಕ್ಕೆ ನಾನು ನವ್ಯತ್ವಕ್ಕೆ ಮತಾಂತರವಾದದ್ದು" ಎಂದು ಭಾವಿಸಬಾರದು ಎಂದು ಹೇಳಿ ನವ್ಯ ಕವಿಗಳನ್ನು ಹೀಗೆ ಕವಿತೆಯೊಂದರಲ್ಲಿ ಲೇವಡಿ ಮಾಡಿದ್ದಾರೆ. ಅದು ಇಂತಿದೆ.

"ಕವಿಯೊಬ್ಬ ಕವಿತೆಯನು  
ಗಾಜಿನಲಿ ಬರೆದ  
ಕೈತಪ್ಪಿ ಕೆಳಗೆ ಒಗೆದ  
ಕೈಗೆ ಬಂದಂತೆ ಚೂರುಗಳ ಜೋಡಿಸಿದ  
ನವ್ಯ ಕಾವ್ಯ ಇದೆಂದು ಕರೆದ"

ಪಾವೆಂ ಅವರ ಆರಂಭದ ಕವಿತೆಗಳಲ್ಲಿ ನವೋದಯ ಕಾವ್ಯದ ಲಕ್ಷಣಗಳು ನಿಚ್ಚಳವಾಗಿವೆ. ಹೂಬುಟ್ಟಿ, ಹೂವಿನ ಹಂಬಲ, ಮುರಲಿಯ ಹಾಡು, ಬೆಳಕೆಲ್ಲಿ, ಇನಿಯನ ಸ್ವಾಗತ, ಚುಕ್ಕಿಗಳಿಗೆ ಶ್ರೀಕೃಷ್ಣನಿಗೆ ಮೊದಲಾದ ಕವಿತೆಗಳಲ್ಲಿ ಆದರ್ಶ, ರಾಷ್ಟ್ರಪ್ರೇಮ, ಭಕ್ತಿ, ಪ್ರಕೃತಿ ಪ್ರೇಮ ಮೊದಲಾದ ಅಂಶಗಳು ಮೂಡಿ ಬಂದಿವೆ. ಗೇಯಪೂರ್ಣ ಕವಿತೆಗಳೂ ಇಲ್ಲಿವೆ. ಕವಿ ಇಲ್ಲಿ ತುಸು ವಾಚಾಳಿ. ಇಲ್ಲಿನ ಕವಿತೆಗಳು ಬಹು ದೀರ್ಘವಾಗಿವೆ. ಈ ನಡುವೆ 'ಉದ್ಗಾರ', 'ಯುದ್ಧ', 'ಅಮರ ಮಹಾತ್ಮ' 'ಕವಿ ವಿಜ್ಞಾನಿಗೆ' ಮೊದಲಾದ ಉತ್ತಮ ಕವಿತೆಗಳು ಅವರಿಂದ ಬಂದಿವೆ ಎಂಬುದು ಗಮನೀಯ ಅಂಶ.

'ಉದ್ಗಾರ' ಕವಿತೆಯಲ್ಲಿ ಕವಿ ಜಾತಿಪಾತಿಯ ಹೆಸರಿನಲ್ಲಿ ನಡೆಯುವ ಶೋಷಣೆಯನ್ನು ಖಂಡಿಸಿದ್ದಾರೆ. ರವೀಂದ್ರರ ಕವಿತೆಯಿಂದ ಪ್ರೇರಣೆಗೊಂಡು ಮೂಡಿ ಬಂದ ಈ ಕವಿತೆ ಮಾನವೀಯವಾಗಿದೆ. ಮೇಲ್ವರ್ಗದ ಜನ ಹೊಲೆಯರನ್ನು ನಡೆಸಿಕೊಳ್ಳುವ ಪರಿಯನ್ನು ಜನರಿರಲಿ ದೇವನೂ ಮೆಚ್ಚಲಾರ. ಅವರಿಗೂ ಬದುಕುವ ಹಕ್ಕಿಲ್ಲವೆ? ಹಾರುವರು ತಮ್ಮ ಆತ್ಮವಿಮರ್ಶೆ ಮಾಡಿಕೊಳ್ಳಬೇಕು. ಅಸ್ಪೃಶ್ಯತೆಯನ್ನು ತೊಡೆದು ಸಮಾನತೆಯನ್ನು ಸಾಧಿಸಬೇಕಾದ ಅಗತ್ಯವನ್ನು ಅವರು ಇಲ್ಲಿ ಒತ್ತಿ ಹೇಳಿದ್ದಾರೆ.

ಹೌಸಿಂಗ್ ಕಾಲನಿ

ಪಾ. ವೆಂ. ಆಚಾರ್ಯರ  
ಸಮಸ್ತ ಪದ್ಯಗಳು



ಸಂಪಾದಕರು:  
ಎಸ್. ಎಲ್. ಶ್ರೀನಿವಾಸಮೂರ್ತಿ

"ಹೊಲೆಯನೆಂದು ಪತಿತನೆಂದು  
ಒದೆದು ಹೊರಗೆ ದಬ್ಬುವಾಗ  
ಪತಿತನೆದೆಯೊಳಿರುವ ದೇವನೊದೆಯ ತಿಂಬುದಿಲ್ಲವೆ?  
ಹೊಲೆಯನೆಂದು ನೋಯೆ ಬಯ್ದು  
ಮುಟ್ಟ ಹೇಸಿರೋಡಿಪಾಗ  
ಹೊಲೆಯನೊಡಲ ದೇವ ಮನದಿ ನೊಂದೆ ನೋವನಲ್ಲವೇ?"

ಮನುಷ್ಯ ಮನುಷ್ಯರ ನಡುವಿನ ಈ ತಾರತಮ್ಯ, ಭೇದ ಭಾವ ಅಳಿಯದೆ ಯಾರಿಗೂ ಸುಖವಿಲ್ಲ ಎಂಬ ಮಾತನ್ನು ಪ್ರಗತಿಪರ ನಿಲುವನ್ನು ಪಾವೆಂ ಬಹಳ ಹಿಂದೆಯೇ ಗಟ್ಟಿಧ್ವನಿಯಲ್ಲಿ ಹೇಳಿದ್ದರು. ನಮ್ಮ ನಾಡು ಪಾರತಂತ್ರ್ಯದಿಂದ ಮುಕ್ತವಾಗುವುದರ ಜೊತೆಗೆ

"ಭೇದಭಾವದಾ ಮೊರೆಯನು ಮುಳುಗಿಸಿ  
ವೈರದ ಮರ್ಮರ ದನಿಯನು ತೊಲಗಿಸಿ  
ಮಾನವ ಸೇವೆಗೆ ಪ್ರೇರಿಸಿ, ಮೊಳಗಲಿ  
ಸ್ವಾತಂತ್ರ್ಯದ ರಣಭೇರಿ"

ಬರೇ ಸ್ವಾತಂತ್ರ್ಯ ಗಳಿಸಿಕೊಂಡರೆ ಸಾಲದು ನಮ್ಮಲ್ಲಿರುವ ಅಸಮಾನತೆ, ವೈರತ್ವವನ್ನು ಮೆಟ್ಟಿನಿಂತು ನಾವು ಮನುಷ್ಯರಾಗಬೇಕು ಎಂಬ ಹಂಬಲ, ಇಲ್ಲಿ ವ್ಯಕ್ತವಾಗಿದೆ.

ಯುದ್ಧದಿಂದ ಯಾರಿಗೂ ಸುಖವಿಲ್ಲ. ಅದು ಮನುಕುಲಕ್ಕೆ ಹಿಡಿದ ಕಪ್ಪುಚುಕ್ಕೆ "ರಾಷ್ಟ್ರ ರಾಷ್ಟ್ರಗಳಿಗೇ ಹಿಡಿದಿದೆ ಹುಚ್ಚು ಕಳ್ಳು ಕುಡಿದವರಂತೆ ಏರಿಹುದು ಕೆಚ್ಚು! ಏನಿದು ಮಾನವನಿಗೆ ಬಂದಿಹುದೆ ಕೇಡು? ಒಬ್ಬನೊಬ್ಬನ ಕೊಲಲು ಕೊಲೆಯಹುದು ಶುದ್ಧ, ರಾಜ್ಯ ರಾಜ್ಯವ ಕಡಿಯೆ ಅದು ಹಿರಿದು ಯುದ್ಧ! ಮನುಜ ಸಂಸ್ಕೃತಿಯನುಳಿಸಲು ನಮ್ಮ ಕದನ ಎನ್ನುವ ದೊಡ್ಡ ರಾಷ್ಟ್ರಗಳು ಸಂಸ್ಕೃತಿಯನ್ನು ಕಾಡಿಗಟ್ಟುತ್ತಿವೆ ಎಂದು ಅಣಕವಾಡಿದ್ದಾರೆ. ಹಸಿವು, ಬಡತನ, ಅಸಮಾನತೆ ಮೊದಲಾದ ಸಾಮಾಜಿಕ ಅಂಶಗಳನ್ನು ಎತ್ತಿಕೊಂಡು ಮನಮುಟ್ಟುವಂತೆ ಅವರು ಕಾವ್ಯ ರಚಿಸಿದ್ದಾರೆ.

ಗಾಂಧೀಜಿ ಅವರ ಹತ್ಯೆಯನ್ನು ಖಂಡಿಸುತ್ತ ಕವಿ ಕ್ರಿಸ್ತನಾದನು ಅಮರ! ಗಾಂಧಿಯಾದನು ಅಮರ ಮಾನವ್ಯ ಮಾತ್ರ ಕಡೆಗೂ ಅಸುರ! ಬರಿ ಅಸುರ! ಎಂದು ಮನುಷ್ಯನ ಅಸುರೀ ಪ್ರವೃತ್ತಿಯ ಕುರಿತು ಖೇದವ್ಯಕ್ತಪಡಿಸಿದ್ದಾರೆ.

ಕವಿ ಮತ್ತು ವಿಜ್ಞಾನಿಯ ಸಂವಾದ 'ಕವಿ ವಿಜ್ಞಾನಿಗೆ' ಎಂಬ ಕಾವ್ಯದಲ್ಲಿ ಸೊಗಸಾಗಿ ಮೂಡಿ ಬಂದಿದೆ. ನವನೀರದ, ಸುಗ್ಗಿಯ ಹಾಡು, ಒಳ್ಳೇಯ ಭಾವಗೀತೆಗಳಾಗಿವೆ. ಪಾವೆಂ ಅವರ ಮೊದಲ ಕವಿತಾ ಸಂಕಲನದಲ್ಲೇ ಹಾಸ್ಯ, ವ್ಯಂಗ್ಯ ವಿಡಂಬನೆ ಸಾಕಷ್ಟು ನೆಲೆ ಪಡೆದುಕೊಂಡಿವೆ. ಎರಡನೆಯ ಸಂಕಲನದಲ್ಲಿ ಹಾಸವೇ ಸ್ಥಾಯಿಯಾಗಿದೆ. ಹೌಸಿಂಗ್ ಕಾಲನಿ ಒಂದು ಅಣಕ ಕವಿತೆ. ನಮ್ಮ ಜನ ತಮ್ಮ ಭಾಷೆ, ಸಂಸ್ಕೃತಿ, ವೈವಿಧ್ಯವನ್ನು ಬಿಟ್ಟು ಸಪಾಟು ಸಂಸ್ಕೃತಿಯತ್ತ ವಾಲುತ್ತಿದ್ದಾರೆ ಎಂಬ ಸೂಚನೆ ಇಲ್ಲಿದೆ. ಬದುಕಿನ ಶೈಲಿ ವಿಚಿತ್ರವಾಗುತ್ತಿದೆ. ಜೀವನ ವಿಧಾನ ಕೃತಕವಾಗುತ್ತಿದೆ ಎಂಬುದನ್ನು ಸಶಕ್ತವಾಗಿ ಕವಿ ಹೀಗೆ ಹೇಳಿದ್ದಾರೆ.

"ನಮ್ಮೀ ಹೌಸಿಂಗ್ ಕಾಲನಿಯಲ್ಲಿ  
ಹೆಂಡರುಗಳ ಎಲ್ಲಾ ಫ್ಯಾಶನ್ನೂ  
ಈವ್ಸ್ ವೀಕ್ಲೀಲಿ ಪ್ರಿಂಟಾದ್ದೇನೇ  
ಅವರು ನಗೋದೂ ಅಳೋದೂನೂ  
ಮಾರ್ಲಿನ್ ಮನ್ರೋ ಡಿಟ್ಟೋನೇನೇ"

'ಅಮರ ಮಹಾತ್ಮ' ಕವಿತೆಯನ್ನು ನೆನಪಿಸುವ ಇನ್ನೊಂದು ಕವಿತೆ 'ಗಾಂಧಿಗೆ'. ಗಾಂಧಿಯ ಉನ್ನತ ವ್ಯಕ್ತಿತ್ವ ಹಾಗೂ ನಮ್ಮವರ ಸಣ್ಣತನವನ್ನು ಕವಿ ಸೂಕ್ಷ್ಮವಾಗಿ ಚಿಂತನೆಗೆ ಗುರಿಪಡಿಸಿದ್ದಾರೆ.

"ಎಲ್ಲಾರೂ ನಿನ್ನನ್ನ ದೇವರು ಮಾಡಬೇಕೆಂ  
ದಿದ್ದಾಗ ನೀನೊಬ್ಬ ಹಟಮಾರಿಯ ಹಾಗೆ  
ಮಾನುಷರ ಮಧ್ಯೇ ಮನುಷ್ಯನಾಗಿರುವ  
ಅಮಾನುಷೀ ಒಂಟಿದಾರಿಯಲ್ಲಿ ನಡೆದೆ.....  
ಅವತಾರಕ್ಕಾಗಿ ಕಾಯುತ್ತಿರಲು ನಾವು  
ಉದ್ಧಾರ ಮಾಡೋಣವೆಂದು ನೀ ಹೊರಟೆ ಮುಂದೆ  
ಮನುಷ್ಯರನ್ನ ಕೊಂದೇ ದೇವರು ಮಾಡಬೇಕು.  
ಈ ಹಳೇ ಸತ್ಯಕ್ಕೆ ನೀ ಹೊಸಾ ದೃಷ್ಟಾಂತವಾದೆ"

ಗಾಂಧೀಜಿ ಅವರ ಕುರಿತು ಕನ್ನಡದಲ್ಲಿ ಬಂದ ಉತ್ತಮ ಕವಿತೆಗಳಲ್ಲಿ ಇದೂ ಒಂದೆಂದು ನಿಸ್ಸಂಶಯವಾಗಿ ಹೇಳಬಹುದು.

ತಮ್ಮ ಜೀವನಾನುಭವವನ್ನು ಪಾವೆಂ 'ಪೆಂಗೋಪದೇಶ'ಎಂಬ 74 ಕಿರು ಕವಿತೆಗಳಲ್ಲಿ ರಚಿಸಿಕೊಟ್ಟಿದ್ದಾರೆ. ಇವು ಡಿ.ವಿ. ಗುಂಡಪ್ಪ ಅವರ ಮಂಕುತಿಮ್ಮನ ಕಗ್ಗದ ಪದ್ಯವನ್ನು ಹೋಲುತ್ತವೆ. ಡಿವಿಜಿ ಅವರ 'ಬದುಕು ಜಟಕಾಬಂಡಿಗೆ' ಪ್ರತಿಯಾಗಿ ಪಾವೆಂ ಬರೆದ ಪ್ರತಿಕ್ರಿಯೆ ಹೀಗಿದೆ.

"ಬದುಕು ಖಟರಾ ಬಸ್ಸು, ವಿಧಿಯದರ ಡ್ರೈವರನು  
ಕುಡಿದು ಹೊಡೆಯುತ್ತಾನೆ ಎರಡು ಕಾಣುತ್ತ  
ಗಟರವೋ ಮರವೋ ಸಂಕವೋ ಟ್ರಕ್ಕೋ ಗೋಡೆಯೋ  
ಮಡಿವವನಿಗಾವುದೇನೋ ಎಲ್ಲವೂ ಪೆಂಗೇ"

ಹೀಗೆ ಈ ಪೆಂಗೋಪದೇಶಗಳು ಸರಳವಾಗಿ, ಸುಂದರವಾಗಿವೆ. ಅವು ಸಾಕಷ್ಟು ವಿಚಾರ ಪರಿಪ್ಲುತವಾಗಿವೆ. ನಮ್ಮ ಸುತ್ತಲಿನ ಬದುಕನ್ನು ಕವಿ ಇಲ್ಲಿ ವಿಮರ್ಶೆಗೊಡ್ಡಿದ್ದಾರೆ. ಪಾವೆಂ ಅವರ ದೃಷ್ಟಿ ಜನಪರವಾದುದು. ವೈಜ್ಞಾನಿಕವಾದುದು. ಎಲ್ಲವನ್ನು ಅವರು ಪರೀಕ್ಷಿಸಿ ನೋಡುವ ಪ್ರವೃತ್ತಿ ಉಳ್ಳವರು. "ಗತವೆಷ್ಟು ಚೆನ್ನೆನಿಸಿದರು ಪರಿಕಿಸಲೆಬೇಕು" ಎಂಬ ನಿಲುವು ಅವರದಾಗಿತ್ತು. ಪಾವೆಂ ಅವರ ಕವಿತೆಗಳಲ್ಲಿ ಎದ್ದು ಕಾಣುವುದು ಸಹಜತೆ. ಕಾವ್ಯ ಕಟ್ಟುವ ಕಸುಬಿನಲ್ಲಿ ಅವರು ನಿಪುಣರಾಗಿದ್ದರು. ಪ್ರಯೋಗದ ನೆಲೆಯಿಂದ, ವಸ್ತು ವೈವಿಧ್ಯಗಳಿಂದ, ಲಯ, ಛಂದಸ್ಸುಗಳಿಂದ, ಅವರ ಕವಿತೆಗಳು ಮೇಲ್ತರಗತಿಯದೆನಿಸಿವೆ. ಈ ಕೃತಿಯ ಹಿನ್ನುಡಿಯಲ್ಲಿ ಕವಿ, ನಾಟಕಕಾರ ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ ಅವರು "ಕೆಲವರ ಪದ್ಯಗಳು ಕೆಲ ಕಾಲ ಬೆಳಗುತ್ತವೆ. ನಂತರ ಕಳೆಗುಂದುತ್ತವೆ. ಪಾವೆಂ ಆಚಾರ್ಯರ ಪದ್ಯಗಳು ಸದಾ ಜ್ಯೋತಿತ ನಕ್ಷತ್ರಗಳು" ಎಂದು ಅಭಿಪ್ರಾಯಪಟ್ಟಿರುವ ಮಾತಿನಲ್ಲಿ ತಥ್ಯವಿದೆ.

ಪಾವೆಂ ಸಮಗ್ರ ಕಾವ್ಯವನ್ನು ಪ್ರಕಟಿಸಿದ ಪಾವೆಂ ವಿಶ್ವಸ್ತ ಸಮಿತಿಗೆ, ಈ ಕೃತಿಯನ್ನು ಸಂಪಾದಿಸಿ ಕೊಟ್ಟ ಎಸ್.ಎಲ್. ಶ್ರೀನಿವಾಸಮೂರ್ತಿ ಅವರನ್ನು ನಾವು ಮನಸಾರೆ ಕೊಂಡಾಡಬೇಕು. ನಮ್ಮ ಹಿರಿಯ ತಲೆಮಾರಿನ ಸಾಹಿತಿಗಳ ಸಮಗ್ರ ಸಾಹಿತ್ಯ ಮರು ಓದಿಗೆ ಸಿಗುವಂತಾಗಲು ಸಾಹಿತ್ಯ ಅಕಾಡೆಮಿ, ಪರಿಷತ್ತು ಸಂಘ ಸಂಸ್ಥೆಗಳು ಮುಂದಾಗಬೇಕು.

-ಡಾ. ಜಿ.ಎನ್. ಉಪಾಧ್ಯ

ವಿವಿಧ ವಿಷಯಗಳ

ಸಿಂಧುವಳ್ಳಿ ಅನಂತಮೂರ್ತಿ ಈ ಒಬ್ಬೊಬ್ಬರು ತಮ್ಮ ತಮ್ಮ

'ಪ್ರಸ್ತುತ' ದ 'ಸಾಹಿತ್ಯವೂ ರಾಜಕಾರಣವೂ' ಬರಹ ಸಮ್ಮ

# ಪಾ.ವೆಂ ಆಚಾರ್ಯ: ಹಿನ್ನೋಟದಲ್ಲೊಂದು ಗ್ರಹಿಕೆ

## ಹೂ ಬೆರಳು



ಎಸ್.ಆರ್.ವಿಜಯಶಂಕರ
editor@vijaykarnataka.com

ಪಾವೆಂ ಆಚಾರ್ಯ ಎಂದೇ ಪರಿಚಿತರಾಗಿರುವ ಪಾಡಿಗಾರು ವೆಂಕಟರಮಣ ಆಚಾರ್ಯ (15-02-1915ರಿಂದ 04-04-1992) ಬಂಗಾಳಿ ಭಾಷೆಯಿಂದ ಕನ್ನಡಕ್ಕೆ 68 ವರುಷಗಳ ಹಿಂದೆ ಅನುವಾದಿಸಿ ಪ್ರಕಟಿಸಿದ್ದ ಬನಪೂಲ್ ಅವರ ಬಂಗಾಲಿ ನೀಳ್ಗತೆ 'ವಾಸನಾ' ಈಗ ಪುನರ್ ಮುದ್ರಣವಾಗಿ ಪ್ರಕಟವಾಗಿದೆ. (ಸಪ್ನ ಬುಕ್ ಹೌಸ್ ಬೆಂಗಳೂರು) ಲಾಂಗೂಲಾಚಾರ್ಯ, ರಾಧಾಕೃಷ್ಣ ಮುಂತಾದ ಹೆಸರುಗಳಿಂದಲೂ ಬರೆಯುತ್ತಿದ್ದ ಪಾವೆಂ ಕವಿ, ಲೇಖಕ, ಚಿಂತಕ, ವಿಮರ್ಶಕ ಎಂದು ಮಾತ್ರವಲ್ಲದೆ 'ಕಸ್ತೂರಿ' ಡೈಜೆಸ್ಟ್ ಪತ್ರಿಕೆಯ ಸಂಪಾದಕರಾಗಿಯೂ ಕನ್ನಡ ಓದುಗರಿಗೆ ಪರಿಚಿತರು.

ಪಾವೆಂ ಬಾಲ್ಯದಲ್ಲಿ ಬಂಗಾಳಿ ಭಾಷೆ ಕಲಿತು ರವೀಂದ್ರನಾಥ ಠಾಗೂರರ ಗೀತಾಂಜಲಿಯನ್ನೂ ಕನ್ನಡಕ್ಕೆ ಅನುವಾದಿಸಿದವರು. ಈ ಹಿನ್ನೆಲೆಯಲ್ಲಿ 'ವಾಸನಾ' ಕೃತಿ ಮೂಲ ಬಂಗಾಳಿ ಓದಿನ ಹಿನ್ನಲೆಯಲ್ಲೆ ಕನ್ನಡಕ್ಕೆ ಬಂದಿರಬೇಕು ಎಂದು ಅವರ ಕೃತಿಗಳ ಬಗ್ಗೆ ಪಿಎಚ್.ಡಿ ಸಂಶೋಧನಾ ಪ್ರಬಂಧ ಬರೆದಿರುವ ಡಾ. ಪಿ.ಆರ್. ಸರ್ವಮಂಗಳಾ ಹೇಳುತ್ತಾರೆ. ಬಲಾಯಿಚಂದ್ ಮುಖ್ಯೋಪಾಧ್ಯಾಯ (1899-1989) ಠಾಗೂರರ ನಂತರದ ತಲೆಮಾರಿನ ಬಂಗಾಳದ ಮುಖ್ಯ ಬರಹಗಾರರಲ್ಲೊಬ್ಬರು. ವೃತ್ತಿಯಿಂದ ಕಲಕತ್ತೆಯಲ್ಲಿ ಎಂಬಿಬಿಎಸ್ ಡಿಗ್ರಿ ಪಡೆದು ವೈದ್ಯರಾಗಿದ್ದ ಅವರ 61 ಕಾದಂಬರಿಗಳು ಹಾಗೂ 600ಕ್ಕೂ ಮಿಕ್ಕ ಕತೆಗಳು ಪ್ರಕಟವಾಗಿವೆ. ಇವಲ್ಲದೆ ಕಾವ್ಯ, ನಾಟಕಗಳನ್ನೂ ರಚಿಸಿರುವ ಅವರು ಸಾಹಿತ್ಯ ಸೇವೆಗಾಗಿ ಪದ್ಮಭೂಷಣ ಪ್ರಶಸ್ತಿ ಪುರಸ್ಕೃತರು (1975) ಬನಪೂಲ್ (ವನಸುಮ) ಎಂಬ ಕಾವ್ಯನಾಮದಿಂದ ಬರೆಯುತ್ತಿದ್ದ ಅವರ ಕೃತಿಯನ್ನು ಆಧರಿಸಿ ಮೃಣಾಲ್ ಸೆನ್ ನಿರ್ದೇಶನದ 'ಭುವನ್ ಶೋಮ್' ಭಾರತೀಯ ಚಲನಚಿತ್ರ ಇತಿಹಾಸದಲ್ಲೊಂದು ಮೈಲಿಗಲ್ಲು ಎನಿಸಿಕೊಂಡಿರುವ ಸಿನಿಮಾ.

'ವಾಸನಾ' ಕೃತಿಯ ನಾಯಕ ಸರಕಾರಿ ಆಸ್ಪತ್ರೆಯಲ್ಲಿ ಡಾಕ್ಟರ್ ಆಗಿ ಕೆಲಸ ಮಾಡುತ್ತಿರುವವನು. ವೈದ್ಯನಾಗಿ ಸರಕಾರಿ ಆಸ್ಪತ್ರೆಯಲ್ಲಿ ನೂರಾರು ಹೆಣಗಳನ್ನು ಮರಣೋತ್ತರ ಪರೀಕ್ಷೆಗಾಗಿ ಕುಯ್ದು ಹೊಲಿಗೆ ಹಾಕಿದ ಈ ಡಾಕ್ಟರ್ ಒಂದು ಗಾಢ ರಾತ್ರಿ ಪುಸ್ತಕ ಓದುತ್ತಾ ಕುಳಿತಿದ್ದಾಗ ಅವನು ಪೋಸ್ಟ್ ಮಾರ್ಟಂ ಮಾಡಿದ ಕೆಲವು ಹೆಣಗಳು ತಮ್ಮ ಕತೆಯನ್ನು ಈ ಡಾಕ್ಟ ರಿಗೆ ಹೇಳುವ ರೀತಿಯಲ್ಲಿ ಕಥೆಯ ತಂತ್ರವಿದೆ. ಆಸ್ಪತ್ರೆಯ ದುಸ್ಥಿತಿಯ ಚಿತ್ರಣ ನೀಡುವ ಚದುರಂಗರ 'ಶವದ ಮನೆ' ಕತೆಯ ತಂತ್ರದ ಜತೆ ಈ ತಂತ್ರವನ್ನು ಹೋಲಿಸಿಕೊಳ್ಳಬಹುದು.

ಈ ಕತೆಯಲ್ಲಿ ಹಲವು ಹೆಣಗಳು ತಾವು ಬದುಕಿದ್ದಾಗಿನ ಕತೆ ಹೇಳುತ್ತವೆ. ಅವುಗಳಲ್ಲಿ ತನ್ನ 13ನೇ ವಯಸ್ಸಿಗೆ ಪತಿದೇವನನ್ನು ಕಳೆದುಕೊಂಡು ವಿಧವೆಯಾದ ಹೆಂಗಸು ಗಂಡಸರಿಗೆ ಕೇವಲ ಚಿನ್ನಾಟಕ್ಕೆ ಬೇಕಾಗುವ ಹೆಂಗಸಿನ ಮಾನಸಿಕ ಸ್ಥಿತಿಯನ್ನು ವಿವರಿಸುತ್ತಾಳೆ. ''ಸತಿ ಸಹಗಮನ ಪದ್ಧತಿ ಇದ್ದಾಗ ವಿಧವೆಯರು ಒಂದೇ ಸಲ ಬೆಂಕಿಗೆ ಬಿದ್ದು ಸಾಯುತ್ತಿದ್ದರು. ಈಗ ಪ್ರತಿ ವಿಧವೆಯೂ ಪ್ರತಿದಿನವೂ ಬೆಂದು ಕೊರಗಿ ಸಾಯುವ ಹಿಂಸೆ. ಈ ದೇಶದ ಮನೆ ಮನೆಯಲ್ಲೂ ವಿಧವೆಯರು ಬೆಂದು ಬೆಂದು ಸಾಯುತ್ತಿದ್ದಾರೆ. ಬೆಂಕಿಯ ರೂಪ ಮಾತ್ರ ಬೇರೆ. ಅದು ಚಿತಾನಲ, ಇದು ವ್ಯಥಾನಲ,'' ಎನ್ನುತ್ತಾಳೆ. ವ್ಯಥೆಯ ಬೆಂಕಿಯನ್ನು 'ವ್ಯಥಾನಲ' ಮಾಡುವುದು ಪಾವೆಂ 'ಅನುವಾದ ಪ್ರತಿಭೆ. ಅವರು ಸಂಸ್ಕೃತದಿಂದ ಅನುವಾದಿಸಿರುವ 'ಸುಭಾಷಿತ ಚಮತ್ಕಾರ' ಎಂಬ ಕೃತಿಯೂ ಕನ್ನಡದ ಸ್ವಂತ ರಚನೆ ಅನಿಸುವಷ್ಟು ಸೊಗಸಾಗಿದೆ.

ಪಾವೆಂ 1942ರಲ್ಲಿ ಹುಬ್ಬಳ್ಳಿಗೆ ಹೋದ ಬಳಿಕ ತಮ್ಮ 35ನೇ ವಯಸ್ಸಿನಲ್ಲಿ ಈ ಕೃತಿಯನ್ನು ಅನುವಾದಿಸಿದ್ದಾರೆ. 'ವಾಸನಾ' ಕೃತಿಯ ತಂತ್ರ, ಅಂತರಂಗ ಶೋಧನೆ, ಒಳತೋಟಿಯ ಕಥನಗಳಿಗೆ ಪೂರಕವಾಗಿರುವ ನವ್ಯ ಸಾಹಿತ್ಯದ ಬಗೆಗೂ ಮುಂದೆ ಪಾವೆಂ ಅವರಿಗೆ ಆಸಕ್ತಿ ಬೆಳೆಯಿತು. ಪತ್ರಿಕೋದ್ಯಮದಲ್ಲಿ ಹಲವು ರೀತಿಯ ಅನುವಾದಗಳನ್ನು ಅವರು ಮಾಡಬೇಕಾಗಿ ಬಂದಿರಬಹುದಾದರೂ, ಸಾಹಿತ್ಯ ಕೃತಿಗಳ ಅನುವಾದಗಳಲ್ಲಿ ಅವರ ಆಯ್ಕೆಯಲ್ಲಿ ತಮ್ಮದೇ ಆದ ಅಭಿರುಚಿ ಇತ್ತು ಎಂಬುದು ಮುಖ್ಯ. 'ವಾಸನಾ' ಕೃತಿಯ ಎರಡನೇ ಮುದ್ರಣಕ್ಕೆ ಮುನ್ನುಡಿ ಬರೆದ ವಿಮರ್ಶಕ ಮುರಲೀಧರ ಉಪಾಧ್ಯರು ಪಾ.ವೆಂ. ಅವರ ಆಯ್ಕೆಯೂ ಒಂದು ವಿಮರ್ಶೆ ಹಾಗೂ ಅವರ ಚಿಂತನಾ ಕ್ರಮಕ್ಕೆ ಹಿಡಿದ ಕನ್ನಡಿ ಎಂಬುದನ್ನು ಸೂಚಿಸುತ್ತಾರೆ.

ಪಾವೆಂ ಬಾಲ್ಯದಲ್ಲಿ ಅತ್ಯಂತ ಪ್ರತಿಭಾವಂತ ವಿದ್ಯಾರ್ಥಿ. ಕುಟುಂಬಕ್ಕೆ ಏಕಮಾತ್ರ ಪುತ್ರ. ಬಾಲ್ಯದಲ್ಲೇ ತನ್ನ ತಂದೆಯನ್ನು ಕಳೆದುಕೊಂಡುದರಿಂದ ಕುಟುಂಬ ನಿರ್ವಹಣೆಗಾಗಿ ಹಲವು ಸಣ್ಣ ಪುಟ್ಟ ಕೆಲಸಗಳನ್ನು ಮಾಡಬೇಕಾಯಿತು. ಮನೆಯಲ್ಲಿ ಕಡು ಬಡತನ. ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಕಚೇರಿ ಕೆಲಸಕ್ಕೆ ಸೇರಿದರು. ಆ ಸಂಸ್ಥೆಯ ಕರ್ಮವೀರ ವಾರಪತ್ರಿಕೆಯ ಸಂಪಾದಕರು ವೈಯಕ್ತಿಕ ಕಾರಣಕ್ಕಾಗಿ ಆರು ತಿಂಗಳು ರಜೆ ಮೇಲೆ ತೆರಳಬೇಕಾಗಿ ಬಂದಾಗ ದೊರೆತ ಅವಕಾಶದಲ್ಲಿ ಪಾವೆಂ ಪ್ರತಿಭೆ ಗೋಚರವಾಯಿತು. ಮುಂದೆ ಅವರು ಕರ್ಮವೀರ ಪತ್ರಿಕೆಯಲ್ಲಿ (1947-55) ಕೆಲಸ ಮಾಡಿ ಕಸ್ತೂರಿ ಪತ್ರಿಕೆ (1956-75)ಯ ಸ್ಥಾಪಕ ಸಂಪಾದಕರಾಗಿ ರೀಡರ್ಸ್ ಡೈಜೆಸ್ಟ್ ಮಾದರಿಯಲ್ಲಿ ಕನ್ನಡಕ್ಕೊಂದು ಸಂಗ್ರಹಯೋಗ್ಯ ಪತ್ರಿಕೆಯನ್ನು ಸಂಪಾದಿಸಿದರು. ಅಧ್ಯಯನಶೀಲ ಪಾಂಡಿತ್ಯ, ಹಲವು ಆಸಕ್ತಿಗಳ ವೈವಿಧ್ಯ, ಸಂವೇದನಾಶೀಲತೆ, ವಿನೋದ ವಿಚಾರ, ವಿಮರ್ಶಾ ಪ್ರಜ್ಞೆ ಹೀಗೆ ಹಲವು ಶಕ್ತಿಗಳು ಒಂದೆಡೆ ಸೇರಿದ ಪ್ರತಿಭೆ ಅವರದು. 'ನನ್ನ ದೃಷ್ಟಿಯಲ್ಲಿ ಧರ್ಮ', 'ಮಾನವ ಪ್ರವೃತ್ತಿ ಮತ್ತು ಧರ್ಮ', 'ಬ್ರಾಹ್ಮಣರೇನು ಮಾಡಬೇಕು' ಮೊದಲಾದ ಅವರ ದೀರ್ಘ ಲೇಖನಗಳು ಬಹುಚರ್ಚಿತವಾಗಿವೆ ಮತ್ತು ಕಿರುಹೊತ್ತಗೆಗಳಾಗಿವೆ. 'ಹಿಂದೂ-ಮುಸ್ಲಿಂ ಮತ್ತು ಇತರ ಕತೆಗಳು' ಎಂಬೊಂದು ಕಥಾ ಸಂಕಲನವಿದೆ. ಅವರ ಕವನ ಸಂಕಲನಗಳಲ್ಲಿ 'ಹೌಸಿಂಗ್ ಕಾಲೊನಿ' ಹಾಗೂ 'ಪೆಂಗೋಪದೇಶಗಳು' ಎಂಬವು ತಕ್ಷಣ ನೆನಪಿಗೆ ಬರುತ್ತಿವೆ. (ಲಂಕೇಶರು ಸಂಪಾದಿಸಿದ 'ಅಕ್ಷರ ಹೊಸ ಕಾವ್ಯ'ದಲ್ಲೂ ಇವರ ಕವನಗಳಿವೆ)



ಅವರ ಹೌಸಿಂಗ್ ಬೋರ್ಡಿನ ಮನೆಗಳ ಕವನ ವಿನೋದಪೂರ್ಣವಾದರೂ ಆಧುನಿಕ ಬದುಕಿನ ಏಕತಾನತೆ ಹಾಗೂ ಅಸಂಗತ ಸ್ವರೂಪದ ಸೂಕ್ಷ್ಮ ದುರಂತವನ್ನು ಸೂಚಿಸುತ್ತದೆ. ಒಂದೇ ರೀತಿ ಕಾಣುವ ಹೌಸಿಂಗ್ ಬೋರ್ಡಿನ ಮನೆಗಳಲ್ಲಿ ಒಬ್ಬಾತ ವಿದ್ಯುಚ್ಛಕ್ತಿ ಇಲ್ಲದ ಒಂದು ದಿನ ತಪ್ಪಿನಿಂದಾಗಿ ತನ್ನದಲ್ಲದ ಇನ್ನೊಬ್ಬನ ಮನೆಗೆ ಹೋಗುತ್ತಾನೆ. ಅಲ್ಲಿ ಕಂದೀಲು ಬೆಳಕಿನಲ್ಲಿ ಮನೆಯ ಸೋಫಾ, ಆಹಾರ, ಬಚ್ಚಲು ಮನೆ, ಟೂತ್‌ಪೇಸ್ಟ್ ಎಲ್ಲವೂ ತನ್ನ ಮನೆ ಹಾಗೆಯೇ. ರಾತ್ರಿ ಮಲಗುವಾಗ ಪಕ್ಕದ ಪತ್ನಿಯು ತನ್ನವಳಲ್ಲ ಅನಿಸದಷ್ಟು ಎಲ್ಲವೂ ಏಕರೂಪ. ಅದು ಬೇರೊಂದು ಮನೆ ಅನಿಸದ ಏಕತಾನತೆಯ ಏಕರೀತಿಯ ಬದುಕಿನಲ್ಲಿ ಜೀವದಾಯಿ ಸೆಲೆ ಇಲ್ಲದೆ, ಬದಲು ಯಾಂತ್ರಿಕವಾಗುವ ಸ್ಥಿತಿಯನ್ನದು ಸೂಚಿಸುತ್ತದೆ. ಇದರ ಜೊತೆ, 'ಕವಿ- ವಿಜ್ಞಾನಿಗೆ', ನೆಹರೂ ತೀರಿಕೊಂಡಾಗ ಬರೆದ 'ಬದಲಾವಣೆ' ಮೊದಲಾದವೂ ನೆನಪಾಗುವ ಕವಿತೆಗಳೇ.

ಹರಟೆ ಹಾಗೂ ವಿಡಂಬನೆಗಳಿಗೆ ಸೂಕ್ಷ್ಮ ವಿವೇಚನೆಯ ಹಾಗೂ ಅಧ್ಯಯನಶೀಲತೆಯ ಹೊಳಪಿನ ಸೌಂದರ್ಯ ನೀಡಿದ ಪಾವೆಂ ಅವರ ಶೈಲಿ ಬಹು ಜನಪ್ರಿಯ. ಆದರೆ ಈಗಲೂ ಜನ ಮತ್ತೆ ಮತ್ತೆ ನೋಡುವ ಕೃತಿಗಳಲ್ಲಿ ಅವರ 'ಪದಾರ್ಥ ಚಿಂತಾಮಣಿ' ಮುಖ್ಯವಾಗಿದೆ. ಕನ್ನಡದಲ್ಲಿ ಪದ ಚರಿತ್ರೆಯನ್ನು ಜನರಿಗೆ ಆಕರ್ಷಣೆಯಾಗುವಂತೆ ಬರೆದ ಮೊದಲಿಗರಲ್ಲಿ ಪಾವೆಂ ಒಬ್ಬರು. ಆ ಮೊದಲು 'ಇಸಿಲ' ಮೊದಲಾದ ಪದಗಳ ಸಂಶೋಧನೆಗಳಲ್ಲಿ ತೊಡಗಿದ್ದ ಡಿ.ಎಲ್. ನರಸಿಂಹಾಚಾರ್ ಮೊದಲಾದವರ ಒಂದು ಮಾರ್ಗವಿತ್ತು. ಮದ್ರಾಸು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದ ಡಾ. ಶಂಕರ ಕೆದಿಲಾಯರು ರಚಿಸಿದ ಕನ್ನಡದಲ್ಲಿ ಸೇರಿಕೊಂಡಿರುವ ಅರಬ್ಬಿ ಪಾರಸೀಕ ಪದಗಳ ವಿವೇಚನೆಯ ಕೃತಿ ಇಂಗ್ಲಿಷ್‌ನಲ್ಲಿ ರಚಿತವಾಗಿದೆ. ಪ್ರೊ. ಜಿ. ವೆಂಕಟಸುಬ್ಬಯ್ಯನವರ 'ಇಗೋ ಕನ್ನಡ'ವೂ ಪ್ರಸಿದ್ಧವಾಗಿದೆ. ಆದರೆ ಪಾವೆಂ ಅವರ ಪದಶೋಧ ಚಕ್ಕನೆ ಹೊಳೆಯಿಸಿ ಕಾಣಿಸುತ್ತದೆ. ಅವುಗಳನ್ನು ಒಂದೆರಡು ಉದಾಹರಣೆಗಳಿಂದ ಗಮನಿಸಬಹುದು.

'ರೈತ' ಎಂಬ ಬಹು ಜನಪ್ರಿಯ ಕನ್ನಡ ಪದದ ಮೂಲ ಅರಬ್ಬಿ ಎಂಬುದು ಅವುಗಳಲ್ಲಿ ಒಂದು. 'ರ ಅಯ್ಯತ್' ಎಂದರೆ ಅರಬ್ಬೀ ಭಾಷೆಯಲ್ಲಿ ಅಧೀನ ಕೃಷಿಕ ಅಥವಾ ಕೇವಲ ಪ್ರಜೆ ಎಂದು ಅರ್ಥ. ಅದು ಹೇಗೆ 'ರೈತ'ನಾಯಿತು, ಇಂಗ್ಲಿಷ್ ಭಾಷೆಗೆ 1665ರಲ್ಲಿ ಮೊದಲು ಪ್ರವೇಶಿಸಿತು, ಇತ್ಯಾದಿ ವಿವರಗಳು ಪದಾರ್ಥ ಚಿಂತಾಮಣಿಯಲ್ಲಿದೆ. 'ಸೀರೆ' ಎಂಬ ಪದ ಸಂಸ್ಕೃತದ 'ಚೀರ' ಶಬ್ದದ ತದ್ಭವ ಎಂದು ಕೇಶಿರಾಜ ಹೇಳಿದ ಹಿನ್ನೆಲೆಯಲ್ಲಿ ಸಾಢಿ, ಸಾರಿ, ಶಾಟಿ, ಧೋತ್ರ, ಇತ್ಯಾದಿ ಪದಗಳ ಹಿನ್ನೆಲೆಯಲ್ಲಿ ವಿವೇಚನೆ ಬೆಳೆಯುತ್ತದೆ. ಹಾಗೆಯೇ ದಿನ ಬಳಕೆಯ ಶುಚಿ ವಸ್ತುವಾದ 'ಸಾಬೂನು' ಅರಬ್ಬಿ ಪರ್ಶಿಯನ್‌ಗಳ 'ಸಾಬುನ್' 'ಸಾಬೂನ್'ನಿಂದ ಎರವಲಾದ ಕ್ರಮವೂ ಕುತೂಹಲಗೊಳಿಸುತ್ತದೆ. ಬೇಂದ್ರೆಯವರೇ 'ಸಾಬಾಣದ ಬಿಳುಪಿನ ಕಾಣದ ಕಿರುಗೆಜ್ಜೆ ಕಾಲೊಳಗಿತ್ತೊ' ಎಂದು ಕುರುಡು ಕಾಂಚಾಣವನ್ನು ವಿವರಿಸಿದ ಬಳಿಕ ಅದು ಕನ್ನಡದ ಪದವೇ ಸರಿ. 'ಪಿಸ್ತೂಲ್' ಹಾಗೂ 'ಇಸ್ತ್ರಿ' ಪದಗಳು ಹೇಗೆ ಪೋರ್ಚುಗೀಸಿನಿಂದ ಕನ್ನಡದೊಳಕ್ಕೆ ಸೇರಿಕೊಂಡವು ಎಂಬುದನ್ನು ಅವರು ವಿವರಿಸುವ ಕ್ರಮವೂ ಸ್ವಾರಸ್ಯಕರ. ಪಾವೆಂ ಅವರ ಸ್ಫೂರ್ತಿ ರೀಡರ್ಸ್ ಡೈಜೆಸ್ಟಿನಿಂದ ಬಂದಿರಬಹುದಾದರೂ ಅವರ ಕೊಡುಗೆ ದೊಡ್ಡದೊಂದು ಆಕರವೇ ಆಗಿದೆ. ಪ್ರತಿ ಪದಕ್ಕೂ ಇರುವ ಅದರದ್ದೇ ಆದ ಚರಿತ್ರೆ, ಐತಿಹ್ಯ, ಕತೆಗಳು ಕನ್ನಡ ಓದುಗರಿಗೆ ಒಂದೇ ಕಡೆ ಸಿಗುವಂತಾಗಿದೆ.

ಹಾಮಾ ನಾಯಕರು ಹೇಳಿರುವ ಹಾಗೆ, ''ಪದಾರ್ಥ ಚಿಂತಾಮಣಿ ಅಧ್ಯಯನ ಪೂರ್ಣ ಪುಸ್ತಕ. ಸಾಹಿತ್ಯ ಹಾಗೂ ಸಾಹಿತ್ಯೇತರ ಕ್ಷೇತ್ರಗಳಲ್ಲಿ ಆಚಾರ್ಯರು ಪಡೆದಿರುವ ಅಪಾರ ತಿಳಿವಳಿಕೆಗೆ ಅವುಗಳು ಸಾಕ್ಷಿ. ತೋರುವ, ಅಂತರ್ಯದಲ್ಲಿ ಬಹುಶ್ರುತ ಪಾಂಡಿತ್ಯವನ್ನು ಅಡಗಿಸಿಟ್ಟುಕೊಂಡಿರುವ ಪದಾರ್ಥ ಚಿಂತಾಮಣಿ ಪುಸ್ತಕಗಳಿಂದ ಆಚಾರ್ಯರು ಕನ್ನಡದ 'ವರ್ಡ್‌ಲೋರ್' ಪದ ಪರಂಪರೆ ಅಧ್ಯಯನಕ್ಕೆ ನಾಂದಿ ಹಾಡಿದ್ದಾರೆ,'' ಎಂದು ಹೇಳುತ್ತಾರೆ.

ವಿಮರ್ಶಕರಾಗಿಯೂ ಪಾವೆಂ ಆಧುನಿಕ ಸಂವೇದನೆಯವರು ಎಂದು ನನಗೆ ಅನಿಸಲು ಮೂಲ ಕಾರಣ 'ಕಾರಂತ: ಸಾಹಿತ್ಯ ದರ್ಶನ' ಎಂಬ ಅವರ ಬರಹ. ಉಡುಪಿಯ ಗೋವಿಂದ ಪೈ ಸಂಶೋಧನ ಕೇಂದ್ರದವರು, ಕುವೆಂಪು, ಬೇಂದ್ರೆ ಹಾಗೂ ಕಾರಂತರ ಬಗ್ಗೆ ಸುಜನಾ, ಬನ್ನಂಜೆ ಗೋವಿಂದಾಚಾರ್ಯ ಹಾಗೂ ಪಾ.ವೆಂ. ಆಚಾರ್ಯ ಅವರಿಂದ ವಿಶೇಷ ಉಪನ್ಯಾಸಗಳನ್ನು ಏರ್ಪಡಿಸಿದ್ದರು. ಅವುಗಳ ಲಿಖಿತ ರೂಪವನ್ನು ಗೋವಿಂದ ಪೈ ಸಂಶೋಧನಾ ಕೇಂದ್ರದ ಪರವಾಗಿ 1980ರಲ್ಲಿ ಮೈಸೂರಿನ ಗೀತಾ ಬುಕ್ ಹೌಸ್ ಪ್ರಕಟಿಸಿದೆ.

ಸಾಹಿತ್ಯ ಕಾರಂತರ ಬದುಕಿನಲ್ಲಿ ಕಂಡದ್ದರ ಫಲ ಮಾತ್ರವಲ್ಲ; ಅವರು ಬದುಕಲು ಯತ್ನಿಸಿದ ಬಗೆಯ ಫಲವೂ ಅದಾಗಿದೆ ಎಂಬ ತಿಳಿವಳಿಕೆಯಿಂದಲೇ ಪಾವೆಂ ಕಾರಂತರ ಸಾಹಿತ್ಯವನ್ನು ಪ್ರವೇಶಿಸಿದರೂ ತಮ್ಮ ತಾತ್ವಿಕ ವಿಮರ್ಶಾ ಮಾನದಂಡಗಳಿಂದ ಕಾರಂತರ ಸಾಹಿತ್ಯದ ವಸ್ತುನಿಷ್ಠ ಮೌಲ್ಯಮಾಪನಕ್ಕೆ ಅವರು ಹಿಂದೇಟು ಹಾಕುವುದಿಲ್ಲ. ಅವರ ಕಾದಂಬರಿಗಳ ಪರಸ್ಪರ ತೌಲನಿಕ ವಿಶ್ಲೇಷಣೆಯೂ ಕಾರಂತರ ತಾತ್ವಿಕತೆಯ ಸಮಗ್ರ ದರ್ಶನಕ್ಕೆ ಪೂರಕವೇ ಆಗಿದೆ. ಹಾಗೆಯೇ ಕಾರಂತರ ಕಾದಂಬರಿಗಳ ತಂತ್ರ ವೈವಿಧ್ಯಗಳ ಕಡೆಗೂ ಗಮನ ಸೆಳೆಯುತ್ತಾರೆ. ಕಾರಂತರು ಮೂಲಭೂತವಾಗಿ ಶಿಕ್ಷಕರು (teacher) ಮತ್ತು ನೀತಿವಾದಿಗಳು (moralist). ಆದರೆ ಅದು ಬಹಳ ಸಂಕೀರ್ಣ ಸ್ವರೂಪದ ಕಾಣ್ಕೆಯಾಗಿ ಕೆಲಸ ಮಾಡುವ ಕ್ರಮವನ್ನು ವಿವರಿಸುತ್ತಾರೆ.

ಕಾರಂತರು ಆದರ್ಶವಾದಿಗಳೇ ಹೊರತು ರೊಮ್ಯಾಂಟಿಕರಲ್ಲ ಎಂಬುದು ಕ್ಲಾಸಿಸಿಸಂ ಹಾಗೂ ರೊಮ್ಯಾಂಟಿಕ್ ಚಿಂತನೆಗಳ ನಡುವಿನ ವ್ಯತ್ಯಾಸಗಳ ಮೂಲಕ ವಿವರಿಸಿರುವುದೂ ಕನ್ನಡ ವಿಮರ್ಶಾ ಸಂದರ್ಭದಲ್ಲಿ ಮುಖ್ಯವಾದೊಂದು ಅಂಶವಾಗಿದೆ. ದೈವಭಕ್ತಿಯಲ್ಲಿ ಕಾರಂತರು ಗೌರವಿಸುವ ಪ್ರಾಮಾಣಿಕತೆಗಿಂತ ಹೆಚ್ಚಿನ ಅಂಶಗಳು ಇವೆ ಎಂಬುದನ್ನು ತಮ್ಮ ಭಿನ್ನ ನಿಲುವಿನಲ್ಲಿ ಪಾವೆಂ ವಿವರಿಸುತ್ತಾರೆ. ಕಾರಂತರ ವಿಷಯದಲ್ಲಿ ಅತಿ ಮಹತ್ವದ್ದು ಅವರ ಕೆಚ್ಚೆದೆಯ ಅನ್ವೇಷಣೆ ಮತ್ತು ಅದರಲ್ಲಿ ಸಿದ್ಧವಾದ್ದನ್ನು ಸ್ವೀಕರಿಸಿ ಬಾಳುವ ಧೈರ್ಯ. ಒಂದು ಜನಾಂಗದ ಬಾಳನ್ನು ತಿದ್ದುವುದಕ್ಕೆ ಶ್ರಮವಹಿಸಿದ ಕಾರಂತರು, ಬಾಳಿನ ಆಚೆಗೆ ಏನೂ ಇಲ್ಲದಿದ್ದರೂ ಬಾಳಿದ್ದಕ್ಕೆ ಸಾರ್ಥಕತೆ ಇದೆಯೆಂದು ಕಲಿಸಿದ ಕ್ರಮವನ್ನು ಪಾವೆಂ ಅವರ ಕೃತಿಗಳ ವಿಶ್ಲೇಷಣೆಗಳಲ್ಲಿ ಕಾಣಿಸಿದ್ದಾರೆ. ಬದುಕು ಹೇಗೆ ಶಾಶ್ವತವಲ್ಲವೋ ಹಾಗೆ ತಮ್ಮ ಕೃತಿಗಳು ಅಜರಾಮರವಲ್ಲವೆಂದು ಕಾರಂತರು ಒಮ್ಮೆ ಹೇಳಿದ್ದರು. ಅವರ ನಿರಹಂಭಾವ ಮಾತ್ರವಲ್ಲ ಕಾರಂತರು ತಮ್ಮ ತತ್ವಜ್ಞಾನವನ್ನು ತಾವೇ ಅರಗಿಸಿಕೊಂಡಿರುವುದರ ಹೆಗ್ಗುರುತಾಗಿ ಪಾವೆಂ ಅವರಿಗೆ ಕಂಡಿದೆ.

ಪಾವೆಂ ಅವರಿಗೆ ರಾಷ್ಟ್ರೀಯ ಮಟ್ಟದಲ್ಲಿ ಪತ್ರಿಕೋದ್ಯಮಕ್ಕಾಗಿ ಬಿಡಿ ಗೋಯೆಂಕಾ ಪ್ರಶಸ್ತಿ (1992) ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ (1981) ರಾಜ್ಯ ಪ್ರಶಸ್ತಿ (1989) ಕರ್ನಾಟಕ ಸಾಹಿತ್ಯ ಅಕಾಡೆಮಿ ಡೈಮಂಡ್ ಜ್ಯುಬಿಲಿ ಮೆಡಲ್ (1977) ಮೊದಲಾದ ಪ್ರಶಸ್ತಿಗಳು ಸಂದಿವೆ. 'ಪಾವೆಂ ಕಸ್ತೂರಿ' ಎಂಬ ಅಭಿನಂದನಾ ಗ್ರಂಥವನ್ನು ಡಾ.ಜಿ.ಎಸ್.ಭಟ್ಟರು 1977ರಲ್ಲಿ ಸಂಪಾದಿಸಿದ್ದಾರೆ. ಅವರ ಶತಮಾನೋತ್ಸವ (2015)ದ ಅಂಗವಾಗಿ ವಿಶೇಷ ಸಭೆ ಸಮಾರಂಭಗಳು ನಡೆದಂತಿಲ್ಲ. ಆದರೆ ಅವರು ಕನ್ನಡಕ್ಕೆ ನೀಡಿದ ಕೊಡುಗೆಯನ್ನು ಮರೆಯುವಂತಿಲ್ಲ. ಹಲವು ಪುಸ್ತಕಗಳ ಪ್ರಕಟಣೆಗಳಿಗೆ ಮುಂದಾಗಿರುವ ಸರಕಾರಿ ಸಂಸ್ಥೆಗಳು ಅವರ ಅಲಭ್ಯ ಕೃತಿಗಳನ್ನು ಪುನಃ ಅಚ್ಚು ಹಾಕಿಸಿ ಹೊಸ ಓದುಗರಿಗೆ ತಲುಪಿಸುವ ಕೆಲಸವನ್ನು ಈಗ ಮಾಡಬೇಕಾಗಿದೆ.

ದಿನಗಳು, ಶ್ರೀ ಚೈತನ್ಯ ಟ್ರಾವಲ್, ಜಾನಕಿರಾಮ್ ಕಾಂಪ್ಲೆಕ್ಸ್, 2-4, ಬುಲ್‌ಟೆಂಪಲ್ ರಸ್ತೆ ಚಾಮರಾಜಪೇಟೆ, ಬೆಂಗಳೂರು-18, ಫೋನ್: 609088. ಶ್ರೀ ಸುಧಾ ಟ್ರಾವಲ್ಸ್, ಗಾಂಧಿಬಜಾರ್, ಫೋನ್: 629289.

7.5.92,14.5.92 ರಿಂದ 3 ದಿನ ಹೊರನಾಡು, ಶೃಂಗೇರಿ, ಕೊಲ್ಲೂರು, ಉಡುಪಿ, ಧರ್ಮಸ್ಥಳ, ಸುಬ್ರಮಣ್ಯ, 9.5.92, 16.5.92 ರಿಂದ 9 ದಿನ ದಕ್ಷಿಣ ಭಾರತ, ಪಾಂಡಿಚೇರಿ, ಚಿದಂಬರ, ಶ್ರೀರಂಗಂ, ರಾಮೇಶ್ವರ, ಕನ್ಯಾಕುಮಾರಿ, ಮದುರೈ ಇತ್ಯಾದಿ. 14.5.92 ರಿಂದ ಶ್ರೀಶೈಲ, ಮಹಾನಂದಿ, ಮಂತ್ರಾಲಯ, ಹೈದರಾಬಾದ್, 28.5.92, 6.6.92 ರಿಂದ 16 /22 ದಿನಗಳು ಉತ್ತರ ಭಾರತ, ದೆಹಲಿ, ಆಗ್ರಾ, ಮಥುರಾ, ಕಾಶಿ, ಗಯಾ, ಪ್ರಯಾಗ, ಹರಿದ್ವಾರ, ಬದ್ರಿನಾಥ್, ಕೇದಾರ್‌ನಾಥ್, ಇತ್ಯಾದಿ. ರಾವ್ ಟೂರಿಸ್ಟ್ ಕಾರ್ಪೋರೇಷನ್, ಸಂಪಿಗೆ ರಸ್ತೆ, 13ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು-3. ಫೋನ್: 361788 /346475.

28.5.92 ರಿಂದ 21 ದಿನಗಳು ಬದರಿ, ಕೇದಾರ್, ಕಾಶಿ, ಗಯಾ, ಪ್ರಯಾಗ, ದೆಹಲಿ, ಆಗ್ರಾ ಇತ್ಯಾದಿ. ಊಟ ತಿಂಡಿ ವಸತಿ ಸೌಲಭ್ಯಯುಕ್ತ ಉತ್ತಮ ಪ್ರವಾಸ. ಶಾಸ್ತ್ರೀಸ್ ಟ್ರಾವಲ್ಸ್, ಡಿ.ವಿ.ಜಿ. ರಸ್ತೆ, ಬಸವನಗುಡಿ, ಬೆಂಗಳೂರು-4, ಫೋನ್: 600941.

## ಏಜೆಂಟರು ಬೇಕಾಗಿದ್ದಾರೆ

1993ರ ಕ್ಯಾಲೆಂಡರುಗಳು, ಡೈರಿ. ಕೀ-ಚೈನ್‌ಗಳು, ನವೀನ ವಸ್ತುಗಳು, ಕೊಡುಗೆಯ ಚೀಲಗಳು ಇವಕ್ಕೆ ಕಮೀಷನ್ ಏಜೆಂಟರ ಬೇಕಾಗಿದ್ದಾರೆ. ಶಕ್ತಿ ಟ್ರೇಡಿಂಗ್ ಕಾರ್ಪೋರೇಷನ್ ಪಿ. ಬಿ. ನಂ. 95, ಶಿವಕಾಶಿ- 626 123.

ನಮ್ಮ 1993ರ ಕ್ಯಾಲೆಂಡರ್‌ಗಳು. ಕೀಚೈನ್‌ಗಳು, ಡೈರಿಗಳು, ಸ್ಟಿಕರ್‌ಗಳು ಮತ್ತು ನವೀನವಸ್ತುಗಳಿಗೆ ಏಜೆಂಟರು ಬೇಕಾಗಿದ್ದಾರೆ. ಗರಿಷ್ಠ ಕಮೀಷನ್ ಮತ್ತು ಬೋನಸ್. ವಿಘ್ನೇಷ್ ಆಫ್‌ಸೆಟ್ ಪ್ರಿಂಟರ್ಸ್, ಪೋಸ್ಟ್ ಬಾಕ್ಸ್ ನಂ.250 ಶಿವಕಾಶಿ-626123.

**GULBARGA UNIVERSITY, GULBARGA**

No.GUG :ADM-I :92-93 /434
Administrative Office,
Date : 29.4.1992

**NOTIFICATION**

In continuation of this office Notification Nos. i) GUG /ADM-I :91-92 /6262 ii) GUG :ADM-I :91-92 /6263 dt.30.3.1992 the last date for receipt of applications for various vacant teaching posts is extended upto 11.5.1992.

KPG-294 REGISTRAR

1985-86ರಲ್ಲಿ ದೂರದರ್ಶನದ ಜಾಹಿರಾತು ಆದಾಯ 60.2 ಕೋಟಿ ರೂ.ಗಳಾಗಿತ್ತು.

ಏತನ್ಮಧ್ಯೆ 1990-91 ಸಾಲಿನಲ್ಲಿ ಆಕಾಶವಾಣಿ ವಿವಿಧ ಭಾರತಿ ಮತ್ತಿತರ ಜಾಲದ ಜಾಹಿರಾತು ಮೂಲಕ 39.30 ಕೋಟಿ ರೂ. ಆದಾಯ ಗಳಿಸಿದೆ.

ಇದೇ ಅವಧಿಯಲ್ಲಿ 54 ಅಲ್ಪಶಕ್ತಿಯ ಹಾಗೂ 41 ಮಧ್ಯಮ ಅಥವ ಷಾರ್ಟ್‌ವೇವ್ ಟ್ರಾನ್ಸ್‌ಮಿಟರ್‌ಗಳನ್ನು ಆಕಾಶವಾಣಿ ಸ್ಥಾಪಿಸುವ ನಿರೀಕ್ಷೆಯಿದೆ.

ಮುಂದಿನ ವರ್ಷ 17 ಚಲನಚಿತ್ರಗಳನ್ನು ನಿರ್ಮಿಸುವ ನಿರೀಕ್ಷೆ ಅವುಗಳಲ್ಲಿ 8 ಪೂರ್ಣಗೊಂಡಿವೆ.

ವರ್ಷಕ್ಕೆ 35-45 ಚಿತ್ರಗಳನ್ನು ಆಮದುಗೊಳಿಸುತ್ತಿರುವ ಎನ್‌ಎಫ್‌ಡಿಸಿ, ವಿಶ್ವದ ನೂರು ದೇಶಗಳಿಗೆ ಚಿತ್ರಗಳನ್ನು ರಫ್ತು ಮಾಡುತ್ತಿದ್ದು, 1991-92ರಲ್ಲಿ ಅದರ ಪ್ರಮಾಣ 1.63 ಕೋಟಿ ರೂ.ಗೇರಿದೆ.

# ಪಾ.ವೆಂ. ಆಚಾರ್ಯ ನಿಧನ

( ಒಂದನೇ ಪುಟದಿಂದ )

ಸಂಪಾದಕರಾಗಿ, ಪ್ರಬಂಧಕಾರರಾಗಿ, ಅಂಕಣಕಾರರಾಗಿ, ವಿಡಂಬನಕಾರರಾಗಿ ಕನ್ನಡ ಪತ್ರಿಕಾ ಕ್ಷೇತ್ರದಲ್ಲಿ ಹೊಸ ಪ್ರವೃತ್ತಿಯನ್ನೇ ಹುಟ್ಟುಹಾಕಿದರು.

ಅವರ 'ಪ್ರಹಾರ', 'ಲೋಕದ ಡೊಂಕು', 'ವಿಪರೀತ', 'ವಕ್ರದೃಷ್ಟಿ' ವಿಶಿಷ್ಟ ವಿಡಂಬನಾ ಪ್ರಕಾರಕ್ಕೆ ಸೇರಿದ ವಿಶಿಷ್ಟ ಕೃತಿಗಳು. 'ಸುಭಾಷಿತ ಚಮತ್ಕಾರ', 'ಪದಾರ್ಥ ಚಿಂತಾಮಣಿ' ಅವರ ವಿದ್ವತ್ತಿಗೆ ಅನ್ವೇಷಣೆಗೆ ಹಿಡಿದ ಕನ್ನಡಿ.

1915 ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಉಡುಪಿಯಲ್ಲಿ ಹುಟ್ಟಿದರು. ಕಡುಬಡತನದಲ್ಲಿ ಬೆಳೆದು ಬದುಕಿನುದ್ದಕ್ಕೂ ಹೋರಾಟಗಳನ್ನು ಎದುರಿಸಿದರು.

ಎಸ್.ಎಸ್.ಎಲ್.ಸಿ.ವರೆಗೆ ಔಪಚಾರಿಕ ಶಿಕ್ಷಣ ಪಡೆಯುವುದು ಅವರಿಗೆ ಸಾಧ್ಯವಾಯಿತು. ಜೀವನದುದ್ದಕ್ಕೂ ಜಿಜ್ಞಾಸುವಾಗಿದ್ದ ಆಚಾರ್ಯರು ಬದುಕಿನ ವಿಶ್ವವಿದ್ಯಾಲಯದಲ್ಲೇ ಎಲ್ಲ ಜ್ಞಾನ ಸಂಪತ್ತನ್ನು ಗಳಿಸಿದರು.

ಉದರಂಭರಣೆಗಾಗಿ ಮಾಸ್ತರಿಕೆ, ಗುಮಾಸ್ತಿಕೆ, ಹೊಟೆಲ್ ಬಿಲ್ ರೈಟರ್ ಹಾಗೂ ಮುದ್ರಣಾಲಯದ ವ್ಯವಸ್ಥಾಪಕ ಚಾಕರಿಗಳನ್ನು ಅವರು ಮಾಡಿದರಾದರೂ ನಿರಂತರ ಜ್ಞಾನದ ಅನ್ವೇಷಣೆ ನಡೆಸಿದರು.

ತಮ್ಮ ಹನ್ನೊಂದನೆಯ ವಯಸ್ಸಿನಲ್ಲಿಯೇ ಷಟ್ಪದಿಯಲ್ಲಿ ಪದ್ಯ ರಚನೆಗೆ ಕೈ ಹಾಕಿದ್ದರು.

1933 ರ ವೇಳೆಗಾಗಲೆ ಅವರ ಕವಿತೆಗಳು ರಾಷ್ಟ್ರಬಂಧು, ಜಯ ಕರ್ನಾಟಕ, ಪ್ರಬುದ್ಧ ಕರ್ನಾಟಕ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದವು. ಬೇಂದ್ರೆಯವರು ಕಟ್ಟಿದ್ದ 'ಗೆಳೆಯರ ಗುಂಪಿನ' ಸಂಪರ್ಕಕ್ಕೆ ಬಂದಿದ್ದು ಈ ದಿನಗಳಲ್ಲಿಯೇ.

ಮದ್ರಾಸಿನ ಹೊಟೆಲೊಂದರಲ್ಲಿ ಬಿಲ್ ರೈಟರ್ ಆಗಿದ್ದ ಆಚಾರ್ಯರು ದ್ವಿತೀಯ ಮಹಾಯುದ್ಧದ ದಿನಗಳಲ್ಲಿ ಅನಿವಾರ್ಯವಾಗಿ ಹುಬ್ಬಳಿಗೆ ಬರಬೇಕಾಯಿತು.

'ಸಂಯುಕ್ತ ಕರ್ನಾಟಕ' ದಿನಪತ್ರಿಕೆಯ ಮುದ್ರಣಾಲಯದ ಮೇಲ್ವಿಚಾರಕರಾದರು. ಮೊಹರೆ ಹನುಮಂತರಾಯರು ಆಚಾರ್ಯರ ಸೇವೆಯನ್ನು 'ಕರ್ಮವೀರ'ಕ್ಕೆ ಎರವಲು ಪಡೆದರು.

### ಉತ್ಕೃಷ್ಟ ಹಾಸ್ಯ

'ಕರ್ಮವೀರ'ದಲ್ಲಿ 'ಓದುಗರೊಡನೆ ಹರಟೆ' ಎಂಬ ಜನಪ್ರಿಯ ಅಂಕಣವನ್ನು 1950 ರಲ್ಲಿ ಆರಂಭಿಸಿ, 25 ವರ್ಷಗಳಿಗೂ ಹೆಚ್ಚು ಕಾಲ ಉತ್ಕೃಷ್ಟ ಹಾಸ್ಯವನ್ನು ಓದುಗರಿಗೆ ಉಣಬಡಿಸಿದರು. 'ಲಾಂಗೂಲಾಚಾರ್ಯ' ಕಾವ್ಯನಾಮದಲ್ಲಿ ಅವರು ಈ ಅಂಕಣವನ್ನು ಬರೆದರು. ಈ ಹರಟೆಗಳು 'ಪ್ರಹಾರ'ವೆಂಬ ಹೆಸರಿನಲ್ಲಿ ಪುಸ್ತಕವಾಗಿ ಪ್ರಕಟವಾಗಿ ಜನ ಮೆಚ್ಚುಗೆ ಗಳಿಸಿದವು.

ಅನಂತರ ಆರಂಭಿಸಲಾದ ಕನ್ನಡದ ಮೊಟ್ಟ ಮೊದಲ ಮಾಸಿಕ ಡೈಜೆಸ್ಟ್ 'ಕಸ್ತೂರಿ'ಯ ಮೊದಲ ಸಂಪಾದಕರಾದರು. 18 ವರ್ಷಗಳವರೆಗೆ ಅದರ ಸೂತ್ರಧಾರವಾಗಿ ಬೆಳೆಸಿದರು. ವಿಜ್ಞಾನ, ವೈದ್ಯಕೀಯ, ತಂತ್ರಜ್ಞಾನಗಳಂತಹ ಕ್ಲಿಷ್ಟ ವಿಚಾರಗಳನ್ನು ಕನ್ನಡದಲ್ಲಿ ಸರಳವಾಗಿ ನಿರೂಪಿಸಬಹುದೆಂದು ತೋರಿಸಿಕೊಟ್ಟರು.

ಆಚಾರ್ಯರು ಒಟ್ಟು 15 ಕೃತಿಗಳನ್ನು ರಚಿಸಿದ್ದಾರೆ. ಅವರ ಇತ್ತೀಚಿನ ಕೃತಿ 'ಮಂಜೂಷ'.

ಹಲವು ಪ್ರಶಸ್ತಿಗಳು ಅವರ ಉಡಿ ಸೇರಿವೆ.

ಕನ್ನಡ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಕನ್ನಡ ಸಾಹಿತ್ಯ ಪರಿಷತ್ ವಜ್ರ ಮಹೋತ್ಸವ ಪ್ರಶಸ್ತಿ, ವರ್ಧಮಾನ ಪ್ರಶಸ್ತಿಯೊಂದಿಗೆ ಇತ್ತೀಚೆಗೆ ತಾನೆ 1991 ರ ಭಗವಾನ್‌ದಾಸ್ ಗೊಯೆಂಕಾ ಪ್ರಶಸ್ತಿ ಅವರಿಗೆ ಲಭಿಸಿತು.

ಆಚಾರ್ಯರ ಮೃತದೇಹದ ಸಂಸ್ಕಾರ ಸೋಮವಾರ ಮಧ್ಯಾಹ್ನ ನೆರವೇರಿತು.

### ಗಣ್ಯರ ಸಂತಾಪ

ಖ್ಯಾತ ಹಿಂದೂಸ್ತಾನಿ ಗಾಯಕಿ ಗಂಗೂಬಾಯಿ ಹಾನಗಲ್, ಹುಬ್ಬಳ್ಳಿ-ಧಾರವಾಡದ ಮೇಯರ್ ಎಚ್.ಡಿ. ಕಳ್ಳಿಮನಿ, ಹಿರಿಯ ಪತ್ರಕರ್ತ ಪಾಟೀಲ ಪುಟ್ಟಪ್ಪ, ಶಾಸಕ ಗೋಪೀನಾಥ ಸಾಂಡ್ರಾ ಅವರು ಆಚಾರ್ಯರ ನಿಧನಕ್ಕೆ ಸಂತಾಪ ಸೂಚಿಸಿದ್ದಾರೆ.

# ಕಂಪನಿಗಳಾಗಿ ಏ... ಇಂ. ಏರ್‌ಲೈನ್ಸ್ ...

ಪಿ.ಟಿ.ಐ.

ನವದೆಹಲಿ, ಮೇ 4

ಇಂಡಿಯನ್ ಏರ್‌ಲೈನ್ಸ್ ಮತ್ತು ಏರ್ ಇಂಡಿಯಾ ಸಂಸ್ಥೆಗಳನ್ನು ಸರ್ಕಾರಿ

## ಪ್ರತಿಪಕ್ಷ ವಿರೋಧನಡುವೆ

# ಪತ್ರಕರ್ತ, ಪಂಡಿತ ಪಾ.ವೆಂ. ಆಚಾರ್ಯ ಅವರ ನಿಧನ



ಬೆಂಗಳೂರು, ಮೇ 4

ಕನ್ನಡ ಪತ್ರಿಕೋದ್ಯಮ ಮತ್ತು ಸಾಹಿತ್ಯ ಕ್ಷೇತ್ರಕ್ಕೆ ಅಮೂಲ್ಯ ಕೊಡುಗೆ ನೀಡಿದ ಪಾ.ವೆಂ. ಆಚಾರ್ಯ, (ಪಾಡಿಗಾರು ವೆಂಕಟರಮಣಾಚಾರ್ಯ) ಸೋಮವಾರ ಹುಬ್ಬಳ್ಳಿಯ ಸ್ವಗೃಹದಲ್ಲಿ ನಿಧನರಾದರು.

ಪಾ.ವೆಂ. ಲಾಂಗೂಲಾಚಾರ್ಯ, ರಾಧಾಕೃಷ್ಣ, ಮುರಲೀಧರ ಮುಂತಾದ ಹೆಸರುಗಳಿಂದ ಬರೆಯುತ್ತಿದ್ದ ಆಚಾರ್ಯರು ಪ್ರಚಂಡ ಪಂಡಿತರೂ ಆಗಿದ್ದರು. ಅವರ ವಿಶ್ವಕೋಶ ಸಮಾನ ಪಾಂಡಿತ್ಯವನ್ನು ಗೌರವಿಸಿ ಅವರನ್ನು 'ಸರ್ವಜ್ಞಾಚಾರ್ಯ' ಎಂದೂ ಕರೆಯಲಾಗುತ್ತಿತ್ತು.

ಕವಿ, ವಿಮರ್ಶಕ, ಹರಟೆಗಾರ, ಕತೆಗಾರ, ಪತ್ರಿಕೋದ್ಯಮಿಯಾಗಿದ್ದ ಆಚಾರ್ಯರದು ಬಹುಶ್ರುತ ಪ್ರತಿಭೆ.

ಅವರಿಗೆ 77 ವರ್ಷ ವಯಸ್ಸಾಗಿತ್ತು. ಪತ್ನಿ, ಐವರು ಪುತ್ರರು, ಮೂವರು ಪುತ್ರಿಯರನ್ನು ಅಗಲಿದ್ದಾರೆ.

ಕನ್ನಡದ ಮೊಟ್ಟ ಮೊದಲ ಮಾಸಿಕ ಡೈಜೆಸ್ಟ್ 'ಕಸ್ತೂರಿ'ಯ ಸ್ಥಾಪಕ ಸಂಪಾದಕರಾಗಿ 18 ವರ್ಷಗಳ ಕಾಲ ಅದರ ಸೂತ್ರಧಾರರಾಗಿ ಅದ್ವಿತೀಯ ಪತ್ರಿಕೆಯನ್ನಾಗಿ ಬೆಳೆಸಿದ ಕೀರ್ತಿ ಆಚಾರ್ಯರದು. (2ನೇ ಪುಟ ನೋಡಿ)

5-5-1992

ಬುಧವಾರ 6-5-1992 ಬೆಂಗಳೂರು

# ಪಾ.ವೆಂ.

ಎಪ್ಪತ್ತೇಳು ವರ್ಷ ವಯಸ್ಸಿನಲ್ಲಿ ಸೋಮವಾರ ನಿಧನರಾದ ಪಾಡಿಗಾರು ವೆಂಕಟರಮಣ ಆಚಾರ್ಯ ಕನ್ನಡ ಪತ್ರಿಕಾರಂಗದ ಸ್ವಾತಂತ್ರ್ಯ ಹೋರಾಟ-ಆಂದೋಲನಗಳ ಯುಗದ ಬಳಿಕ ಹೊಸ ಕಾಲದ 'ಇಂದಿನ ವಿಶ್ವಕ್ಕೊಂದು ಬೆಳಕಿಂಡಿ' ತೆರೆದ ಪತ್ರಕರ್ತರಲ್ಲಿ ಅಗ್ರಮಾನ್ಯರು. 'ಜ್ಞಾನ ಮತ್ತು ಮನೋರಂಜನೆ'-ಇದು ಅವರು ಬೆಳೆಸಿದ 'ಕಸ್ತೂರಿ'ಯ ಇನ್ನೊಂದು ಧ್ಯೇಯವಾಕ್ಯ. 'ಕಸ್ತೂರಿ' ಕನ್ನಡ ಓದುಗವರ್ಗದ ಅರಿವನ್ನು ಬೆಳೆಸಿತು.

ಪಾ.ವೆಂ. ಕಸ್ತೂರಿಯ ಪುಟಗಳನ್ನು ಮುರಳೀಧರ, ರಾಧಾಕೃಷ್ಣ (ಅವರ ಇಬ್ಬರು ಪುತ್ರರ ಹೆಸರುಗಳೂ ಹೌದು) ರಾವ್, ವಿಚಾರಿ, ಸಾಗರ ತನಯ ಇತ್ಯಾದಿ ನಾನಾ ಲೇಖಕನಾಮಗಳಲ್ಲಿ ತಾವು ಬರೆದ ವಿವಿಧ ಜ್ಞಾನಾಭಿರುಚಿಯ ಬರಹಗಳಿಂದ ತುಂಬಿಸುತ್ತಿದ್ದರು.

ಜೀವನದ ಕೊನೆಯ ಸುಮಾರು ಒಂದೂವರೆ ದಶಕದಲ್ಲಿ ಸಾಕಷ್ಟು ಪ್ರಸಿದ್ಧಿ-ಪ್ರಶಸ್ತಿ ಗಳಿಸಿದರಾದರೂ ಅದರ ಹಿಂದೆ ಸದ್ದಿಲ್ಲದೆ ಐದಾರು ದಶಕ ಅವರು ತೆಯ್ದ ಪತ್ರಕರ್ತ ಬದುಕಿನ ಪರಿಶ್ರಮದ ಸುಗಂಧವಿದೆ. ಅವರಿಗೆ ಪ್ರಶಸ್ತಿ- ಪುರಸ್ಕಾರಗಳು ಅವರ ಪ್ರತಿಭೆಯಲ್ಲದೆ ಇನ್ಯಾವ ಪ್ರಭಾವದಿಂದಲೂ ಬಂದದ್ದಲ್ಲ. ಮುಚ್ಚಿಟ್ಟರೂ ಹೊರಸೂಸುವ ಕಸ್ತೂರಿಯ ಸುವಾಸನೆಯಂತೆ ಅವರ ಪ್ರತಿಭೆ- ಪಾಂಡಿತ್ಯ ತಾನೇ ತಾನಾಗಿ ಓದುಗ ವಲಯವನ್ನು ಆವರಿಸಿ ಗೆದ್ದು, ನಾಡಿನ ಪತ್ರಿಕಾ ರಂಗದಲ್ಲಿ ಅವರು ಪಾಂಡಿತ್ಯದ ಒರೆಗಲ್ಲು ಎನಿಸಿದವರು.

ಕಸ್ತೂರಿಯ ಸೂತ್ರಧಾರಿತ್ವದಿಂದ ನಿವೃತ್ತರಾದ ಮೇಲೂ ಅವರು ಬರೆಯುತ್ತಾ ಬಂದ 'ಪದಾರ್ಥ ಚಿಂತಾಮಣಿ' ಕೇವಲ ಭಾಷಾ ಶಾಸ್ತ್ರದ ಅಂಕಣವಲ್ಲ; ಭಾಷೆಯ ಹಾಸುಹೊಕ್ಕುಗಳನ್ನು ಬಿಡಿಸಿ ಬಣ್ಣಿಸಿದ ಬಹುಶ್ರುತ ಪಾಂಡಿತ್ಯದ ರಸಪಾಕ. ಅಂಥ ಅಂಕಣ ಬರೆಯಲು ತಮಗೆ ಅಸಾಧ್ಯವೆಂದು ವಿಶ್ವವಿದ್ಯಾನಿಲಯಗಳ ಭಾಷಾ ವಿಜ್ಞಾನ ಪ್ರಾಧ್ಯಾಪಕರೂ ಹೇಳಿದ್ದುಂಟು.

ಸಾಹಿತಿಯಾಗಿ ಪಾ.ವೆಂ. ಮೈಲಿಗಲ್ಲೆನಿಸುವ ಸಾಧನೆ ಮಾಡಿಲ್ಲದಿರಬಹುದು. ಆದರೆ ವಿಸ್ತಾರವಾದ ಅಧ್ಯಯನದ ಅರಿವಿನ ಹಿನ್ನೆಲೆಯಲ್ಲಿ ಸಾಹಿತ್ಯವನ್ನು ತೂಗಿ ಬೆಲೆ ಕಟ್ಟಬಲ್ಲ ಪಂಡಿತ- ಪತ್ರಕರ್ತರಾಗಿ, ಕನ್ನಡ ಸಾಹಿತ್ಯರಂಗವನ್ನು ಬೆಳೆಸಿದ ಪತ್ರಕರ್ತರಾಗಿ ಅವರದು ಅತಿಗಣ್ಯ ಹೆಸರು.

ಗಂಭೀರ- ಅಧ್ಯಯನ ಪೂರ್ಣ- ತಲಸ್ಪರ್ಶಿ ಲೇಖನಗಳು ಹೇಗೋ ಹಾಗೆ ಲಘು ಹರಟೆಗಳಲ್ಲೂ ತಮ್ಮದೇ ಛಾಪು ಸ್ಥಾಪಿಸಿದ ಪಾ.ವೆಂ. ಆಗೀಗ ಅಂತರಂಗದ ಒತ್ತಡದಿಂದ ಕವನಗಳನ್ನೂ ಬರೆದವರು.

ನೆಹರೂ ತೀರಿಕೊಂಡಾಗ 'ನನ್ನೊಳಗಿನ ಏನನ್ನೋ ಕಳೆದುಕೊಂಡಂತಾಗಿದೆ' ಎಂಬರ್ಥದ ಸಾಲುಗಳ ಮೂಲಕ ಇಡೀ ದೇಶದ ಅಂತರಂಗದ ಅನ್ನಿಸಿಕೆ ಎನಿಸಬಹುದಾದ ಭಾವವನ್ನು ವ್ಯಕ್ತಪಡಿಸಿದ ಅವರ ಕವಿತೆ ಈಗ ನೆನಪಾಗುತ್ತದೆ- 'ಪಾ.ವೆಂ. ಇನ್ನಿಲ್ಲ' ಎಂದಾಗ.

# ವಿಧಿ ವಿಲಾಸ

ಉದ್ದಾಮ ಪತ್ರಕರ್ತ, ಲೇಖಕ, ಅಂಕಣಕಾರ ಪಾಡಿಗಾರು ವೆಂಕಟರಮಣ ಆಚಾರ್ಯ ಅವರು ತುಂಬು ಜೀವನ ನಡೆಸಿದ ನಂತರ ನಿಧನರಾದದ್ದರಲ್ಲಿ ಹೆಚ್ಚಳವೇನೂ ಇಲ್ಲ. ಸಂಯಮದ ಜೀವನ ನಡೆಸಿದ್ದ ಅವರಿಗೆ ಅದು ಸ್ವಾಭಾವಿಕ ಸಹಜ ಸಾವು ಎನ್ನುವುದರಲ್ಲಿ ಅನುಮಾನವೇ ಇಲ್ಲ.

ಇಂತಹ ಸಹಜ ಸಾವಿನಲ್ಲೂ ವಿಧಿಯ ಅಟ್ಟಹಾಸ ತಾನೇ ತಾನಾಗಿ ಮೆರೆದಿದೆ. ಪಾ.ವೆಂ. ಆಚಾರ್ಯರಿಗೆ ಭಗವಾನ್ ದಾಸ್ ಗೊಯೆಂಕಾ ಸ್ಮಾರಕ ಪ್ರಶಸ್ತಿ ಲಭಿಸಿದ್ದಕ್ಕೆ ವಿಧಿ ಕಾರಣವಲ್ಲ. ಅವರ ಸಾಧನೆಯೇ ಅವರಿಗೆ ಆ ಪ್ರಶಸ್ತಿಯನ್ನು ತಂದು ಕೊಟ್ಟಿತ್ತು. ಯಾರ ಪ್ರಭಾವವೂ ಇರಲಿಲ್ಲ. ಅವರೂ ಕೇಳಿರಲಿಲ್ಲ.

ಆದರೆ ಮುಂಬೈನಲ್ಲಿ ಭಾರತರತ್ನ ಜೆ.ಆರ್.ಡಿ. ಟಾಟಾ ಅವರ ಹಸ್ತದಿಂದ ಪಾ.ವೆಂ. ಆಚಾರ್ಯರು ಪ್ರಶಸ್ತಿಯನ್ನು ಸ್ವೀಕರಿಸಬೇಕಾಗಿದ್ದ ಸಮಾರಂಭಕ್ಕೆ ಎಲ್ಲ ಸಿದ್ಧತೆಗಳು ನಡೆದಿದ್ದರೂ ಅದನ್ನು ಅನಿವಾರ್ಯವಾಗಿ ಮುಂದಕ್ಕೆ ಹಾಕಬೇಕಾಯಿತು. ಆ ಸಮಾರಂಭ ನಡೆಯಲೇ ಇಲ್ಲ.

ಪಾ.ವೆಂ. ಆಚಾರ್ಯ ಕನ್ನಡಪ್ರಭಕ್ಕೆ ಒಂದು ಲೇಖನ ಮಾಲೆಯನ್ನು ಬರೆದು ಕೊಡುವುದಾಗಿ ಹೇಳಿದ್ದರು. ಆ ಲೇಖನ ಮಾಲೆಗೆ ಮೊದಲ ಲೇಖನವನ್ನೂ ಬರೆಯುವುದು ಅವರಿಂದ ಆಗಲಿಲ್ಲ.

ಪಾ.ವೆಂ. ಆಚಾರ್ಯ ಬರೆದ ಕಟ್ಟ ಕಡೆಯ ಲೇಖನ ಯಾವುದು?

ಡಾ। ವಿನಾಯಕ ಕೃಷ್ಣ ಗೋಕಾಕರ ನಿಧನದ ಸುದ್ದಿ ಕೇಳಿದ ನಂತರ ತಮ್ಮ ಚಿರಪರಿಚಿತ "ಸಂಯುಕ್ತ ಕರ್ನಾಟಕ" ದಿನಪತ್ರಿಕೆಗೆ ಬರೆದ ಕಾಗದವೇ ಪ್ರಾಯಶಃ ಅವರ ಕಟ್ಟಕಡೆಯ ಬರವಣಿಗೆ.

ಆ ಕಾಗದದಲ್ಲೂ ಪಾ.ವೆಂ. ಆಚಾರ್ಯರು ವಿಧಿ ವಿಲಾಸದ ಬಗ್ಗೆ ಪರೋಕ್ಷವಾಗಿ ಪ್ರಸ್ತಾಪಿಸಿದ್ದಾರೆ.

ಆಚಾರ್ಯರು ಗೋಕಾಕರಿಗೆ ತಮ್ಮ ಪದಾರ್ಥ ಚಿಂತಾಮಣಿ ಪುಸ್ತಕವನ್ನು ಕಳಿಸಿದ್ದರು. ಆ ಪುಸ್ತಕ ಕುರಿತ ತಮ್ಮ ಅಭಿಪ್ರಾಯವನ್ನು ಗೋಕಾಕರು "ಇನ್ನೊಂದು ವಾರದಲ್ಲಿ ತಿಳಿಸುವುದಾಗಿ ಪತ್ರ ಬರೆದಿದ್ದರು". ತಿಳಿಸಲಿಲ್ಲ.

ಒಮ್ಮೆ ಆಚಾರ್ಯರು ಮುಂಬೈಗೆ ಹೋಗಿದ್ದಾಗ ಗೋಕಾಕರ ಮನೆಗೆ ಫೋನ್ ಮಾಡಿದಾಗ ಅವರು ಅಸ್ವಸ್ಥರಾಗಿರುವುದು ಗೊತ್ತಾಯಿತು. ಹೇಗಿದ್ದರೂ ಇನ್ನೊಮ್ಮೆ (ಭಗವಾನ್ ದಾಸ್ ಗೊಯೆಂಕಾ ಪ್ರಶಸ್ತಿ ಸ್ವೀಕಾರಕ್ಕಾಗಿ) ಮುಂಬೈಗೆ ಭೇಟಿ ಕೊಡುವುದು ಇದ್ದೇ ಇದೆಯಲ್ಲ ಎಂದುಕೊಂಡು ಆಚಾರ್ಯರು ಹುಬ್ಬಳ್ಳಿಗೆ ಹಿಂತಿರುಗಿದರು.

ಆ ಪ್ರಶಸ್ತಿ ಪ್ರದಾನ ಸಮಾರಂಭವೇ ನಡೆಯಲಿಲ್ಲ. ಗೋಕಾಕರೂ ನಿಧನರಾದರು. ಆಚಾರ್ಯರೂ ಇನ್ನಿಲ್ಲ.

ಆಚಾರ್ಯರು ಬರೆದ ಈ ಕೊನೆಯ ಪತ್ರವನ್ನು ಓದಲೂ ಅವರು ಇರಲಿಲ್ಲ. ಅದು ವಿಧಿಯ ಅಟ್ಟಹಾಸ.

...ಹಾರ

...ಕನೆಯ
...ಾರ್ತಿ

...ಪ್ರಭದಲ್ಲಿ ಮೂಡಿಬಂದ ...ವರನ್ನು ಕುರಿತಾದ ವ್ಯಕ್ತಿ

...ನ್ನು ಕರ್ನಾಟಕದ ಉಚ್ಚ ...ಧೀಶರನ್ನಾಗಿ ನೇಮಕ ...ಾರದಲ್ಲಿದ್ದ ರಾಮಕೃಷ್ಣ ...ವಿರುದ್ಧವೇ 'ಸಾರಾಯಿ ...ತೀರ್ಪು ನೀಡಿದ್ದು ಅವರ

...ಚನೆಯಿಂದ ಮಾಡುವ ವೃತ್ತಿಪರತೆ ...ಉಕರಣೀಯ.

ಮಧುಸೂದನ,

ಹಿರಿಯೂರು.

...ಧ್ಯಯನ
...ತ್ರೈ

...ರ ಕನ್ನಡ ಹಲವು ...ಲುಕಿ 'ನಾಳಿನ ನಿನ್ನೆಯ ...ನ್ನುವುದನ್ನು ಕುರಿತ ...ರ 'ಮೃತ್ಯು ಚುಂಬನದ ...ವನ?' ಲೇಖನ ... ಈ ಬೃಹದಾಕಾರದ

...ಜನೆಯ ಜತೆಯಲ್ಲೇ ...ಂಕ, ಪರಿಸರ ಹಾನಿ,

## ಪುಸ್ತಕ ವಿಮರ್ಶೆ

# ಚಿಂತನೆಗೆ ಹಚ್ಚುವ ಪಾವೆಂ

**ಮಂಜೂಷಾ**

**ಲೇ: ಪಾ. ವೆಂ. ಆಚಾರ್ಯ, ಪ್ರ: ಮಿಂಚಿನ ಬಳ್ಳಿ ಗ್ರಂಥಮಾಲೆ, ಹುಬ್ಬಳ್ಳಿ - 580 020; ಪುಟಗಳು: 130; ಬೆಲೆ: 20.00ರೂ.**




ಬಹುಮುಖ ಆಸಕ್ತಿ ಮತ್ತು ಪ್ರತಿಭೆಯ ಪತ್ರಿಕೋದ್ಯಮಿಯಾಗಿದ್ದ ದಿವಂಗತ ಪಾ. ವೆಂ. ಆಚಾರ್ಯರ ಹನ್ನೆರಡು ವೈಚಾರಿಕ ಲೇಖನಗಳ ಸಂಗ್ರಹ ಈ ಪುಸ್ತಕ. ಈ ಲೇಖನಗಳೆಲ್ಲ ಈಗಾಗಲೇ ಬೇರೆ ಬೇರೆ ನಿಯತಕಾಲಿಕೆಗಳಲ್ಲಿ ಪ್ರಕಟವಾಗಿ ಚರ್ಚೆಗೆ, ವಿವಾದಕ್ಕೆ ಒಳಗಾಗಿವೆ. ಬ್ರಾಹ್ಮಣರೇನು ಮಾಡಬೇಕು, ಜಾತಿ ಪದ್ಧತಿ, ಬತ್ತಲೆಸೇವೆ ಈ ಲೇಖನಗಳು ಪ್ರಕಟವಾದಾಗ ನಡೆದ ಚರ್ಚೆ ವಾದ ವಿವಾದ ಓದುಗರ ನೆನಪಿನಲ್ಲಿ ಇನ್ನೂ ಹಸಿರಾಗಿರುವಂಥದ್ದು. ಮೀಸಲಾತಿ, ಹರಿಜನರು, ಪ್ರವೃತ್ತಿ - ಮೌಲ್ಯಗಳ ಸಂಘರ್ಷ ಭಾರತೀಯರ ಮೌಲ್ಯ ಪ್ರಜ್ಞೆ- ಹೀಗೆ ಲೇಖನಗಳ ವ್ಯಾಪ್ತಿ ಸಾಮಾಜಿಕ ವಿಚಾರಗಳ ಸುತ್ತಮುತ್ತಲೆ ಇರುವುದರಿಂದ ಈ ಸಂಕಲನವನ್ನು ಸಾಮಾಜಿಕ ಸಮಸ್ಯೆಗಳನ್ನು ಸಂವೇದನಾಶೀಲ ಪತ್ರಕರ್ತನೊಬ್ಬ ಚಿಕಿತ್ಸಕ ಮನಸ್ಸಿನಿಂದ ನೋಡಿ ಬರೆದ ಲೇಖನಗಳ ಸಂಗ್ರಹವೆಂದೂ ಹೇಳಬಹುದು.

ಪಾವೆಂ ಈಗ ಕ್ರಮೇಣವಾಗಿ ಕಣ್ಮರೆಯಾಗುತ್ತಿರುವ ಒಂದು ಪೀಳಿಗೆಯ ಪತ್ರಿಕೋದ್ಯಮಿಗಳಸಮಾಜ ಪ್ರೀತಿ, ವಸ್ತುನಿಷ್ಠೆ ನಡಾವಳಿಗಳ ಪ್ರತೀಕದಂತೆ.ಈವತ್ತು ಪತ್ರಿಕೋದ್ಯಮ ಎಲ್ಲ ವೃತ್ತಿಗಳಂತೆ ಬೋನಸ್, ಭತ್ಯೆ ಪಗಾರ, ವ್ಯಕ್ತಿ ಪ್ರತಿಷ್ಠೆಗಳ ಸುತ್ತ ಗಿರಕಿ ಹೊಡೆಯುವ ಮತ್ತೊಂದು ವೃತ್ತಿ. ಪಾವೆಂ ಅಂತಹವರಿಗೆ ಪತ್ರಿಕೋದ್ಯಮ ಸಮಾಜದ ಮೇಲೆ ತಮಗಿರುವ ಆಸ್ಥೆ ಮಮಕಾರವನ್ನು ಅಭಿವ್ಯಕ್ತಿಸಲು ಅಗತ್ಯವಾದ ಒಂದು ಮಾಧ್ಯಮ. ಇಲ್ಲಿಯ ಲೇಖನಗಳ ಶೈಲಿ ಕೇವಲ ವೃತ್ತಿ ನೈಪುಣ್ಯ ಯಾಂತ್ರಿಕ ಅಚ್ಚುಕಟ್ಟುತನ, ಸ್ವಪ್ರತಿಷ್ಠೆಯ ಮೆರೆದಾಟ - ಇದನ್ನೆಲ್ಲ ಪ್ರತಿನಿಧಿಸುವ ಆಧುನಿಕ ಪತ್ರಿಕೋದ್ಯಮಿಯ ಶೈಲಿಯೂ ಅಲ್ಲ, ಹಾಗೆಯೇ ಪಾವೆಂ ಪೀಳಿಗೆಗೆ ಸೇರಿದ ಎರಡನೆ - ಮೂರನೆ ದರ್ಜೆಯ ಪತ್ರಕರ್ತರು ಸೃಷ್ಟಿಸಿದ ಆಳವಿಲ್ಲದ, ಅವಸರ ಸಾಹಿತ್ಯದ ಧಾಟಿಯದೂ ಅಲ್ಲ, ನಿಮ್ಮೆದುರಿಗೆ ಕುಳಿತುಕೊಂಡು ಗಂಭೀರ ಧ್ವನಿಯಲ್ಲಿ ಮಾತನಾಡುತ್ತಿರುವ ಪಂಡಿತರೊಬ್ಬರೋಪಾದಿಯಲ್ಲಿ ಬರೆಯುವ ಪಾವೆಂ ಇಲ್ಲಿನ ಲೇಖನಗಳಲ್ಲಿ ತೋರಿಸುವ ಸಮಾಜಶಾಸ್ತ್ರ ಇತಿಹಾಸ, ಸಾಹಿತ್ಯ ಮನೋವಿಜ್ಞಾನ - ಈ ಜ್ಞಾನಶಾಖೆಗಳ ಅರಿವು ಆಶ್ಚರ್ಯ ಹುಟ್ಟಿಸುತ್ತದೆ. ಬೇರೆ ಬೇರೆ ಶಿಸ್ತುಗಳಿಂದ ಪಡೆದ ತಿಳಿವು - ಒಳನೋಟವನ್ನು ಸದ್ಯದ ಸಾಮಾಜಿಕ ಸನ್ನಿವೇಶದ ಹಿನ್ನೆಲೆಯಲ್ಲಿ ಪರಿಶೀಲಿಸಿ ಓದುಗರ ಮುಂದಿಡುವುದೆ ಪಾವೆಂ ಲೇಖನಗಳ ಮೂಲ ಆಶಯವಾಗಿದೆ.

ಪಾವೆಂ ಶೈಲಿಯ ಇನ್ನೊಂದು ಗುಣವೆಂದರೆ ಓದುಗನನ್ನು ಯಾವುದೇ ತೀರ್ಮಾನಗಳಿಗೆ ಒಪ್ಪಿಸಲು ಪ್ರಯತ್ನಿಸದೆ ಓದುಗನನ್ನ ಚಿಂತನೆಗೆ ಹಚ್ಚುವಂತೆ ಮಾಡುವುದು. ಗತಕಾಲದ ಗೀಳಿನಿಂದ ಉಂಟಾಗುವ ಸಾಮಾಜಿಕ ಅನಿಷ್ಟಗಳ ಬಗ್ಗೆಯೆ ಬರೆಯಲಿ, ಅಂತಃಪುರದ ರಾಣಿಯರ ಮನೋವ್ಯಾಪಾರಗಳ ಬಗ್ಗೆಯೆ ಬರೆಯಲಿ ಓದುಗ ಹೊಸ ರೀತಿಯಲ್ಲಿ ಯೋಚಿಸುವಂತೆ ಪ್ರಚೋದಿಸಲು ಪ್ರಯತ್ನಿಸುತ್ತಾರೆ. ಪಾವೆಂ ನೀಡುವ ಮಾಹಿತಿಗಳೆ ಓದುಗನನ್ನು ಬೇರೆ ರೀತಿಯ ಅಭಿಪ್ರಾಯಕ್ಕೆ ನೆಲೆಗಳಿಗೆ ತಲುಪಿಸಬಹುದು.

ಸಮಸ್ಯೆಯೊಂದನ್ನು ವಸ್ತುನಿಷ್ಠವಾಗಿ ಪರಿಶೀಲಿಸಬೇಕು, ಭಾವೋದ್ವೇಗವಿರಬಾರದು, ವಿಷಯದ ಸಮಗ್ರ ಪರಿಶೀಲನೆಯಿರಬೇಕು - ಎಂಬ ಪಾವೆಂ ಆಸ್ಥೆಯನ್ನು ಒಪ್ಪಬಹುದಾದರೂ ಅವರ ಲೇಖನಗಳನ್ನು ಓದುತ್ತಿದ್ದರೆ ನಮ್ಮ ಸಾಮಾಜಿಕ ಸಮಸ್ಯೆಗಳೆಲ್ಲ ಪಂಡಿತರು ಚರ್ಚಿಸಬೇಕಾದ ಚಿಂತನ ಸಮಸ್ಯೆಗಳಂತೆ ಮಾತ್ರವೇ ಕಾಣುತ್ತವೆ. ಸಾಮಾಜಿಕ ಸಮಸ್ಯೆಗಳನ್ನು ಚರ್ಚಿಸುವಾಗ ಇರಲೇಬೇಕಾದ ಸದ್ಯದ ತುರ್ತು, ತೀವ್ರತೆ, ಹಿಂಬದಿಗೆ ಸರಿದುಹೋಗುತ್ತದೆ. ಸದ್ಯ ಸದ್ಯದ ತುರ್ತು, ತೀವ್ರತೆಯ ತಳಪಾಯವಾಗಿರುವ ಪತ್ರಿಕೋದ್ಯಮದ ಬರಹಗಳಲ್ಲಿ ಇಂತಹ ಶೈಲಿ ಎಷ್ಟು ಪ್ರಸ್ತುತ, ಉಪಯುಕ್ತ ಎಂಬುದೇ ಪ್ರಶ್ನೆ. ಪಾವೆಂ ಪಾಂಡಿತ್ಯದ ಬಗ್ಗೆ ಎರಡನೆಯ ಮಾತಿಲ್ಲವಾದರೂ ಈ ಸಂಗ್ರಹದಲ್ಲಿ ಅವರು ಚರ್ಚಿಸಿರುವ ಸಮಸ್ಯೆಗಳನ್ನು ಕುರಿತ ತೀರ್ಮಾನ, ಧ್ವನಿಗಳು ಇತರ ಕನ್ನಡ ಲೇಖಕರಿಗಿಂತೇನು ಭಿನ್ನವಾಗಿಲ್ಲ. ಸಾಮಾಜಿಕ ಸಮಸ್ಯೆಗಳ ಬಗ್ಗೆ ತಿಳುವಾದ ನಿಲುವನ್ನು ತೆಗೆದುಕೊಂಡು ಅದನ್ನೆ ಸೃಜನಶೀಲ ಒಳನೋಟವೆಂದು ಮೆರೆಸುವುದು ಕನ್ನಡ ಲೇಖಕರ ವೈಶಿಷ್ಟ್ಯ. ಬ್ರಾಹ್ಮಣರೇನು ಮಾಡಬೇಕು ಎಂಬ ಲೇಖನದ ವಸ್ತುನಿಷ್ಠೆಯನ್ನು ಮೆಚ್ಚಬಹುದಾದರೂ ಈ ಲೇಖನದ ಆಶಯವೆ ದಾರಿ ತಪ್ಪಿಸುವಂಥದು. ಬ್ರಾಹ್ಮಣರಿಗೆ, ದಲಿತರಿಗೆ, ಮುಸ್ಲಿಮರಿಗೆ ಎಂದು ಈ ದೇಶದಲ್ಲಿ ಬೇರೆ ಬೇರೆ ಭವಿಷ್ಯವಿರುವುಲು ಸಾಧ್ಯವಿಲ್ಲ. ಒಟ್ಟು ದೇಶದ ಪ್ರಗತಿ, ಬೆಳವಣಿಗೆಯ ಚೌಕಟ್ಟಿನಲ್ಲಿ ಇದರೆಲ್ಲ ಸಮಸ್ಯೆಗಳು ಇತ್ಯರ್ಥ ವಾಗುತ್ತವೆ ಎಂಬುದನ್ನು ಪಾವೆಂ ಅಂತಹವರು ಕೂಡ ಮರೆಯುವುದು ಆಶ್ಚರ್ಯಕರ. ಮೀಸಲಾತಿಯ ಪರವಾಗಿ ಮತ್ತು ವಿರೋಧವಾಗಿ ಕೂಡ ಸಮರ್ಥವಾಗಿ ವಾದಿಸಿಬಿಡಬಹುದು. ಆದರೆ ಮೀಸಲಾತಿಯ ಪರವಿರುವವರು, ವಿರೋಧವಿರುವವರು- ಇಬ್ಬರೂ ಹುದ್ದೆ ಪಡೆದ ತಕ್ಷಣ - ತಮ್ಮ ಹುದ್ದೆಯನ್ನು ಸಮಾಜ ನಿಷ್ಠತೆ, ದೇಶಪ್ರೇಮ, ವೃತ್ತಿ ನೈಪುಣ್ಯವನ್ನು ಬೆಳೆಸಿಕೊಳ್ಳುವಂತಹ ಒಂದು ಅವಕಾಶ ಎಂದು ಭಾವಿಸದೆ, ತಮ್ಮ ತಮ್ಮ ವೈಯಕ್ತಿಕ ವರ್ಚಸ್ಸು, ಕ್ಷೇಮಾಭಿವೃದ್ಧಿಗಳನ್ನು ಬೆಳೆಸಿಕೊಳ್ಳುವ ಒಂದು ಸಾಧನವಾಗಿ ಮಾತ್ರ ಏಕೆ ಬಳಸಿಕೊಳ್ಳುತ್ತಾರೆ ಎಂಬ ಪ್ರಶ್ನೆ ಮೀಸಲಾತಿ ಪರ - ವಿರೋಧ ವಾದಿಸುವುದಷ್ಟೇ ಪ್ರಸ್ತುತವಾದದ್ದು. ಇಂತಹ ಪ್ರಶ್ನೆಯನ್ನುನ ಪಾವೆಂ ವಿಚಾರಸರಣಿ ಮುಟ್ಟುವುದೇ ಇಲ್ಲ. ಜಾತಿಪದ್ಧತಿಯನ್ನು ಐತಿಹಾಸಿಕವಾಗಿ ವಿಶ್ಲೇಷಿಸುವಾಗಲೂ ಪಾವೆಂ ಗಮನವೆಲ್ಲ ಜಾತಿಗಿರುವ ಸಾಮಾಜಿಕ ಪ್ರತಿಷ್ಠೆಯ ಆಯಾಮದ ಕಡೆಗೇ ಹೊರತು ಜಾತಿ - ಸಾಮಾಜಿಕ ನ್ಯಾಯ, ಚಲನೆಗಿರುವ ಪರಸ್ಪರ ಸಂಬಂಧದ ಕಡೆಗಲ್ಲ.

ಬತ್ತಲೆಸೇವೆಯನ್ನು ಕುರಿತ ಎರಡು ಲೇಖನಗಳು ಈ ಸಂಕಲನದ ಅತ್ಯುತ್ತಮ ಲೇಖನಗಳು. ತಮ್ಮ ಪಾಂಡಿತ್ಯ ಸಾಮಾಜಿಕ ಕಳಕಳಿ, ಸದ್ಯದ ತುರ್ತು ವಸ್ತುನಿಷ್ಠೆ ಎಲ್ಲವನ್ನೂ ಹದವಾಗಿ ಬೆರೆಸಿ ಬರೆದ ಈ ಲೇಖನಗಳು ಇಂತಹ ಸಮಸ್ಯೆಗಳ ಬಗ್ಗೆ ಬರೆಯುವವರಿಗೆ ಮಾದರಿಯೂ ಕೂಡ ಆಗಬಹುದಾಗಿದೆ.

ಇಂತಹ ಒಂದು ವೈಚಾರಿಕ ಕೃತಿಯನ್ನು ವೈಚಾರಿಕ ಸಾಹಿತ್ಯದ ಪ್ರಚಾರಕ್ಕೇ ಮೀಸಲಾದ ಮಿಂಚಿನ ಬಳ್ಳಿ ಪ್ರಕಾಶನದವರು ತಮ್ಮ ಐವತ್ತನೇ ವರ್ಷದಲ್ಲಿ ಆ ಪ್ರಕಾಶನದ ಕಾರಣಪುರುಷರಾಗಿದ್ದ ಬುರ್ಲಿ ಬಿಂದುಮಾಧವ ಪ್ರತಿಷ್ಠಾನದ ಆಶ್ರಯದಲ್ಲಿ ಪ್ರಕಟಿಸಿರುವುದು ಯುಕ್ತವೇ ಆಗಿದೆ. ●

—ಕೆ. ಸತ್ಯನಾರಾಯಣ

ಖಾಸಗಿ ಶಿಕ್ಷಣ ಸಂಸ್ಥೆಗಳು ರಾಜಕಾರಣಿಗಳ ಮಾಲಿಕತ್ವದಲ್ಲಿವೆ. ಖಾಸಗಿ ಶಾಲೆಗಳನ್ನು ಯೋಗ್ಯ ರೀತಿಯಲ್ಲಿ ನಿಯಂತ್ರಣದಲ್ಲಿಟ್ಟುಕೊಂಡಿದ್ದರೆ ಕನ್ನಡದಲ್ಲಿ ಕಲಿಸಿರಿ ಎಂದು ಗೋಗರೆಯುವ ಸಂದರ್ಭ ಬರುತ್ತಿರಲಿಲ್ಲ. ಅಷ್ಟಾಗಿಯೂ ಸರ್ಕಾರವೀಗ ಸ್ವಾಗತಾರ್ಹ ಪ್ರಯತ್ನಕ್ಕೆ ಕೈಹಾಕಿದೆ. ಸೋಲು-ಗೆಲುವು ಮುಂದಿನದು.



ಅರ್ಕಾವತಿ ವಿಚಾರದಲ್ಲಿ ನಾನೇನೂ ತಪ್ಪು ಮಾಡಿಲ್ಲ. ರಿ ಮಾಡಿಫಿಕೇಷನ್ ಸ್ಕೀಂಗೆ ಸಹಿ ಹಾಕಿದ್ದೇನಷ್ಟೇ. ಯಾವುದೇ ಕಾನೂನು ಉಲ್ಲಂಘನೆ ಮಾಡಿಲ್ಲ. - ಸಿದ್ದರಾಮಯ್ಯ, ಮುಖ್ಯಮಂತ್ರಿ

# ಕನ್ನಡ 'ಕಸ್ತೂರಿ'ಯ ಕಂಪು ಹರಡಿದ ಲಾಂಗೂಲಾಚಾರ್ಯ

ಉಡುಪಿ ಮೂಲದ ಪತ್ರಕರ್ತರೊಬ್ಬರು ಹುಬ್ಬಳ್ಳಿ ಮೂಲದ ನಿಯತಕಾಲಿಕೆಯ ಸಂಪಾದಕರಾಗಿ ಸಮಗ್ರ ಕರ್ನಾಟಕದ ಭಾಷಾಭಿಮಾನಿಗಳು, ಸಂಸ್ಕೃತಿ ಚಿಂತಕರು, ವೈಚಾರಿಕರ ಮನ ಗೆದ್ದ 'ಪಂಡಿತ ಪತ್ರಕರ್ತ' ಪಾ.ವೆಂ ಆಚಾರ್ಯ ಈಗ ಬದುಕಿದ್ದರೆ ನೂರು ವರ್ಷ ಕಾಣುತ್ತಿದ್ದರು. ಈ ವಿಶ್ವಸೃಷ್ಟಿಯ ವೈಶಿಷ್ಟ್ಯವೆಂದರೆ ಯಾರನ್ನೂ ಶಾಶ್ವತವಾಗಿ ಉಳಿಸದೆ ಆದರೆ ಆಗಾಗ ಅಲ್ಲಲ್ಲಿ ಒಬ್ಬೊಬ್ಬ ಅದಮ್ಯ ಚೇತನರನ್ನು ಹಡೆಯುತ್ತಲೇ ಇರುವುದು. ಇಂತಹ ಅದಮ್ಯ ಚೇತನರಲ್ಲಿ ಒಬ್ಬರು ಪಾ.ವೆಂ.

ಪಾಡಿಗಾರು ವೆಂಕಟರಮಣ ಆಚಾರ್ಯ ಪಾ.ವೆಂ ಆಚಾರ್ಯ, ಲಾಂಗೂಲಾಚಾರ್ಯರೆಂದೇ ಪ್ರಸಿದ್ಧರಾದವರು. ಅಧಿಕೃತವಾಗಿ ಓದಿದ್ದು ಎಸ್ಸೆಸ್ಸೆಲ್ಸಿಯಾದರೂ ಅವರ ವೈಚಾರಿಕ ಕೃಷಿ ಕುರಿತಂತೆ ಡಾಕ್ಟರೇಟ್ ಮಹಾಪ್ರಬಂಧ ಮಂಡನೆಯಾಗುತ್ತಿದೆ. ಅವರು ಹಲವು ಭಾಷೆಗಳ ಸಾಹಿತ್ಯ, ವಿಜ್ಞಾನ, ಔಷಧಿ, ಗಣಿತ ಇತ್ಯಾದಿಗಳ ಬಗ್ಗೆ ತಲಸ್ಪರ್ಶಿಯಾಗಿ ಅಧ್ಯಯನ ಮಾಡಿ ಬರವಣಿಗೆಯಲ್ಲಿ ಇಳಿಸಿದವರು.

ಅವರನ್ನು 'ಪಂಡಿತ ಪತ್ರಕರ್ತ' ಎಂದು ಕರೆದವರು ಇನ್ನೊಬ್ಬ ಹಿರಿಯ ಪತ್ರಕರ್ತ ಪಾಟೀಲ ಪುಟ್ಟಪ್ಪನವರು. ಎಸ್ಸೆಸ್ಸೆಲ್ಸಿ ಓದು ಮುಗಿದಾಗ ಪಾ.ವೆಂ ಆರ್ಥಿಕ ಮುಗ್ಗಟ್ಟು ಕಂಡ ಉಡುಪಿಯ ದಂತಕತೆ ಎನಿಸಿದ ರಾಕಿ ಫರ್ನಾಂಡಿಸ್ (ಕಾಂಗ್ರೆಸ್ ನಾಯಕ ಆಸ್ಕರ್ ಫರ್ನಾಂಡಿಸ್ ಅವರ ತಂದೆ) ಮಂಗಳೂರಿನಲ್ಲಿ ಶುಲ್ಕವಿಲ್ಲದೆ ಉನ್ನತ ಅಧ್ಯಯನಕ್ಕೆ ಅವಕಾಶ ಕೊಡುವುದಾಗಿ ಹೇಳಿದರೂ ಊಟಕ್ಕೇನು ಮಾಡುವುದೆಂದು ಅದನ್ನು ಕೈಬಿಟ್ಟವರು ಪಾ.ವೆಂ. ಇಂತಹ ವ್ಯಕ್ತಿ ಸಂಸ್ಕೃತ, ಇಂಗ್ಲಿಷ್, ಹಿಂದಿ, ಬಂಗಾಳಿ, ಮರಾಠಿ ಇತ್ಯಾದಿ ಭಾಷೆಗಳ ಜ್ಞಾನ ಸಂಪಾದಿಸಿಕೊಂಡರು. ಅವರ ಓದುವ ಹವ್ಯಾಸ ಅಷ್ಟು ಗಟ್ಟಿ ಇತ್ತು. ಲೋಕ ಶಿಕ್ಷಣ ಟ್ರಸ್ಟ್‌ನ ಮೊಹರೆ ಹಣಮಂತರಾಯರು ಮಾಸಿಕ ನಿಯತಕಾಲಿಕೆ 'ಕಸ್ತೂರಿ'ಯನ್ನು ಹೊರತರಬೇಕೆಂಧಾಗ ಪ್ರಥಮ ಸಂಪಾದಕರಾಗಿ 1956ರಿಂದ 1975ರವರೆಗೆ ಅದರ ಚುಕ್ಕಾಣಿ ಹಿಡಿದವರು ಪಾ.ವೆಂ. ಅನಂತರವೂ ಲೇಖನಗಳನ್ನು ನಿರಂತರವಾಗಿ 'ಕಸ್ತೂರಿ'ಯೂ ಸೇರಿದಂತೆ ವಿವಿಧ ಪತ್ರಿಕೆಗಳಿಗೆ ಬರೆದರು. ಸಮಗ್ರ ಕರ್ನಾಟಕದಲ್ಲಿರುವ ಚಿಂತನಶೀಲರು, ಶಿಕ್ಷಣಾಸಕ್ತರು ಪತ್ರಿಕಾ ಏಜೆಂಟರಲ್ಲಿ ಕೇಳಿ ಕಸ್ತೂರಿಯನ್ನು ಪಡೆದುಕೊಳ್ಳುವ ಹಂತದವರೆಗೆ ಬೆಳೆಸಿದ್ದು ಪಾ.ವೆಂ ಹಿರಿಮೆ. 1956ರಿಂದ 1992ರವರೆಗಿನ ಸಮಗ್ರ 'ಕಸ್ತೂರಿ'ಯ ಸಂಚಿಕೆಗಳನ್ನು ಗದುಗಿನ ಫ್ರಾನ್ಸಿಸ್ ಕಾಂಬ್ಳೆಯವರ ಪುತ್ರಿ ಸವಿತಾ ಅವರು ಪಾ.ವೆಂ ಕೃತಿಗಳ ಕುರಿತು ಡಾಕ್ಟರೇಟ್ ಪ್ರಬಂಧ ಮಂಡಿಸಿರುವ ಉಡುಪಿ ಮೂಲದ, ಪ್ರಸ್ತುತ ಹುಬ್ಬಳ್ಳಿಯಲ್ಲಿರುವ ಸರ್ವಮಂಗಳಾ ಅವರಿಗೆ ಕೊಟ್ಟಿರುವುದು ಆ ಕಾಲದಲ್ಲಿ 'ಕಸ್ತೂರಿ'ಯ ಓದುಗರು ಎಷ್ಟು ಜಾಗರೂಕರಾಗಿದ್ದರು, ಕಾಳಜಿ ವಹಿಸುತ್ತಿದ್ದರು, ಓದುಗರನ್ನು ಪಾ.ವೆಂ ಹೇಗೆ ಸೆರೆಹಿಡಿದಿದ್ದರು ಎಂಬುದನ್ನು ಸೂಚಿಸುತ್ತದೆ. ಸರ್ವಮಂಗಳಾ ಮಡಿಕೇರಿಯಲ್ಲಿ ಓದುತ್ತಿರುವಾಗ ಪಾ.ವೆಂ ಬರಹಗಳ ಕುರಿತು ಆಕರ್ಷಿತರಾಗಿದ್ದರು. ಹೀಗೆ ಪಾ.ವೆಂ ಅವರಿಗೆ ಅರಿವಿಲ್ಲದೆಯೂ ಅವರಿಂದ ಪ್ರಭಾವಿತರಾದವರು ಅದೆಷ್ಟೋ.

## ಅಭಿಮತ

**■ ಮಟಪಾಡಿ ಕುಮಾರಸ್ವಾಮಿ**

> ಸಾಂಸ್ಕೃತಿಕ, ಸಾಹಿತ್ಯಕ ಹಾಗೂ ಎಲ್ಲ ರೀತಿಯ ಸಾಮಾಜಿಕ ಬೆಳವಣಿಗೆಗಳನ್ನು ಪಂಥಾತೀತವಾಗಿ ನೋಡುವ ದೃಷ್ಟಿ ಪಾ.ವೆಂ ಅವರಿಗೆ ಇತ್ತು. ಗುಣ, ಬುದ್ಧಿಯಿಂದ ಬ್ರಾಹ್ಮಣನಾಗಬೇಕೆಂದು ಪುಸ್ತಕ ಬರೆದವರು ಅವರು. ಹೀಗಾಗಿ 'ಇಸಂ'ಗಳಿಗೆ ಅಂಟಿಕೊಂಡವರೂ ಪಾ.ವೆಂ ಅವರನ್ನು ಗುರುವಾಗಿ ಕಂಡರು. ತನ್ನ ಮಗು ಮೃತಪಟ್ಟಾಗ ಶೋಕಿಸದ ಅವರು ಗಾಂಧೀಜಿ ಸತ್ತಾಗ ಅತ್ತಿದ್ದರಂತೆ.

### ಸಂಶೋಧಕ ಪತ್ರಕರ್ತ

ಯಾವುದೇ 'ಇಸಂ'ಗೆ ಅಂಟಿಕೊಳ್ಳದ ಪಾ.ವೆಂ ನಾವೀಗ ಯೋಚಿಸಲಾಗದ ಹಂತಕ್ಕೇರಿದವರು. ಡಾ। ಯು.ಆರ್. ಅನಂತಮೂರ್ತಿಯವರ 'ಸಂಸ್ಕಾರ' ಕಾದಂಬರಿ, ಡಾ। ಎಸ್. ಎಲ್.ಭೈರಪ್ಪರ 'ಪರ್ವ' ಕಾದಂಬರಿಯನ್ನು 'ಕಸ್ತೂರಿ' ಮೂಲಕ ಲೋಕಕ್ಕೆ ಚಿಕ್ಕದಾಗಿ ಚೊಕ್ಕದಾಗಿ ತೋರಿಸಿಕೊಟ್ಟವರು ಪಾ.ವೆಂ. ಶಿವರುದ್ರಪ್ಪ, ಪೂರ್ಣಚಂದ್ರ ತೇಜಸ್ವಿ, ಹಾಮಾ ನಾಯಕ ಹೀಗೆ ಅನೇಕಾನೇಕ ಸಾಹಿತಿಗಳಿಗೆ 'ಕಸ್ತೂರಿ'ಯನ್ನು ವೇದಿಕೆಯಾಗಿ ರೂಪಿಸಿದವರು ಪಾ.ವೆಂ. ಖಾಸಗಿ ಜೀವನದಲ್ಲಿ ಧಾರ್ಮಿಕ ಆಚರಣೆಗಳಿಗೆ ಬೆಲೆ ಕೊಡುತ್ತಿದ್ದರೂ ಯಾವುದೇ ಆಚರಣೆಗಳ ಬಗೆಗೆ ಪೂರ್ವಾಗ್ರಹ ಹೊಂದಿರದೆ ಮುಕ್ತರಾಗಿದ್ದರು, ಡಿಟ್ಯಾಚ್ಮೆಂಟ್ ಹೊಂದಿದ್ದರು. ಕೇವಲ ಬೇರೆ ಸಾಹಿತಿಗಳನ್ನು ಮಾತ್ರ ಬೆಳೆಸಿದ್ದಲ್ಲದೆ ತಾನೂ 'ಪದಾರ್ಥ ಚಿಂತಾಮಣಿ'ಯಂತಹ ಚಿಂತನಶೀಲ ಬರಹಗಳನ್ನು ಬರೆದು ತನ್ನೊಳಗಿದ್ದ ಸಂಶೋಧಕನನ್ನು ಹೊರಹಾಕಿದರು.

'ಸಂಸ್ಕಾರ' ಕಾದಂಬರಿ ಕುರಿತು ವಿವಾದ ಎದ್ದಾಗ 'ದೂಷಿಸುವುದಲ್ಲ, ನ್ಯೂನತೆ ಹೇಳಿದ್ದಷ್ಟೆ' ಎಂದು ಭಿನ್ನವಾಗಿ, ಪಂಥಾತೀತವಾಗಿ ನೋಡುವ ದೃಷ್ಟಿ ಪಾ.ವೆಂ ಅವರಿಗೆ ಇತ್ತು. ಗುಣ, ಬುದ್ಧಿಯಿಂದ ಬ್ರಾಹ್ಮಣನಾಗಬೇಕೆಂದು ಪುಸ್ತಕ ಬರೆದವರೂ ಪಾ.ವೆಂ. ಹೀಗಾಗಿ 'ಇಸಂ'ಗಳಿಗೆ ಅಂಟಿಕೊಂಡವರೂ ಪಾ.ವೆಂ ಅವರನ್ನು ಗುರುವಾಗಿ ಕಂಡರು. ತನ್ನ ಮಗು ಮೃತಪಟ್ಟಾಗ ಶೋಕಿಸದ ಪಾ.ವೆಂ ಗಾಂಧೀಜಿ ಸತ್ತಾಗ ಅತ್ತಿದ್ದರು ಎಂಬುದನ್ನು 'ಪತ್ರಕರ್ತರ ಆಚಾರ್ಯ ಪಾ.ವೆಂ ಆಚಾರ್ಯ' ಪುಸ್ತಕದಲ್ಲಿ ದಾಖಲಿಸಿದ್ದಾರೆ ಡಾ। ಶ್ರೀನಿವಾಸ ಹಾವನೂರು.

## ■ ಅನಧಿಕೃತ ಅರ್ಥಶಾಸ್ತ್ರಜ್ಞ

ಅವರು ಬೆಳಗ್ಗೆ 8 ಗಂಟೆಗೆ ಹೋಗುವಾಗ ನಾವು ಏಳುತ್ತಿರಲಿಲ್ಲ, ರಾತ್ರಿ 11-12 ಗಂಟೆಗೆ ಬರುವಾಗ ನಾವು ಮಲಗಿರುತ್ತಿದ್ದೆವು. ಆರಂಭಿಕ ಹಂತದಲ್ಲಿ ಕಸ್ತೂರಿಯ 2-3ನೆಯ ಬರಹಗಳು ತಂದೆಯವರದ್ದೇ ಆಗಿದ್ದವು. ಆಗ ಬೇರೆ ಬೇರೆ ಹೆಸರುಗಳಲ್ಲಿ ಬರೆಯುತ್ತಿದ್ದರು. ಆ ಕಾಲದಲ್ಲಿ ಇಂಗ್ಲೆಂಡ್‌ನ ವಿಜ್ಞಾನ ಡೈಜೆಸ್ಟ್, ರೀಡರ್ಸ್ ಡೈಜೆಸ್ಟ್, ಲೈಫ್ ಮ್ಯಾಗಜಿನ್ ಇತ್ಯಾದಿ ಪುಸ್ತಕಗಳನ್ನು ಓದುತ್ತಿದ್ದರು. ನಾನೊಬ್ಬ ಅರ್ಥಶಾಸ್ತ್ರದ ಪ್ರಾಧ್ಯಾಪಕ. ಆದರೆ ನನಗಿಂತ ಚೆನ್ನಾಗಿ ತಂದೆಗೆ ಪ್ರಾಕ್ಟಿಕಲ್ ಅರ್ಥಶಾಸ್ತ್ರ ಗೊತ್ತಿತ್ತು.

● **ಪ್ರೊ। ರಾಧಾಕೃಷ್ಣ ಆಚಾರ್ಯ**, ಪುತ್ರ, ಪಾವೆಂ ಆಚಾರ್ಯ ಟ್ರಸ್ಟ್ ಕಾರ್ಯದರ್ಶಿ



**ಇಂದು ಪಾವೆಂ ಆಚಾರ್ಯ ಜನ್ಮ ಶತಮಾನೋತ್ಸವ**

### ವಿಭಿನ್ನ ರಾಜಕೀಯ ವಿಶ್ಲೇಷಕ

ರಶ್ಯಾದ ಕ್ರಾಂತಿಯಾದಾಗ ಕಮ್ಯುನಿಸ್ಟ್ ಚಿಂತನೆಗೆ ಮಾರುಹೋದ ಪಾ.ವೆಂ ಬಳಿಕ ಅದರ ಪೊಳ್ಳು ಗೊತ್ತಾದಾಗ ದೂರ ನಿಂತವರು. ತುರ್ತು ಪರಿಸ್ಥಿತಿ ತಪ್ಪಾಗಿದ್ದರೂ ಅನಿವಾರ್ಯತೆ ಏನಿತ್ತು ಎಂಬುದರ ಕುರಿತು ರಾಜಕೀಯ ವಿಶ್ಲೇಷಣೆಯನ್ನು 'ಇದು ಭಾರತ' ಪುಸ್ತಕದಲ್ಲಿ (1977) ಬರೆದಿದ್ದಾರೆ ಎಂಬುದರತ್ತ ಬೆಟ್ಟು ಮಾಡುತ್ತಾರೆ ಪಾ.ವೆಂ ಪುತ್ರ, ಉಡುಪಿ ಪೂರ್ಣಪ್ರಜ್ಞ ಸಂಧ್ಯಾ ಕಾಲೇಜಿನ ನಿವೃತ್ತ ಪ್ರಾಂಶುಪಾಲ ಪ್ರೊ। ರಾಧಾಕೃಷ್ಣ ಆಚಾರ್ಯ.

ಹುಟ್ಟಿನಿಂದ ಕೊನೆಯವರೆಗೂ ಆರ್ಥಿಕ ಮುಗ್ಗಟ್ಟಿದ್ದರೂ ಅದನ್ನೆಂದೂ ತೋರಗೊಡದ ಪಾ.ವೆಂ ಅವರು ಪತ್ರಕರ್ತರಿಗೆ ಯಾವತ್ತೂ ಮಾದರಿ. ಅವರ ಜನ್ಮಶತಮಾನೋತ್ಸವ ಸ್ಮರಣೆಯನ್ನು ರಥಬೀದಿ ಗೆಳೆಯರು ಹಾಗೂ ಪಾ.ವೆಂ. ಆಚಾರ್ಯ ಟ್ರಸ್ಟ್ ಜತೆಯಾಗಿ ಉಡುಪಿ ಅಂಬಲಪಾಡಿ ದೇವಳದ ಸಭಾಂಗಣದಲ್ಲಿ ಜ.31ರಂದು ಅಪರಾಹ್ನ 4 ಗಂಟೆಗೆ ಆಯೋಜಿಸಿದೆ. ಪಾ.ವೆಂ. ಆಚಾರ್ಯರ ಸುಮಾರು 15 ಕೃತಿಗಳು ಪ್ರಕಟವಾಗಿವೆ. 'ತರಂಗ'ವೂ ಸೇರಿದಂತೆ ಪ್ರಕಟಿಸಿದ ಲೇಖನ ಮಾಲೆಗಳು ಇನ್ನೂ ಪ್ರಕಟವಾಗಬೇಕಿವೆ. ಪಾ.ವೆಂ. ಆಚಾರ್ಯ ಟ್ರಸ್ಟ್ ಮುಂದಿನ ದಿನಗಳಲ್ಲಿ ಈ ಕಾಯಕವನ್ನು ಕೈಗೆತ್ತಿಕೊಳ್ಳಲು ಚಿಂತನೆ ನಡೆಸಿದೆ.

# ‘ಲಾಂಗೂಲಾಚಾರ್ಯ’ರಿಗೊಂದು ಲವ್ಲಿ ಈ-ಮ್ಯೂಸಿಯಂ!


ತಿಳಿರು ತೋರಣ

ಶ್ರೀವತ್ಸ ಜೋಶಿ

srivathsajoshi@yahoo.com




ಅಜ್ಜನ ಗೌರವಾರ್ಥ ಮೊಮ್ಮಗಳು ಪ್ರೀತ್ಯಾದರದಿಂದ ಕಟ್ಟಿಸಿರುವ ಮ್ಯೂಸಿಯಂ ಇದು. ಆ ಅಜ್ಜ ಅಂಥಿಂಥವರಲ್ಲ. ಅಕ್ಷರಗಳ ರಂಗವಲ್ಲಿ ಬಿಡಿಸಿದ ಸವ್ಯಸಾಚಿ. ಸರ್ವಕುತೂಹಲಿ ಸರ್ವಜ್ಞಾಚಾರ್ಯ. ಜಂಗಮ ವಿಶ್ವಕೋಶ. ಪದಾರ್ಥ ಚಿಂತಾಮಣಿ. ವಿದ್ವತ್ ಶಿಖಾಮಣಿ. ಹಾಗಿದ್ದೂ ‘ನನ್ನದು ಪಾಂಡಿತ್ಯ ಅಲ್ಲ, ಕುತೂಹಲ ಬುದ್ಧಿಯ ಹುಚ್ಚಾಟ’ ಎಂದು ವಿನಮ್ರಭಾವದಿಂದ ಈ ಭೂಮಿಯಲ್ಲಿ ಬದುಕಿ ಅಕ್ಷರಗಳಲ್ಲಿ ಅ-ಕ್ಷರರಾದವರು. ಭೌತಿಕವಾಗಿಯೂ ಉಳಿದಿರುತ್ತಿದ್ದರೆ ಈಗವರಿಗೆ 105 ವರ್ಷ. ಅವರೇ ಪಾಡಿಗಾರು ವೆಂಕಟರಮಣ ಆಚಾರ್ಯ ಅಥವಾ ಎರಡೇ ಅಕ್ಷರಗಳಲ್ಲಿ ‘ಪಾವೆಂ’. ಕಸ್ತೂರಿ ಮಾಸಪತ್ರಿಕೆಯನ್ನು ಕನ್ನಡಿಗರಿಗೊಂದು ಜ್ಞಾನದ ಬೆಳಕಿಂಡಿಯಾಗಿ ರೂಪಿಸಿದವರು. ಕರ್ಮವೀರ ಪತ್ರಿಕೆಯಲ್ಲಿ ಲಾಂಗೂಲಾಚಾರ್ಯ ನಾಮದಿಂದ ಹರಟೆ ಬರೆದು ಓದುಗರನ್ನು ನಕ್ಕುನಗಿಸಿದವರು. ಪತ್ರಿಕೋದ್ಯಮಕ್ಕಾಗಿ ಅಖಿಲ ಭಾರತ ಮಟ್ಟದ ಬಿ.ಡಿ. ಗೋಯೆಂಕಾ ಪ್ರಶಸ್ತಿಯ ಗೌರವಕ್ಕೆ ಪಾತ್ರರಾದವರು. ಈಗಿನದಕ್ಕಿಂತ ಒಂದು ತಲೆಮಾರು ಹಿಂದಿನ ಪ್ರತಿಯೊಬ್ಬ ಅಕ್ಷರಪ್ರೇಮಿ ಕನ್ನಡಿಗನಿಗೆ/ಕನ್ನಡಿತಿಗೆ ‘ಪಾವೆಂ’ ಎಂದೊಡನೆ ಅದ್ಭುತರಮ್ಯ ನೆನಪುಗಳ ಗಣಿಯೇ ಸ್ಫೋಟವಾದಂತೆ. ಅಂತಹ ಏಕಮೇವಾದ್ವಿತೀಯ ಪಾವೆಂ ಅವರ ಕಿರುಪರಿಚಯ, ಪಿಡಿಎಫ್ ರೂಪದಲ್ಲಿ ಅವರ ಕೃತಿಗಳು, ಪಾವೆಂರವರ ಬಗ್ಗೆ ಬೇರೆಬೇರೆಯವರು ಪತ್ರಿಕೆಗಳಲ್ಲಿ ಬರೆದ ಬರಹಗಳು, ಪಾವೆಂರವರಿಗೆ ಬಂದ ಕೈಬರಹದ ಪತ್ರಗಳ ಡಿಜಿಟಲ್ ಪ್ರತಿ, ಮತ್ತೊಂದಿಷ್ಟು ಛಾಯಾಚಿತ್ರಗಳು... ಇವೆಲ್ಲ ಸೇರಿ ಈ-ಮ್ಯೂಸಿಯಂ ನಿರ್ಮಾಣವಾಗಿರುವುದು. ಇದರ ರೂವಾರಿ, ಪಾವೆಂರವರ ಮೊಮ್ಮಗಳು (ಮಗಳ ಮಗಳು) ಛಾಯಾ ಉಪಾಧ್ಯ. ಈ-ಮ್ಯೂಸಿಯಂಅನ್ನು ಇಂದಿನ ಅಂಕಣದಲ್ಲಿ ನಿಮಗೆಲ್ಲರಿಗೂ ಪರಿಚಯಿಸುವುದು ಪಾವೆಂರವರ ಒಬ್ಬ ಪಾಮರ ಅಭಿಮಾನಿಯಾಗಿ ನನಗೆ ಅತೀವ ಸಂತಸದ ವಿಚಾರ. ಪಾವೆಂ ಜತೆ ಮಾತನಾಡಿ ಬರುವುದೆಂದರೆ ಒಂದು ಸಲ ಕಣ್ತೆರೆದುಕೊಂಡು ವಿಶ್ವಪರ್ಯಟನೆ ಮಾಡಿದಂತೆ ಎಂದಿದ್ದರು ಖ್ಯಾತ ವಿದ್ವಾಂಸ ಮತ್ತು ಲೇಖಕ ಕು.ಶಿ.ಹರಿದಾಸ ಭಟ್ಟ. ಅವರಾದರೋ ಪಾವೆಂ ಸಮಕಾಲೀನರಾಗಿದ್ದವರು. ಮನದಣಿಯೆ ಮಾತನಾಡಿ ಬರುತ್ತಿದ್ದವರು. ನಮಗೀಗ ಆ ಸೌಭಾಗ್ಯವಿಲ್ಲ. ಆದರೆ ಈ-ಮ್ಯೂಸಿಯಂನಲ್ಲೊಮ್ಮೆ ಹೊಕ್ಕು ಹೊರಬಂದರೆ ‘ಒಂದು ಸಲ ಕಣ್ತೆರೆದುಕೊಂಡು ವಿಶ್ವಪರ್ಯಟನೆ ಮಾಡಿದ’ ಅನುಭವವೇ. ಅದನ್ನು ನೀವೇ ಸ್ವತಃ ತಿಳಿದುಕೊಳ್ಳುವಿರಂತೆ.

ಮೊದಲಿಗೆ ಈ-ಮ್ಯೂಸಿಯಂನಲ್ಲಿ ‘ಕೃತಿಗಳು’ ಹಾಲ್‌ಗೆ ಬನ್ನಿ. ಪಾವೆಂರವರ ಒಂದೊಂದೇ ಕೃತಿಯನ್ನು ಕೈಗೆತ್ತಿಕೊಂಡು ಪುಟ ತೆರೆದು ಕಣ್ಣಾಡಿಸಿ. ಅದು ‘ವಿಜ್ಞಾನ ವಿಸ್ಮಯ’ ಪುಸ್ತಕ ಅಂತಾದರೆ ಅದರಲ್ಲಿ ಶೂನ್ಯದಿಂದ ಅನಂತದವರೆಗೆ ಎಲ್ಲ ಇದೆ! ಮಂಗಳಕ್ಕೆ ಮಾನವ ಯಾತ್ರೆ, ಚಂದ್ರಲೋಕದಲ್ಲಿ ಮನುಷ್ಯ ವಸತಿ ಸಾಧ್ಯತೆ, ಡೈನೊಸರ್‌ಗಳ ಅದ್ಭುತ ಪ್ರಪಂಚ, ಕ್ಯಾನ್ಸರ್ ಸಂಶೋಧನೆಯಲ್ಲಿ ಹೊಸ ಹೆಜ್ಜೆಗಳು, ರಕ್ತದ ಗುಂಪಿನ ರಹಸ್ಯ, ಕಾರ್ಬನ್-14ರಿಂದ ಕಾಲನಿರ್ಣಯ, ಬ್ರಹ್ಮಗುಪ್ತ, ಕೊಪರ್ನಿಕಸ್, ಗೆಲಿಲಿಯೋ, ರಾಮನ್ ಮುಂತಾದ ವಿಜ್ಞಾನಿಗಳ ಪರಿಚಯಲೇಖನಗಳು. ‘ಜಗದ್ವಿಖ್ಯಾತರು’ ಪುಸ್ತಕ ಎತ್ತಿಕೊಂಡಿರಾದರೆ ಅದರಲ್ಲಿ ನಿಮಗೆ ದಾರ್ಶನಿಕ ಪ್ಲೇಟೋ, ಚಿತ್ರಕಲಾವಿದ ಡ-ವಿಂಚಿ, ಸಂಗೀತದ ಬಾಲಾದ್ಭುತ ಮೊಜಾರ್ಟ್, ಫ್ರೆಂಚ್ ಚಕ್ರವರ್ತಿ ವಿಕ್ಟರ್ ಹ್ಯೂಗೋ, ಅಮೆರಿಕದ ಹಾಸ್ಯಲೇಖಕ ಮಾರ್ಕ್ ಟ್ವೇನ್, ವಿಜ್ಞಾನಿ ಐನ್‌ಸ್ಟೈನ್, ಕವಿ ಪ್ಯಾಬ್ಲೊ ನೆರುಡಾ, ಚದುರಂಗ ಚಕ್ರವರ್ತಿ ಬಾಬಿ ಫಿಷರ್... ಎಲ್ಲ ಭೇಟಿಯಾಗುತ್ತಾರೆ. ‘ಖ್ಯಾತಿವೆತ್ತ ಭಾರತೀಯರು’ ಪುಸ್ತಕವಾದರೆ ಅಂಬೇಡ್ಕರ್, ಆನಂದಿಬಾಯಿ ಜೋಶಿ, ಕಿರ್ಲೋಸ್ಕರ್, ಜಿಡ್ಡು ಕೃಷ್ಣಮೂರ್ತಿ, ಪಂಡಿತ್ ಭೀಮಸೇನ್ ಜೋಶಿ, ಸೇನಾಧಿಪತ್ ಮಾನೆಕ್ ಷಾ, ಲಾಲಬಹಾದ್ದೂರ್ ಶಾಸ್ತ್ರಿ ರಾಮಮನೋಹರ ಲೋಹಿಯಾ, ಸರೋಜಿನಿದೇವಿ, ವೀಣೆ ಶೇಷಣ್ಣ, ರಾಸ್ವಸಂ ಸಂಸ್ಥಾಪಕ ಹೆಡಗೇವಾರ್ ಮುಂತಾದವರೆಲ್ಲ ಸಿಗುತ್ತಾರೆ. ಪಾವೆಂ ಅಕ್ಷರಗಳ ಮೂಲಕ ಆ ಮಹಾನ್ ವ್ಯಕ್ತಿಗಳ ಪರಿಚಯ ಮಾಡಿಕೊಡುತ್ತಾರೆ. ‘ಪಾವೆಂ ಕಸ್ತೂರಿ’ ಸನ್ಮಾನಗ್ರಂಥ ಎತ್ತಿಕೊಂಡಿರಾದರೆ ಅದರಲ್ಲಿ, ಶಂ.ಬಾ.ಜೋಶಿ, ಹಾ.ಮಾ. ನಾಯಕ, ಕು.ಶಿ.ಹರಿದಾಸ ಭಟ್, ಯು.ಆರ್.ಅನಂತಮೂರ್ತಿ, ಗೋಪಾಲಕೃಷ್ಣ ಅಡಿಗ, ಎಸ್.ಎಲ್.ಭೈರಪ್ಪ, ಮಾಧವ ಮಹಿಷಿ ಮುಂತಾದ ಘಟಾನುಘಟಿಗಳು ಮುಕ್ತಕಂಠದಿಂದ ಪಾವೆಂರವರ ಗುಣಗಾನ ಮಾಡಿದ್ದು ಓದಲಿಕ್ಕೆ ಸಿಗುತ್ತದೆ. ಅಲ್ಲೇ ಪಕ್ಕ ‘ಬ್ರಾಹ್ಮಣರೇನು ಮಾಡಬೇಕು?’ ಪುಸ್ತಕದ ಮೇಲೆ ನೀವು ದೃಷ್ಟಿ ಹಾಯಿಸದಿರಲಾರಿರಿ. ‘1960ನೆಯ ದಶಕದಿಂದ ನಡೆದು ಬಂದ ಒಂದು ತಪ್ಪು ಅಭಿಪ್ರಾಯವೆಂದರೆ ಬ್ರಾಹ್ಮಣರು ಮುಂದುವರಿದವರು ಮಾತ್ರವಲ್ಲ ಇತರರನ್ನು ಶೋಷಿಸುವವರು, ವಿದ್ಯೆಯನ್ನು ಗುತ್ತಿಗೆ ಹಿಡಿದವರು, ಇತರ ಜಾತಿಯವರ ಸೌಲಭ್ಯಗಳನ್ನು ಕಸಿದುಕೊಳ್ಳುವವರು ಇತ್ಯಾದಿಯಾಗಿ ಸಾಹಿತಿಗಳು ಮಾಡುತ್ತಿದ್ದ ಮಿಥ್ಯಾರೋಪಗಳ ನಿರಾಕರಣೆ ಇಲ್ಲಿದೆ. ಹಾಗೆಂದು ಈ ವಿವೇಚನೆ ಏಕಪಕ್ಷೀಯವಲ್ಲ, ಬ್ರಾಹ್ಮಣವರ್ಗದವರ ತಪ್ಪುಗಳನ್ನೂ ತೋರಿಸಿ ಎಚ್ಚರಿಸಿದ್ದಾರೆ’ ಎಂದು ಶ್ರೀನಿವಾಸ ಹಾವನೂರರು ಮುನ್ನುಡಿಯಲ್ಲಿ ಬರೆದಿದ್ದನ್ನೋದಿ ಇಡೀ ಪುಸ್ತಕ ಓದಿಮುಗಿಸುವ ನಿರ್ಧಾರಕ್ಕೆ ಬಂದರೂ ಬಂದೀರಿ!

ಅಷ್ಟು ಗಂಭೀರ, ಕಾಂಟ್ರೊವರ್ಸಿಯಲ್ ವಿಚಾರ ನಿಮಗೆ ಬೇಡವಾದರೆ ‘ಲೋಕದ ಡೊಂಕು’ ಪುಸ್ತಕವನ್ನೆತ್ತಿಕೊಳ್ಳಿ. ಲಾಂಗೂಲಾಚಾರ್ಯರ ಲಘುಹರಟೆಗಳ ಸಂಕಲನವದು. ಅದರಲ್ಲಿ ‘ಸ್ನಾನಾಸ್ನಾನ ವಿವೇಕಂ’ ಎಂಬ ಹರಟೆಯನ್ನೋದಿ. ‘ನೀವು ಆಲಸಿಗರೇ? ನಿಮಗೆ ಸ್ನಾನ ಮಾಡುವುದೆಂದರೆ ನಾಯಿಯನ್ನೊಯ್ದು ನೀರಿಗೆ ತಳ್ಳಿದಂತಾಗುತ್ತದೆಯೇ? ಹಾಗಾದರೆ ವಿಜ್ಞಾನ ನಿಮ್ಮ ಪಕ್ಷದಲ್ಲಿದೆ. ಮೈನಾರುವ ಮೈನಾರಿಟಿಗೆ ಸೇರಿದವರು ನೀವೆಂದು ಯಾರಾದರೂ ಮೂಗು ಮುರಿದರೆ ನೀವು ನೇರವಾಗಿ ಅಮೆರಿಕದ ಡಾ. ಓಸ್‌ಬೋರ್ನರನ್ನು ತೋರಿಸಿರಿ. ಈ ವಿದ್ವಾನ್ ತೊಗಲತಜ್ಞರು, ಮೇಲಿಂದಮೇಲೆ ಸ್ನಾನ ಮಾಡುವವರು ಚರ್ಮರೋಗಗಳಿಗೆ ಆಗರವಾಗುವರೆಂದು ಎಚ್ಚರಿಕೆ ಕೊಟ್ಟಿದ್ದಾರೆ. ಜಗತ್ತಿನಲ್ಲಿ ಅತಿ ಕಡಿಮೆ ಸ್ನಾನ ಮಾಡುವ ಜನಾಂಗಗಳೇ ಅತಿ ಕಡಿಮೆ ಚರ್ಮರೋಗವುಳ್ಳ ಜನಾಂಗಗಳೂ ಹೌದಂತೆ. ಒಬ್ಬೊಬ್ಬನ ಕೈಬೆರಳ ಮುದ್ರೆಯೂ ಒಂದೊಂದು ತರಹ ಇರುವಹಾಗೆ ಪ್ರತಿಯೊಬ್ಬನ ಮೈ-ನಾರಿಟಿಯೂ ಅವನದೇ ಸ್ಪೆಷಲ್ ಆಗಿರುವುದರಿಂದಲೇ ನಾಯಿಗಳು ಮನುಷ್ಯರನ್ನು ಬೇರೆಬೇರೆಯಾಗಿ ಗುರುತಿಸುತ್ತವೆಯೆಂದು ಶುನಕತಜ್ಞರ ಹೇಳಿಕೆ. ದೇವರು ಜೀವಿಗಳನ್ನು ಈ ಭೂಮಿಗೆ ಕಳಿಸುವಾಗ ಸರಿಯಾದ ಪ್ರವೃತ್ತಿಗಳನ್ನು ಇಟ್ಟೇ ಕಳಿಸಿರುತ್ತಾನೆ. ಇದು ನಾಯಿ ಬೆಕ್ಕುಗಳಿಗೆಷ್ಟೋ ಅಷ್ಟೇ ಮನುಷ್ಯರಿಗೂ ಅನ್ವಯಿಸುತ್ತದೆ. ಶಿಶುಗಳು ಎಂದೂ ಸ್ನಾನವನ್ನು ಮೆಚ್ಚುವುದಿಲ್ಲ. ಮುಖ್ಯವಾಗಿ, ಕಿವಿಯ ಹಿಂದೆ, ಕುತ್ತಿಗೆಯ ನೆರಿಗೆ ಮುಂತಾದ ಸಂಧಿಪ್ರದೇಶಗಳನ್ನು ಏಕೆ ತಿಕ್ಕಿ ತೊಳೆಯಬೇಕೆಂದು ಅವರಿಗೆ ಅರ್ಥವಾಗುವುದೇ ಇಲ್ಲ. ಆದರೆ ನಾಗರಿಕತೆಯ ಸಂಪರ್ಕ ಅವರನ್ನು ದೇವರು ಕೊಟ್ಟ ವಾಸನೆಯಿಂದ ಸೆಳೆದುಕೊಂಡು ಸಾಬೂನಿನ ವಾಸನೆಯ ಬೆನ್ನು ಹತ್ತಿಸುತ್ತದೆ. ಇವರನ್ನು ನಿರ್-ವಾಸಿತರು ಎನ್ನಬೇಕು. ಭಾರತವಂತೂ ನಿರ್-ವಾಸಿತರದೇ ದೇಶ. ನಾವು ತ್ರಿಕಾಲಸ್ನಾನದ ಹುಚ್ಚರು. ಮುಸ್ಲಿಮರಿಗೆ ವಾರಕ್ಕೊಮ್ಮೆ ಸ್ನಾನಮಾಡಿದರೆ ಸಾಕೆಂದು ಅವರ ಧರ್ಮ ಪರವಾನಗಿ ಕೊಡುತ್ತದಂತೆ. ಹಿಂದುಗಳಲ್ಲಿಯೂ ಇಂಥ ಜಾಣರು ಇಲ್ಲದೆ ಇಲ್ಲ. ಚರ್ಮವ ತೊಳೆದರೆ ಕರ್ಮವು ಹೋದೀತೆ? ಎಂದು ದಾಸರು ಬಡಿದುಕೊಂಡಿದ್ದಾರೆ. ಆದರೆ ನಾವೆಲ್ಲಿ ಆಲಿಸುತ್ತೇವೆ? ತೊಳೆದೂ ತೊಳೆದೂ ಚರ್ಮವನ್ನು ಸವೆಸುತ್ತಲೇ ಇರುತ್ತೇವೆ. ಚರ್ಮವನ್ನು ತಿಕ್ಕೀತಿಕ್ಕೀ ಅದರ ಸಂವೇದನಶಕ್ತಿಯನ್ನು ಕಡಿಮೆ ಮಾಡಿಕೊಂಡು, ಸ್ನಾನಪ್ರಿಯವಾದ ಆ ಇನ್ನೊಂದು ಪ್ರಾಣಿಯಂತೆ ದಪ್ಪಚರ್ಮದವರಾಗಿಬಿಟ್ಟಿದ್ದೇವೆ.’

ಅದೇ ಪುಸ್ತಕದಲ್ಲಿ ‘ಇಡಲೀ ಶಾಸ್ತ್ರ’ವನ್ನೂ, ಜೊಲ್ಲು ಸುರಿಯದಂತೆ ಜಾಗ್ರತೆವಹಿಸಿ ಓದಿ. ‘ಪಾವೆಂ ನಾವು ಕಂಡಂತೆ’ ಪುಸ್ತಕದಲ್ಲಿ ಅವರ ಮಕ್ಕಳು ಮೊಮ್ಮಕ್ಕಳು ಸೊಸೆಯಂದಿರು, ಅಳಿಯಂದಿರು ಆಪ್ತಭಾವವನ್ನು ಅಕ್ಷರಕ್ಕಿಳಿಸಿದ್ದಿದೆ, ಹೃದಯಸ್ಪರ್ಶಿ ಟಿಪ್ಪಣಿಗಳಲ್ಲಿ. ಮಗ ರಾಧಾಕೃಷ್ಣ ಆಚಾರ್ಯರ ಲೇಖನದಲ್ಲಿ ‘ನಮ್ಮ ತಂದೆಯವರ ಆರೋಗ್ಯ ಯಾವಾಗಲೂ ಅಷ್ಟಕ್ಕಷ್ಟೇ. ಆದರೂ ಅವರು ತನ್ನ ಅನಾರೋಗ್ಯದ ನೆಪವೊಡ್ಡಿ ಕೆಲಸಕ್ಕೆ ಗೈರುಹಾಜರಾಗುತ್ತಿದ್ದದ್ದು ಅನಿವಾರ್ಯ ಪ್ರಸಂಗಗಳಲ್ಲಿ ಮಾತ್ರ. ಮಾತ್ರೆಗಳನ್ನು ನುಂಗಿಕೊಂಡು ಸದಾ ಕೆಲಸದಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದದ್ದೇ ಜಾಸ್ತಿ. ಒಮ್ಮೆ ತೀವ್ರ ಅನಾರೋಗ್ಯದ ನಿಮಿತ್ತ ನಿರಂತರವಾಗಿ ಆಫೀಸಿಗೆ ಹೋಗುವುದು ದುಸ್ತರವಾದಾಗ ಅಂದು ಲೋಕಶಿಕ್ಷಣ ಟ್ರಸ್ಟ್ ಪತ್ರಿಕಾಸಮೂಹಗಳ ಪ್ರಧಾನ ಸಂಪಾದಕರಾಗಿದ್ದ ಮೊಹರೆ ಹನುಮಂತರಾಯರಿಗೆ ತನ್ನಿಂದ ಕಾರ್ಯಾಲಯದ ಕೆಲಸಗಳಿಗೆ ವ್ಯತ್ಯಯವುಂಟಾಗುತ್ತಿರುವುದರಿಂದ ತನ್ನನ್ನು



ಕೆಲಸದಿಂದ ಬಿಡುಗಡೆ ಮಾಡಬೇಕೆಂದು ಬರೆದುಕೊಂಡಿದ್ದರು. ಆದರೆ ತಂದೆಯವರ ಕರ್ತವ್ಯನಿಷ್ಠೆಯ ಬಗ್ಗೆ ಭರವಸೆಯಿದ್ದ ಆ ಮಹಾನುಭಾವ ನಿನಗೆ ಆಫೀಸಿಗೆ ಬರಲು ತೊಂದರೆಯಾಗುವುದಾದರೆ ಚಿಂತಿಲ್ಲ. ಮನೆಯಲ್ಲೇ ಕುಳಿತು ನಿನ್ನ ಕೆಲಸ ಮುಂದುವರಿಸಪ್ಪಾ ಎಂದು ರಾಜೀನಾಮೆ ಪತ್ರವನ್ನು ಮರಳಿಸಿದ್ದರು’ ಅಂತ ಬರೆದಿದ್ದಾರೆ. ಅಂದರೆ, ಪಾವೆಂ ಆ ಕಾಲದಲ್ಲೇ ‘ವರ್ಕ್ ಫ್ರಂ ಹೋಮ್’ ಮಾಡಿದ ಖ್ಯಾತಿವಂತ!

ಪಾವೆಂ ಅಸ್ತಮಾದಿಂದ ಬಳಲುತ್ತಿದ್ದರಷ್ಟೆ? ಅದನ್ನೇ ಲೇವಡಿ ಮಾಡಿಕೊಂಡು ‘ನನ್ನ ಆಸ್ತ್ಮಾ ಷಷ್ಟ್ಯಬ್ದಿ’ ಎಂಬ ಹರಟೆ ಬರೆದಿದ್ದಾರೆ. ‘ಈ ವರ್ಷ ನಾನು ಆಸ್ತ್ಮಾಳ ಅರ್ಧ ಷಷ್ಟ್ಯಬ್ದಿಯನ್ನು ಆಚರಿಸಲು ನಿರ್ಧರಿಸಿದ್ದೇನೆ. ನನಗೆ ಆಸ್ತ್ಮಾ ಪ್ರಾರಂಭವಾಗಿ ಈ ನವೆಂಬರಿಗೆ ಸರಿಯಾಗಿ ಮೂವತ್ತು ವರ್ಷಗಳು ತುಂಬುತ್ತಿವೆ. ಈ ಸಂದರ್ಭದಲ್ಲಿ ನಾನು ಈ ಮೂವತ್ತು ವರ್ಷಗಳಲ್ಲಿ ನುಂಗಿದ, ಮೂಸಿದ, ಮತ್ತು ಚುಚ್ಚಿಸಿಕೊಂಡ ಹೋಮಿಯೋಪಥಿ, ಅಲೋಪಥಿ, ಆಯುರ್‌ಪಥಿ ಮೊದಲಾದ ಪಥಿಗಳ ಒಟ್ಟು 37 ಬಗೆಯ ಔಷಧಗಳ ಒಂದು ಪ್ರದರ್ಶನವನ್ನು ಏರ್ಪಡಿಸಬೇಕೆಂದಿದ್ದೇನೆ. ಮತ್ತು, ಆಸ್ತ್ಮಾಕ್ಕೆ ನಾನು ಪ್ರಯೋಗಿಸಬೇಕಾದ ರಾಮಬಾಣೋಪಾಯಗಳಾವುವೆಂಬ ಬಗ್ಗೆ ನನ್ನ ವಿವಿಧ ಮಿತ್ರರಿಂದ ಬಂದ ಉಪದೇಶಗಳ ಸಂಗ್ರಹವನ್ನು ಪ್ರಕಟಿಸಬೇಕೆಂದಿದ್ದೇನೆ. ಈ ಉಪಾಯಗಳು ದೀರ್ಘಶ್ವಾಸ ಬಿಡುವುದರಿಂದ ಬೀಡಿ ಸೇದುವವರೆಗೆ, ಮಂತ್ರ ಹಾಕಿಸಿಕೊಳ್ಳುವುದರಿಂದ ಮೀನು ನುಂಗುವುದರವರೆಗೆ ಬಹುಮುಖವಾಗಿವೆ. ಇದೇ ಸಂದರ್ಭದಲ್ಲಿ ನಾನು ಆಸ್ತ್ಮಾಕ್ಕಾಗಿ ಮಧ್ಯರಾತ್ರಿಯಲ್ಲಿ ಕರೆಸಿದ ಒಟ್ಟು 37 ಡಾಕ್ಟರರಿಗೊಂದು ಪಾರ್ಟಿಯನ್ನೂ ಕೊಡಬೇಕೆಂದಿದ್ದೇನೆ. ನನ್ನ ಯೋಜನೆಯನ್ನು ಕೇಳಿ ನನ್ನ ಹೆಂಡತಿ ಸ್ವಲ್ಪ ಸೆಟೆದುಕೊಂಡಳು. ‘ನನ್ನನ್ನು ಮದುವೆಯಾಗಿ ಮೂವತ್ತೈದು ವರ್ಷಗಳಾದರೂ ನೀವು ಯಾವ ಸಮಾರಂಭವನ್ನೂ ಮಾಡಲಿಲ್ಲ. ಈಗ ಆಸ್ತ್ಮಾಕ್ಕೆ ಅರ್ಧಷಷ್ಟ್ಯಬ್ದಿ ಮಾಡಬೇಕೆನ್ನುತ್ತೀರಿ! ನನಗಿಂತ ಗೂರಲೇ ಮೇಲಾಗಿಹೋಯಿತು ನಿಮಗೆ!’ ಎಂದು ದೂರಿಕೊಂಡಳು. ‘ಪ್ರಿಯೇ! ಸ್ವಲ್ಪ ನ್ಯಾಯಾನ್ಯಾಯ ನೋಡು. ನಿನ್ನನ್ನು ಹೊರಗೆಹಾಕಲು ನಾನು ಎಂದೂ ಪ್ರಯತ್ನಿಸಿಲ್ಲ. ಆದರೆ ಈ ಆಸ್ತ್ಮಾ ನೋಡು. ನಾನು ಎಂಥೆಂಥ ಪ್ರಯೋಗಗಳನ್ನು ಮಾಡಿದರೂ ನನ್ನನ್ನು ಬಿಡದೆ ಈ ವಯಸ್ಸಿನಲ್ಲಿಯೂ ನನ್ನನ್ನು ಸೇವಿಸುತ್ತಿದ್ದಾಳೆ. ನಿಮ್ಮಿಬ್ಬರಲ್ಲಿ ಯಾರ ಪಾತಿವ್ರತ್ಯ ಹೆಚ್ಚು, ನೀನೇ ಹೇಳು. ಸವತಿ ಮತ್ಸರ ಬೇಡ.’ ಎಂದು ಸಬೂಬು ಹೇಳಿದೆ. ಇದಕ್ಕೆ ಅವಳ ಹೆಣ್ಣು ಬತ್ತಳಿಕೆಯಲ್ಲಿಯೂ ಯಾವ ಪ್ರತ್ಯಸ್ತ್ರ ಇರಲಿಲ್ಲ.’

ಅಷ್ಟೇ ಕಚಗುಳಿಯಿಡುವುದು ‘ಓದುಗರೊಡನೆಯ ಹರಟೆಗಳು’ ಪುಸ್ತಕದಲ್ಲಿ ‘ಪಂಪ ಹಾಗೂ ಪಂಪ್’ ಹರಟೆ: ‘ಪಂಪ ಕವಿಯನ್ನು ಆದಿಪಂಪನೆಂದೂ, ಸುಕವಿನಿಳಿಂಪನೆಂದೂ, ನಾಡೋಜ ಪಂಪನೆಂದೂ ಹೆಸರಿಸಲಾಗಿದೆ. ಈ ಹೆಸರಿಗೂ ಈಗ ನೀರು ಎತ್ತಲು ಮತ್ತು ಟ್ಯೂಬುಗಳಿಗೆ ಗಾಳಿಹಾಕಲು ಉಪಯೋಗಿಸುವ ಯಂತ್ರಕ್ಕೂ ಏನಾದರೂ ಸಂಬಂಧವುಂಟೇ ಎಂಬುದು ವಿಚಾರಣೀಯವಾಗಿದೆ. ಅವನು ಕವಿಯಲ್ಲದೆ ಸೇನಾನಾಯಕನೂ ಆಗಿದ್ದನೆಂದು ಗೊತ್ತಾಗಿದೆ. ಹೀಗೆ ಒಂದಕ್ಕಿಂತ ಹೆಚ್ಚು ಮುಖಗಳಲ್ಲಿ ಪ್ರತಿಭೆಯುಳ್ಳ ಅವನು ಪಂಪುಗಳ ಮೂಲ ನಿರ್ಮಾಪಕನಾಗಿದ್ದನೆಂದು ಹೇಳುವುದು ಅಸಂಗತವಾಗಿಲ್ಲ. ಚೇಂಬರ್ಸ್ ಇಂಗ್ಲಿಷ್ ಕೋಶದಲ್ಲಿ ಪಂಪ್ ಶಬ್ದದ ನಿರುಕ್ತದ ಬಗ್ಗೆ ಒರಿಜಿನ್ ಅನ್‌ನೋನ್ ಅಂದರೆ ಮೂಲ ಗೊತ್ತಿಲ್ಲ ಎಂದು ಪ್ರಾಂಜಲವಾಗಿ ಒಪ್ಪಿಕೊಂಡಿದ್ದಾರೆ. ಆದ್ದರಿಂದ ಪಂಪನಿಗೂ ಪಂಪಿಗೂ ಸಂಬಂಧವಿಲ್ಲೆಂದು ಯಾರಾದರೂ ನಿಸ್ಸಂದಿಗ್ಧವಾಗಿ ಸಿದ್ಧಪಡಿಸುವವರೆಗೆ ಆತನೇ ಪಂಪುಗಳ ನಿರ್ಮಾಪಕನೆಂದು ನನ್ನ ಊಹೆ. ಅರಿಕೇಸರಿ ರಾಜನು ಅವನಿಗೆ ಉಂಬಳಿ ಕೊಟ್ಟ ಧರ್ಮಪುರಿ ಅಗ್ರಹಾರದಲ್ಲಿ ಒಂದು ದೊಡ್ಡ ಕೆರೆ ಇತ್ತೆಂದು ಶಾಸನದಿಂದ ತಿಳಿಯುತ್ತದೆ. ಈ ಕೆರೆಗೆ ತನ್ನ ಆವಿಷ್ಕಾರವಾದ ಪಂಪು ಹಾಕಿ ಅವನು ತನ್ನ ದತ್ತಿಯ ಹೊಲಗಳಿಗೆ ನೀರು ಹಾಯಿಸುತ್ತಿದ್ದಿರಬೇಕು. ಪಂಪ ಸೃಷ್ಟಿಸಿದ್ದರಿಂದ ಅದು ಪಂಪೆನಿಸಿತು.’

ಈ-ಮ್ಯೂಸಿಯಂ ವಿಚಾರವನ್ನು ನಾನು ಇಷ್ಟೊಂದು ಸಡಗರದಿಂದ ನಿಮ್ಮೊಡನೆ ಹಂಚಿಕೊಳ್ಳಲಿಕ್ಕೆ ಇನ್ನೊಂದು ಕಾರಣವಿದೆ. ರಾಮಾಯಣದಲ್ಲಿ ರಾಮಸೇತುನಿರ್ಮಾಣದಲ್ಲಿ ಪುಟ್ಟದೊಂದು ಅಳಿಲು ಕೂಡ ಭಾಗಿಯಾಗಿತ್ತು ತಾನೆ? ತನ್ನ ಮೈಗಂಟಿದ ಮರಳನ್ನು ಸೇತುವೆಯ ಕಲ್ಲುಗಳ ನಡುವೆ ತುಂಬಿಸಿತ್ತು ತಾನೆ? ಅಳಿಲು ಮಾಡಿದ್ದರ ಒಂದೇಒಂದು ಕಣದಷ್ಟು ಕೆಲಸವನ್ನು ಈ-ಮ್ಯೂಸಿಯಂ ನಿರ್ಮಾಣದಲ್ಲಿ ನಾನೂ ಮಾಡಿದ್ದೇನೆ! ಅದೇನೆಂದರೆ, ಛಾಯಾ ಉಪಾಧ್ಯ ನನಗೆ ಓದುಗಮಿತ್ರರಾಗಿ ಪರಿಚಿತರು. ವರ್ಷಗಳ ಕೆಳಗೆ ಫೇಸ್‌ಬುಕ್‌ನಲ್ಲಿ ಇಂಟ್ರಡ್ಯೂಸ್ ಮಾಡಿಕೊಳ್ಳುವಾಗ ತಾನು ಪಾವೆಂ ಆಚಾರ್ಯರ ಮೊಮ್ಮಗಳು ಎಂದು ನಿಗರ್ವಿಯಾಗಿ ಆದರೆ ಅಭಿಮಾನದಿಂದ ಹೇಳಿದ್ದರು. ಪಾವೆಂರವರ ಬಗ್ಗೆ ಅಪಾರ ಗೌರವಾದರವಿರುವವನು ನಾನೆಂದು ಅವರಿಗೆ ಗೊತ್ತಾಗಿತ್ತು. ಆಮೇಲೆ ತಿಳಿರುತೋರಣ ಅಂಕಣಬರಹವೊಂದರಲ್ಲಿ ಕನ್ನಡದ ಅಶ್ವಿನೀದೇವತೆ ಎಂಬ ಖ್ಯಾತಿಯ ಎ. ಆರ್.ಕೃಷ್ಣಶಾಸ್ತ್ರೀ ಅವರ ಕೃತಿಗಳು ಡಿಜಿಟಲ್ ರೂಪದಲ್ಲಿ ವಿಶ್ವಾದ್ಯಂತ ಕನ್ನಡಿಗರಿಗೆ ಉಚಿತವಾಗಿ ಲಭ್ಯವಾಗುವಂತೆ ಅಂತರಜಾಲತಾಣವನ್ನು ಶಾಸ್ತ್ರೀಗಳ ಮೊಮ್ಮಕ್ಕಳು ಸೇರಿ ಮಾಡಿರುವುದನ್ನು, ಅದೇರೀತಿ ಇನ್ನೊಂದು ಲೇಖನದಲ್ಲಿ ಮಹಾಮಹೋಪಾಧ್ಯಾಯ ಡಾ. ವಿದ್ವಾನ್ ರಂಗನಾಥ ಶರ್ಮರ ಮೌಲಿಕ ಗ್ರಂಥಗಳೆಲ್ಲದರ ಡಿಜಿಟೈಜ್ಡ್ ಆವೃತ್ತಿ ಅಂತರಜಾಲದಲ್ಲಿ ಉಚಿತವಾಗಿ ಒದಗಿಸಲಿಕ್ಕೆ ಮೊಮ್ಮಕ್ಕಳು ಮಾಡಿದ ಯೋಜನೆಯನ್ನೂ ಪರಿಚಯಿಸಿದ್ದೆ. ಆಗ ಛಾಯಾ ಅವರಿಗೆ ತಾನೂ ಅಜ್ಜನ ಕೃತಿಗಳೆಲ್ಲವನ್ನೂ ಡಿಜಿಟಲ್ ರೂಪದಲ್ಲಿ ಸಂಗ್ರಹಿಸಿ ಲೋಕಾರ್ಪಣೆ ಮಾಡಬೇಕು ಎಂಬ ತುಡಿತ ಹೆಚ್ಚಿತು. ‘ಜೋಶಿಯವರೇ ನನಗದರ ತಂತ್ರಜ್ಞಾನವೆಲ್ಲ ಗೊತ್ತಿಲ್ಲ. ಬೆಂಗಳೂರಿನಲ್ಲಿ ಯಾರಾದರೂ ಆ ಕೆಲಸ ಮಾಡಿಕೊಡುವವರು ನಿಮಗೆ ಪರಿಚಯವಿದ್ದರೆ ತಿಳಿಸುತ್ತೀರಾ?’ ಎಂದು ನನ್ನನ್ನು ಕೇಳಿದ್ದರು. ಆಗ ನನಗೆ ತತ್‌ಕ್ಷಣ ನೆನಪಾದವರೇ ನನ್ನ ಇನ್ನೊಬ್ಬ ಓದುಗಮಿತ್ರ ಓಂಶಿವಪ್ರಕಾಶ್ ಎಂಬ ಟೆಕ್ನೋಕ್ರಾಟ್ ತರುಣ. ಕನ್ನಡದ ಅನೇಕ ಗ್ರಂಥಗಳ ಡಿಜಿಟೈಜೇಶನ್ ಯೋಜನೆಯಲ್ಲಿ ತೊಡಗಿಸಿಕೊಂಡ ‘ಕಠಿಣ ದುಡಿಮೆ ಮಾತು ಕಡಿಮೆ’ ಸ್ವಭಾವದ ಉತ್ಸಾಹಿ ಸಜ್ಜನ. ಅವರನ್ನು ಛಾಯಾಗೆ ಈ-ಪರಿಚಯಿಸಿದೆ. ಇದೆಲ್ಲ ಅಮೆರಿಕದಲ್ಲಿ ಕುಳಿತುಕೊಂಡೇ ಕಾರುಬಾರು. ಛಾಯಾ ಅವರನ್ನಾಗಲೀ ಓಂಶಿವಪ್ರಕಾಶ್‌ರನ್ನಾಗಲೀ ನಾನು ಇದುವರೆಗೆ ಮುಖತಃ ಭೇಟಿಯಾದದ್ದಿಲ್ಲ, ದೂರವಾಣಿ ಸಂಭಾಷಣೆಯೂ ಇಲ್ಲ. ಆದರೇನಂತೆ, ಅವರಿಬ್ಬರ ಸ್ನೇಹ ಕುದುರಿತು. ಯೋಜನೆಯ ನೀಲಿನಕ್ಷೆಯಾಯ್ತು, ಕೆಲಸ ಶುರುವಾಯ್ತು. ಮೊದಲಿಗೆ ಹಳೆಯ ‘ಕಸ್ತೂರಿ’ ಸಂಚಿಕೆಗಳನ್ನೆಲ್ಲ ಸ್ಕ್ಯಾನ್ ಮಾಡಿ ಅಂತರಜಾಲಕ್ಕೇರಿಸಲಾಯಿತು. ಆಮೇಲೆ ಪಾವೆಂ ಅವರ ಈ-ಮ್ಯೂಸಿಯಂ ನಿರ್ಮಾಣವಾಯಿತು. ಕೆಲದಿನಗಳ ಹಿಂದೆಯಷ್ಟೇ ಪ್ರಪಂಚಕ್ಕೆ ತೆರೆದುಕೊಂಡಿತು.

ಹಾಂ! ಇನ್ನೊಂದು ವಿಚಾರ. ಈ-ಮ್ಯೂಸಿಯಂನಲ್ಲಿರುವ ‘ಪಾವೆಂ ನಾವು ಕಂಡಂತೆ’ ಪುಸ್ತಕದಲ್ಲಿ ಛಾಯಾ ಉಪಾಧ್ಯ ತನ್ನ ಅಜ್ಜನ ಬಗ್ಗೆ ಪ್ರೀತಿಯಿಂದ ಬರೆದ ಒಂದು ಕವನ, ಮತ್ತೊಂದು ಪುಟ್ಟ ಲೇಖನವೂ ಇದೆ. ಚಿಕ್ಕ ಹುಡುಗಿಯಾಗಿದ್ದಾಗ ಅಜ್ಜನೊಂದಿಗೆ ಜಗಳವಾಡಿ ತಾನಿನ್ನು ಬೇಸಿಗೆರಜೆಯಲ್ಲಿ ಹುಬ್ಬಳ್ಳಿಗೆ ಅಜ್ಜನಮನೆಗೆ ಬರುವುದಿಲ್ಲ ಎಂದು ರೋಪ್ ಹಾಕಿದ್ದರಂತೆ ಇದೇ ಛಾಯಾ! ಆಮೇಲೆ ಅಜ್ಜ ಈಕೆಯ ಕ್ಷಮೆ ಕೋರಿ ಪತ್ರಬರೆದ ಮೇಲೆಯೇ ಹುಡುಗಿ ಹುಬ್ಬಳ್ಳಿಗೆ ಹೊರಟಿದ್ದಂತೆ. ‘ಈಗ ನಾನು ಇದನ್ನು ನೆನಪಿಸಿಕೊಂಡರೆ ನನಗೆ ತುಂಬಾ ನಾಚಿಕೆ, ದುಃಖವಾಗುತ್ತದೆ. ನಮ್ಮಜ್ಜನವರು ಎಂಥಾ ಸರಳ, ಗಣ್ಯವ್ಯಕ್ತಿ. ನಾನು ಅವರ ಯೋಗ್ಯತೆಯನ್ನು ಅರಿಯದವಳಾಗಿದ್ದೆ’ ಎಂದು ಛಾಯಾ ಬರೆದುಕೊಂಡಿದ್ದಾರೆ. ‘ಅಜ್ಜ ಎಷ್ಟು ಸರಳವಾಗಿ ತಮಗೆ ಗೊತ್ತಿಲ್ಲದ ವಿಷಯಕ್ಕೆ ಗೊತ್ತಿಲ್ಲ ಎಂದು ಹೇಳುತ್ತಿದ್ದರು ಮತ್ತು ಗೊತ್ತಿಲ್ಲದ ವಿಷಯವನ್ನು ಹೇಗಾದರೂ ಮಾಡಿ ತಿಳಿಯುವವರೆಗೆ ಬಿಡುತ್ತಿರಲಿಲ್ಲ’ ಅಂತ ಇನ್ನೊಂದು ಘಟನೆಯನ್ನೂ ನೆನಪಿಸಿಕೊಂಡಿದ್ದಾರೆ. ಅಂತಹ ಮೊಮ್ಮಗಳು ತನ್ನ ಅಜ್ಜನ ಮೇಲಿನ ಪ್ರೀತ್ಯಾದರದಿಂದ ಈ-ಮ್ಯೂಸಿಯಂ ನಿರ್ಮಿಸಿದ್ದಾರೆ. ಈಗ ನಿಮಗೆ ಇದರೊಳಗೆ ಪ್ರವೇಶಕ್ಕೆ ಸ್ವಾಗತ ತೋರಣವಿದು:
pavem.sirinudi.org

## ಮಾತು ಮತಾಪು

ತಾಂಜೇನಿಯಾ ಪ್ರಕರಣದ ಬಗ್ಗೆ ಯಾವುದೇ ಪರ ವಿರೋಧ ತೀರ್ಮಾನ ಕೊಡುವುದಕ್ಕಾಗಿ ಕೇಂದ್ರದ ತಂಡ ಬಂದಿರಲಿಲ್ಲ. ಸತ್ಯಾಸತ್ಯತೆ ವಿಮರ್ಶೆ ಮಾಡಿ ರಾಜ್ಯ ಸರಕಾರವೇ ವರದಿ ನೀಡಲಿದೆ.

-ಡಿ.ವಿ. ಸದಾನಂದಗೌಡ, ಕೇಂದ್ರ ಸಚಿವ

ಸುಷ್ಮಾ ಸ್ವರಾಜ್ ಎರಡು ದಿನ ಶ್ರೀಲಂಕದಲ್ಲಿ ತಂಗಿದ್ದು, ಶ್ರೀಲಂಕ ಅಧ್ಯಕ್ಷ ಮೈತ್ರಿಪಾಲ ಸಿರಿಸೇನಾ ಅವರೊಂದಿಗೆ ಎರಡೂ ದೇಶಗಳ ಸಂಬಂಧ ವೃದ್ಧಿ ಸೇರಿದಂತೆ ಅಂತಾರಾಷ್ಟ್ರೀಯ ವಿಷಯ ಚರ್ಚಿಸಿದ್ದಾರೆ.

-ವೈ.ಕೆ. ಸಿನ್ಹಾ, ಭಾರತೀಯ ಹೈ ಕಮಿಷನರ್




ಶನಿ ಸಿಂಗಾಪುರ ದೇವಸ್ಥಾನದ ಕುರಿತಂತೆ ನಡೆದ ಮಾತುಕತೆ ಸಕಾರಾತ್ಮಕವಾಗಿತ್ತು. ದೇವಸ್ಥಾನದ ಆಡಳಿತ ಮಂಡಳಿ ನಿರ್ಧಾರವನ್ನು ಕಾದು ನೋಡಬೇಕಿದೆ. ಮಹಿಳೆಯರ ಮೇಲಿನ ಅನ್ಯಾಯ ಕೊನೆಗಾಣಲಿ.

-ತೃಪ್ತಿ ದೇಸಾಯಿ, ಹೋರಾಟಗಾರ್ತಿ

ಗುಜರಾತ್‌ನಲ್ಲಿ ಭೂಮಿ ಮಂಜೂರು ವಿಚಾರಕ್ಕೆ ಸಂಬಂಧಿಸಿದಂತೆ ಕಾಂಗ್ರೆಸ್ ತನ್ನ ತಪ್ಪನ್ನು ಮುಚ್ಚಿಹಾಕಲು ಪ್ರಧಾನಿ ಮೋದಿ ಮೇಲೆ ಕಾಂಗ್ರೆಸ್ ಹುರುಳಿಲ್ಲದ ಆರೋಪ ಮಾಡುತ್ತಿದೆ.

-ಶ್ರೀಕಾಂತ್ ಶರ್ಮಾ, ಬಿಜೆಪಿ ಕಾರ್ಯದರ್ಶಿ

### ನಿಮಗಿದು ಗೊತ್ತಾ?



ನಗರದಲ್ಲಿ ವಾಸಿಸುವ ಜನರಷ್ಟೆ ಬುದ್ಧಿವಂತರಲ್ಲ, ನಗರದಲ್ಲಿ ವಾಸಿಸುವ ಪ್ರಾಣೀ ಪಕ್ಷಿಗಳಿಗೂ ತುಂಬಾ ಬುದ್ಧಿ ಇರುತ್ತದೆ, ಕಾಗೆಗಳು ರಾತ್ರಿ ವೇಳೆ ರಸ್ತೆಯಲ್ಲಿ ಬಿದ್ದಿರುವ ಕಾಳುಗಳನ್ನು ಹೆಕ್ಕಿ ತಿನ್ನುವಾಗ, ಕಾರಿನ ಬೆಳಕನ್ನು ಗಮನಿಸಿ ಪಕ್ಕಕ್ಕೆ ಹಾರಿಹೋಗಿ ನಂತರ ಮತ್ತೆ ಬಂದು ಕಾಳುಗಳನ್ನು ತಿನ್ನುತ್ತವೆ, ಕಾಗೆಗಳು ಜಗತ್ತಿನ ಬುದ್ಧಿವಂತ ಪಕ್ಷಿಗಳಲ್ಲಿ ಐದನೇ ಸ್ಥಾನದಲ್ಲಿವೆ.

### ಸಮಾಚಾರ ಸಣ್ಣದಲ್ಲ

#### ನಾಗರಿಕ ಸಂಹಿತೆ

ಬೆಂಗಳೂರು: ಏಕರೂಪ ನಾಗರಿಕ ಸಂಹಿತೆ ವಿಚಾರದಲ್ಲಿ ಏನೇ ಹೇಳಿದರೂ ಅದಕ್ಕೆ ತಪ್ಪು ವಿಶ್ಲೇಷಣೆ ಮಾಡಿಬಿಡುತ್ತಾರೆ. ಈ ವಿಚಾರಕ್ಕೆ ಬೇರೆಯದೇ ರೂಪ ನೀಡುತ್ತಾರೆ ಎಂದು ಬೆಂಗಳೂರಿನಲ್ಲಿ ಹೇಳಿಕೆ ನೀಡಿದ್ದಾರೆ. ದೇಶದಲ್ಲಿ ಏಕರೂಪ ನಾಗರಿಕ ಸಂಹಿತೆ ವಿಚಾರವಾಗಿ ಮಾತುಗಳು ಕೇಳಿ ಬರುತ್ತಿರುವಾಗ, ಕೇಂದ್ರದ ನಿಲುವೇನು ಎಂದು ಸುದ್ದಿಗಾರರು ಪ್ರಶ್ನಿಸಿದಾಗ ಈ ಅಭಿಪ್ರಾಯ ವ್ಯಕ್ತಪಡಿಸಿದ ಅವರು, ಸರಕಾರ ಸಾರ್ವಜನಿಕವಾಗಿ ಈ ವಿಚಾರ ಪ್ರಸ್ತಾಪಿಸಲು ಸಿದ್ಧವಿದೆ. ಆದರೆ, ಅದನ್ನು ತಪ್ಪಾಗಿ ಅರ್ಥೈಸಿ ಅಸಹಿಷ್ಣುತೆಯಾಗಿ ಪರಿವರ್ತನೆ ಮಾಡಬಹುದು. ಈ ಕಾರಣಕ್ಕಾಗಿ ಯಾವುದೇ ಪ್ರಸ್ತಾಪ ಮಾಡುತ್ತಿಲ್ಲ, ಸಾರ್ವಜನಿಕವಾಗಿಯೇ ಚರ್ಚೆಯಾಗಲಿ ಎಂದರು. ಈ ವಿಷಯ ರಾಷ್ಟ್ರೀಯ ಚರ್ಚೆಯ ವಸ್ತುವಾಗಬೇಕೆಂಬುದು ನಮ್ಮ ಅಭಿಲಾಷೆ. ಸಾಧಕ ಬಾಧಕದ ಬಗ್ಗೆ ಸಮುದಾಯಗಳು, ರಾಜಕೀಯ ಪಕ್ಷ, ಕಾನೂನು ತಜ್ಞರಿಂದಲೂ ಅಭಿಪ್ರಾಯಗಳು ಬರಬೇಕು ಎಂದರು.

ಮಾಸಿಕದಿಂದ ಜನಮಾನಸ ತಲುಪಿದ ಪಾವೆಂ ಆಚಾರ್ಯರ ಧರ್ಮಪತ್ನಿ ಲಕ್ಷ್ಮೀಬಾಯಿ ಮೆಲುಕು

# ಬರೆದೇ ಬದುಕಿ ತೋರಿದ ಕನ್ನಡದ ಕಸ್ತೂರಿ

ಶ್ರೀಕಾಂತ್ ಶೆಟ್ಟಿ ಕಾರ್ಕಳ

ದಿವಂಗತ ಪಾಡಿಗಾರು ವೆಂಕಟರಮಣ ಆಚಾರ್ಯರು ಬದುಕಿರುತ್ತಿದ್ದರೆ ನಿನ್ನೆಗೆ 100 ವರ್ಷ ತುಂಬುತ್ತಿತ್ತು. ಪಾವೆಂ ಆಚಾರ್ಯರೆಂದೇ ಸಮಾಜದಲ್ಲಿ ಗುರುತಿಸಿಕೊಂಡಿದ್ದ ಇವರು ಹೆಚ್ಚಿನ ಜನರಿಗೆ ಇಂದಿಗೂ ಅಪರಿಚಿತರು. ಸಾಹಿತಿಯಾಗಿ ಪತ್ರಕರ್ತನಾಗಿ ಭಾಷಾತಜ್ಞನಾಗಿ ಮಾಸಿಕವೊಂದರ ಸಂಪಾದಕನಾಗಿ ಆಚಾರ್ಯರು ಸಾಧಿಸಿದ್ದು ಕಡಿಮೆ ಏನಲ್ಲ. ಕಸ್ತೂರಿ ಮಾಸಿಕವನ್ನು ನಾಡಿನ ಜನರು ಹುಚ್ಚೆದ್ದು ಓದುವಂತೆ ಮಾಡಿ ಜನರ ಸಾಹಿತ್ಯದ ಹುಚಿಗೆ ಎಳ್ಳಷ್ಟೂ ದಕ್ಕೆಯಾಗದಂತೆ 3 ದಶಕಗಳ ಕಾಲ ಹಿಡಿದಿಟ್ಟುಕೊಂಡ ಅವರ ಸಾಧನೆ, ಸಾಹಸ ಸುಲಭದ್ದೇನಲ್ಲ.

ಇಷ್ಟೆಲ್ಲ ಇದ್ದರೂ ಅವರ ಹುಟ್ಟೂರು ಉಡುಪಿಯಲ್ಲೇ ಹೆಚ್ಚಿನ ಜನರಿಗೆ ಆಚಾರ್ಯರ ಪರಿಚಯವಿಲ್ಲ. ಇಂದು ಬದುಕಿರುತ್ತಿದ್ದರೂ ಆಚಾರ್ಯರ ಸಾಧನೆಗೆ ತಕ್ಕಪ್ರಸಿದ್ಧಿ ಅವರಿಗೆ ದಕ್ಕುತ್ತಿರಲಿಲ್ಲ. ಏಕೆಂದರೆ ಅವರು ಆರಿಸಿಕೊಂಡದ್ದು ಮದ್ಯ ಮಾರ್ಗ. ಆಚಾರ್ಯರ ಯಾವುದೇ ಚಿಂತನೆಗಳು ಒಂದು ನಿರ್ದಿಷ್ಟ ಮೂಸೆಯಿಂದ ಹೊರ ಹೊಮ್ಮತ್ತಿರಲಿಲ್ಲ. ಬದಲಾಗಿ ಅವರು ಎಡ, ಬಲ, ಪ್ರಗತಿಗಾಮಿ ಪುರೋಗಾಮಿ, ಸೇರಿದಂತೆ ಎಲ್ಲ ಇಸಂಗಳನ್ನು ಮೀರಿ ವಾಸ್ತವದ ನೆಲೆಗಟ್ಟಲ್ಲಿ ತಮ್ಮ ವಿಚಾರಗಳನ್ನು ಪ್ರಸ್ತುತಪಡಿಸುತ್ತಿದ್ದರು. ಓದುಗರಿಗೆ ಆಕರ್ಷಣೀಯ ಹಾಸ್ಯದ ಸಿಹಿಲೇಪದೊಂದಿಗೆ ಪರಿಣಾಮಕಾರಿ ಕಹಿಮಾತ್ರೆಗಳನ್ನು ಕೊಡುವ ಕಲೆ ಪಾವೆಂ ಅವರಿಗೆ ಸಿದ್ಧಿಸಿತ್ತು.

ಉಡುಪಿಯ ಅಂಬಲಪಾಡಿ ಪರಿಸರದಲ್ಲಿ ಒಂದು ಪುಟ್ಟ ಮನೆಯಲ್ಲಿ ಪಾವೆಂ ಅವರ ಧರ್ಮ ಪತ್ನಿ ಲಕ್ಷ್ಮೀಬಾಯಿ ಆಚಾರ್ಯ ಅವರು ತಮ್ಮ ಮಗನೊಂದಿಗೆ ವಾಸಿಸುತ್ತಿದ್ದಾರೆ. 90ರ ಗಡಿ ದಾಟಿರುವ ಇವರಿಗೆ ಎದುರು ಕುಳಿತಿರುವವರ ಮುಖ ಕೂಡ ಕಾಣದು. ದೇವರು ದೃಷ್ಟಿ ಕಿತ್ತುಕೊಂಡಿದ್ದಾನೆ. ಆದರೆ, ಇವರ ನೆನಪಿನಂಗಳದಲ್ಲಿ ಬದುಕಿನ ಪ್ರತಿಯೊಂದು ಘಟನೆಗಳೂ ಇನ್ನೂ ಹಸಿರಾಗಿವೆ. ಆಚಾರ್ಯರ ವೈಯುಕ್ತಿಕ ಬದುಕಿನ ಬಗ್ಗೆ ನಮ್ಮೊಂದಿಗೆ ಒಂದಷ್ಟು ವಿಚಾರವನ್ನು ಇಲ್ಲಿ ಹಂಚಿಕೊಂಡಿದ್ದಾರೆ.

**• ಪತ್ರಕರ್ತರೆಂದರೆ ಮನೆಮಠದಿಂದ ಮಾರುದೂರ ಎಂಬ ಭಾವನೆ ಇದೆ. ಆಗಂತೂ ಇದು ಇನ್ನೂ ಹೆಚ್ಚಿತ್ತು. ಆದರೂ ನಿಮ್ಮನ್ನು ಯಾಕೆ ಆಚಾರ್ಯರೊಂದಿಗೆ ಮದುವೆ ಮಾಡಿಸಿದರು?**

ನಮ್ಮ ಮನೆಯಲ್ಲೂ ಬಡತನ ಇತ್ತು. ಅದಲ್ಲದೆ ಆಗಲೇ ನನಗೂ 16 ವಯಸ್ಸಾಗಿತ್ತು. ನಮ್ಮ ಕಾಲದಲ್ಲಿ ಹದಿನಾರಾದರೂ ಮದುವೆಯಾಗದಿದ್ದರೆ ಮನೆ ಮಂದಿಗೆಲ್ಲ ಕಳವಳ. ಒಮ್ಮೆ ಮದುವೆಯಾಗಿ ಹೋದರೆ ಸಾಕು ಎಂಬ ಭಾವನೆ ಎಲ್ಲರಲ್ಲಿ. ಹಾಗಾಗಿ ಹೆಚ್ಚೇನೂ ಪೂರ್ವಾಪರ ವಿಚಾರಿಸದೇ ಮದುವೆ ಮಾಡಿಕೊಟ್ಟರು. ನನ್ನ ಅಮ್ಮನ ಮನೆಯಲ್ಲೇ ಮದುವೆಯಾಯಿತು. ಮದುವೆಯಾದ ಬಳಿಕ ಏಳು ವರ್ಷ ನಾನು ಇಲ್ಲೇ ಊರಲ್ಲೇ ಇದ್ದೆ. ಬಳಿಕ ನಾನು ಹುಬ್ಬಳ್ಳಿಗೆ ಹೋದೆ.

**• ಹುಬ್ಬಳ್ಳಿಗೂ ಮೊದಲು ಅವರು ಎಲ್ಲಿದ್ದರು?**

ಮದ್ರಾಸಿನಲ್ಲಿದ್ದರು. ಅಲ್ಲಿ ಹೋಟೆಲಿನಲ್ಲಿ ಕೆಲಸಕ್ಕಿದ್ದರು. ಆಗ ಎರಡನೇ ವಿಶ್ವಯುದ್ಧ ಆರಂಭವಾಗಿತ್ತು. ಪತ್ರಿಕೆಗಳಲ್ಲಿ ಮದ್ರಾಸಿಗೆ ಬಾಂಬು ಬೀಳುವ ಸಾಧ್ಯತೆ ಇದೆ ಎನ್ನುವ ಸುದ್ದಿಗಳು ಬರತೊಡಗಿದವು. ನಾವು ಭಯಭಿತರಾಗಿ ಅವರನ್ನು ವಾಪಸು ಊರಿಗೆ ಕರೆಸಿಕೊಂಡೆವು. ನಂತರ ಧಾರವಾಡದಲ್ಲಿ ಸಂಬಂಧಿಕರ ಹೋಟೆಲಿನಲ್ಲಿ ಕೆಲಸಕ್ಕೆ ಸೇರಿಕೊಂಡರು.

**• ಪತ್ರಿಕಾ ಸಂಪರ್ಕ ಹೇಗೆ?**

ಧಾರವಾಡದ ಹೋಟೆಲ್ ನೌಕರಿಯಲ್ಲಿದ್ದಾಗಲೇ ಅವರು ಲಾಂಗೂಲಾಚಾರ್ಯ ಎಂಬ ಹೆಸರಿನಿಂದ ಕರ್ಮವೀರ ಪತ್ರಿಕೆಗೆ ಬರೆಯಲಾರಂಭಿಸಿದರು. ನಂತರ ಅವರು ಕಸ್ತೂರಿ ಸೇರಿದರು.

**• ಆಚಾರ್ಯರ ಆರ್ಥಿಕ ಸ್ಥಿತಿಗತಿ ಹೇಗಿತ್ತು?**

ಬಹಳ ಕಷ್ಟದ ದಿನಗಳನ್ನು ನಾವು ನೋಡಬೇಕಾಯಿತು. ಅವರಿಗೆ ಆಗ ತಿಂಗಳಿಗೆ 22 ರುಪಾಯಿ ಸಂಬಳ ಇತ್ತು. ದಿನಕ್ಕೆ ಒಂದು ರುಪಾಯಿಯೂ ಬರುತ್ತಿರಲಿಲ್ಲ. ಜೀವನ ನಡೆಸಲು ಅವರು ಹೋಟೆಲುಗಳ ಲೆಕ್ಕಪತ್ರ ನೋಡಲು ಹೋಗುತ್ತಿದ್ದರು. ಅವರಿಗೆ ಬದುಕು ಎಲ್ಲವನ್ನೂ ಕಲಿಸಿಕೊಟ್ಟಿತ್ತು.

**• ಪತ್ರಿಕೋದ್ಯಮದ ಆರಂಭ ಹೇಗಿತ್ತು?**

ಲೋಕಶಿಕ್ಷಣ ಸಂಸ್ಥೆಯ ನೌಕರಿಗೆ ಸೇರಿದಾಗ ಮೊದಲು ಅವರಿಗೆ ಸಿಕ್ಕಿದ ಕೆಲಸ ಪ್ರಿಂಟರಿಗೆ ಮೊಳೆಗಳನ್ನು ಜೋಡಿಸುವ ಕೆಲಸ !! ನಂತರ ಅವರ ಬರಹವನ್ನು ಗುರುತಿಸಿ ಆಡಳಿತ ಮಂಡಳಿ ಬರೆಯಲು ಅವಕಾಶ ನೀಡಿತು. ಮಕ್ಕಳ ವಿದ್ಯಾಭ್ಯಾಸಕ್ಕೆ ಕಿಂಚಿತ್ತೂ ತೊಂದರೆಯಾಗದಂತೆ ನೋಡಿಕೊಳ್ಳುತ್ತಿದ್ದರು.

**• ಮಕ್ಕಳೆಲ್ಲ ಶೈಕ್ಷಣಿಕ ರಂಗ ಮತ್ತು ಬ್ಯಾಂಕಿಂಗ್ ಕ್ಷೇತ್ರವನ್ನು ಆಯ್ಕೆ ಮಾಡಿಕೊಂಡದ್ದು ಯಾಕೆ? ಆಚಾರ್ಯರಿಗೆ ಮಕ್ಕಳು ಸಾಹಿತ್ಯ ಲೋಕಕ್ಕೆ ಬರುವುದು ಇಷ್ಟವಿರಲಿಲ್ಲವೇ?**

ಮಕ್ಕಳ ಬಗ್ಗೆ ತಲೆಕೆಡಿಸಿಕೊಳ್ಳುವಷ್ಟು ಪುರುಸೊತ್ತು ಅವರಿಗೆ ಇರಲಿಲ್ಲ. ಮುಂಜಾನೆ ಮಕ್ಕಳು ಏಳುವ ಮೊದಲೇ ಅವರು ಕಚೇರಿಗೆ ತೆರಳುತ್ತಿದ್ದರು. ರಾತ್ರಿ ಎಲ್ಲರೂ ಮಲಗಿದ ನಂತರವೇ ಅವರ ಆಗಮನ. ಮಕ್ಕಳ ಅಷ್ಟೂ ಹೊಣೆಗಾರಿಕೆ ನನ್ನ ಮೇಲೆಯೇ ಇತ್ತು. ನನಗೂ ಶಿಕ್ಷಣ ಕಮ್ಮಿ. ನಾನು ಯಾರನ್ನೂ ರೂಪಿಸಲು ಹೋಗಲಿಲ್ಲ. ಎಲ್ಲರೂ ಅವರವರ ದಾರಿ ಕಂಡುಕೊಂಡರು. ಎಲ್ಲರೂ ಉತ್ತಮ ಸ್ಥಾನಮಾನಗಳನ್ನೇ ಪಡೆದಿದ್ದಾರೆ.



**ದಿನದ ಮಾತುಕತೆ**

**ಲಕ್ಷ್ಮೀಬಾಯಿ ಆಚಾರ್ಯ**
ಪಾವೆಂ ಧರ್ಮಪತ್ನಿ

**• ಕಸ್ತೂರಿಯಲ್ಲಿ ಆಚಾರ್ಯರ ಕೆಲಸ ಹೇಗಿತ್ತು?**

ಕಸ್ತೂರಿಯನ್ನು ಆರಂಭವಾಗಿದ್ದೇ ಆಚಾರ್ಯರ ಸಂಪಾದಕತ್ವದಲ್ಲಿ. ಕಸ್ತೂರಿಯಲ್ಲಿ ಆರಂಭದಲ್ಲಿ ಯಾರೂ ಬರಹಗಾರರು ಇರದಿದ್ದಾಗ ಇವರೇ ಇಡೀ ಪುಸ್ತಕಕ್ಕೆ ಲೇಖನಗಳನ್ನು ಬರೆದು ಬೇರೆ ಬೇರೆ ಹೆಸರಿನಲ್ಲಿ ಪ್ರಕಟಿಸುತ್ತಿದ್ದರು. ಕ್ರಮೇಣ ಹೊಸ ಬರಹಗಾರರ ತಂಡವೊಂದನ್ನು ಸೃಷ್ಟಿಸಿ ಅವರಿಗೆ ಅವಕಾಶ ಮಾಡಿಕೊಟ್ಟರು.

**• ಕಸ್ತೂರಿ ಬಗ್ಗೆ ನಿಮ್ಮ ಅಭಿಪ್ರಾಯ ಏನು?**

ಜನರಿಗೆ ವೈಜ್ಞಾನಿಕ ಲೇಖನ ಹಾಸ್ಯ ಲೇಖನಗಳನ್ನು ಪರಿಚಯಿಸಿದ್ದು ಕಸ್ತೂರಿ. ಆಚಾರ್ಯರೊಂದಿಗೆ ಜಿ.ಜಿ ಹೆಗಡೆ ಅವರು ಕೈ ಜೋಡಿಸಿದ್ದರು. 1956 ರಿಂದ 1975ವರೆಗೆ ಅವರು ಕಸ್ತೂರಿಗಾಗಿ ದುಡಿದರು. ಕಸ್ತೂರಿ ಕಚೇರಿಯಲ್ಲೇ ಅವರಿಗೆ 1974 ಅಕ್ಟೋಬರ್ ತಿಂಗಳಲ್ಲಿ ರಕ್ತವಾಂತಿಯಾಯಿತು. ಕೂಡಲೇ ಅವರನ್ನು ಆಸ್ಪತ್ರೆಗೆ ದಾಖಲಿಸಲಾಯಿತು. ಆರೋಗ್ಯ ಸುಧಾರಿಸಿಕೊಳ್ಳುತ್ತಿದ್ದಂತೆ ಕಸ್ತೂರಿಯಿಂದ ನಿವೃತ್ತಿ ಪಡೆದುಕೊಂಡರು.

**• ಆಚಾರ್ಯರಿಗೆ ಮಠಗಳ ಸಂಪರ್ಕ ಇತ್ತೇ?**

ಇತ್ತು ಕೇವಲ ಸಂಸ್ಕೃತ ಭಾಷೆಯ ಅಧ್ಯಯನ ಮತ್ತು ಸಾಹಿತ್ಯದ ಉದ್ದೇಶಗಳಿಗೆ ಮಾತ್ರ ಸಂಪರ್ಕ ಇಟ್ಟುಕೊಂಡಿದ್ದರು. ಅವರು ಸಂಪ್ರದಾಯವಾದಿಯಾಗಿರಲಿಲ್ಲ. ಆದರೆ ಮನೆಯಲ್ಲಿ ಎಲ್ಲಾ ರೀತಿಯ ಧಾರ್ಮಿಕ ಕಾರ್ಯಕ್ರಮ ನಡೆಯುತ್ತಿತ್ತು. ಆಚರಣೆಗಳನ್ನು ಬಿಡಬಾರದು ಎಂಬ ಕಳಕಳಿ ಅವರಲ್ಲಿ ಇತ್ತೇ ಹೊರತು ಅತೀ ನಂಬಿಕೆ ಅವರಿಗೆ ಇರಲಿಲ್ಲ. ಹಾಗೆಂದು ಅವರು ಸಂಪ್ರದಾಯ ವಿರೋಧಿಯೂ ಆಗಿರಲಿಲ್ಲ. ಸಂಸ್ಕೃತದ ವಿಚಾರದಲ್ಲಿ ಬನ್ನಂಜೆ ಗೋವಿಂದ ಆಚಾರ್ಯರು ಮತ್ತು ಅವರು ಅತ್ಯಂತ ಆತ್ಮೀಯರಾಗಿ ವಿಚಾರ ವಿನಿಮಯ ಮಾಡಿಕೊಳ್ಳುತ್ತಿದ್ದರು.

**• ಅವರಿಗೆ ಸಂಗೀತದ ಆಸಕ್ತಿ ಇತ್ತೇ?**

ಅವರು ಸಂಗೀತದಲ್ಲಿ ಬಹಳಷ್ಟು ಆಸಕ್ತಿ ಬೆಳೆಸಿಕೊಂಡಿದ್ದರು. ಅವರು ರಾಗಗಳ ಲೆಕ್ಕಾಚಾರದಲ್ಲಿ ನಿರತರಾಗಿ ಹಲವಾರು ಹೊಸ ರಾಗಗಳನ್ನು ರಚಿಸಿದ್ದರು. ವಿದ್ಯಾಭೂಷಣ ಅವರೊಂದಿಗೆ ಸಂಗೀತ ಶಾಸ್ತ್ರದ ಬಗ್ಗೆ ಗಂಟೆಗಟ್ಟಲೆ ವಿಚಾರವಿನಿಮಯ ಮಾಡಿಕೊಳ್ಳುತ್ತಿದ್ದರು. ಅವರಿಗೆ ಹಾಡುಗಾರಿಕೆ ಗೊತ್ತಿರದಿದ್ದರೂ ರಾಗಗಳ ಬಗ್ಗೆ ಆಳವಾದ ಜ್ಞಾನವಿತ್ತು.

**• ಆಚಾರ್ಯರ ಒಡನಾಡಿಗಳ ಬಗ್ಗೆ ಹೇಳಿ...**

ನಮ್ಮ ಮನೆಗೆ ಆಗಮಿಸುತ್ತಿದ್ದ ನಾಡಿನ ಹೆಚ್ಚಿನ ಹಿರಿಯ ಸಾಹಿತಿಗಳು ಸಾಹಿತ್ಯದಿಂದ ಅನ್ನ ಕಂಡುಕೊಂಡವರಾಗಿರಲಿಲ್ಲ. ಅವರಿಗೆ ಬೇರೆ ಕೆಲಸಗಳು ಅಥವಾ ವ್ಯವಹಾರಗಳಿದ್ದವು. ಆದರೆ ಆಚಾರ್ಯರಿಗೆ ಬರಹವೇ ಅನ್ನ ನೀಡುತ್ತಿತ್ತು. ಹಾಗಾಗಿ ಅವರು ತನ್ನ ಹೆಚ್ಚಿನ ಸಮಯವನ್ನು ಬರವಣಿಗೆಯಲ್ಲಿ ತೊಡಗಿಸಿಕೊಳ್ಳುತ್ತಿದ್ದರು. ಸಂತೋಷ್ ಕುಮಾರ್ ಗುಲ್ವಾಡಿ, ನಾರಾಯಣ ರಾಯರು, ಈಶ್ವರಯ್ಯ ಮೊದಲಾದವರು ಇಂದಿಗೂ ಅವರನ್ನೇ ಗುರು ಎಂದು ಭಾವಿಸುತ್ತಾರೆ. ಶಂಭಾ ಜೋಶಿ, ಹಾಮಾ ನಾಯಕರು, ದರಾ ಬೇಂದ್ರೆ, ಮೊದಲಾದವರು ನಮ್ಮ ಮನೆಯ ಕಾಯಂ ಅತಿಥಿಗಳಾಗಿದ್ದರು. ಆದರೂ ಅವರಲ್ಲಿ ಎಳ್ಳಷ್ಟೂ ಜಂಭವಿರಲಿಲ್ಲ. ಸಣ್ಣ ಮಗು ಮಾತಿಗೆ ನಿಂತರೂ ಉತ್ತರಿಸುತ್ತಿದ್ದರು. ಆದರೆ ಸಭೆ ಯಲ್ಲಿ ಮಾತ್ರ ಅವರು ಮಾತನಾಡುವುದರಲ್ಲಿ ಬಹಳ ಹಿಂದೆ.

**• ನಿಮಗೆ ಮರೆಯಲಾಗದ ಘಟನೆ ಯಾವುದು?**

ಅವರಿಗೆ ಗೊಯಂಕಾ ಪ್ರಶಸ್ತಿ ಘೋಷಣೆಯಾಗಿತ್ತು. ಕಾರ್ಯಕ್ರಮಕ್ಕೆ ನಾವೆಲ್ಲರೂ ಮುಂಬಯಿಗೆ ತೆರಳಿದ್ದೆವು. ಸಂಜೆ ನಾಲ್ಕು ಗಂಟೆಗೆ ಕಾರ್ಯಕ್ರಮ. ಟಾಟಾ, ಪಾಲ್ಕೆವಾಲ ಮೊದಲಾದವರು ಆ ಕಾರ್ಯಕ್ರಮದ ಮುಖ್ಯ ಅತಿಥಿಗಳು. ಆದರೆ ಅದೇ ಸಮಯದಲ್ಲಿ ಟೈಮ್ಸ್ ಆಫ್ ಇಂಡಿಯಾ ಪತ್ರಿಕೆಯ ಎಸ್.ಪಿ ಜೈನ್ ತೀರಿ ಕೊಂಡರು. 4 ಗಂಟೆಗಿದ್ದ ಕಾರ್ಯಕ್ರಮ ಸ್ಥಗಿತವಾಯಿತು. ನಾವು ವಾಪಸು ಬಂದೆವು. ಅವರಿಗೆ ಆಸ್ತಮಾದ ಸಮಸ್ಯೆ ತೀವ್ರವಾಯಿತು. ಕೆಲವುದಿನಗಳ ಬಳಿಕ ಅವರ ಮಂಜೂಷಾ ಕೃತಿ ಬಿಡುಗಡೆಯಾಯಿತು. ಗೊಯೆಂಕಾ ಪ್ರಶಸ್ತಿಯನ್ನು ಅವರೇ ತಂದು ಮುಟ್ಟಿಸಿದರು. ಪ್ರಶಸ್ತಿಯ ಹಣವನ್ನು ಬ್ಯಾಂಕಿನಲ್ಲಿ ಜಮೆ ಮಾಡಿ ಬಂದವರೇ ನಮ್ಮನ್ನೆಲ್ಲ ಬಿಟ್ಟು ಅಗಲಿದರು. ಈ ಘಟನೆ ಎಂದಿಗೂ ಮರೆಯಲಾಗದೆ ಘಟನೆ.

**• ಜನ್ಮ ಶತಮಾನೋತ್ಸವದ ಸಂದರ್ಭದಲ್ಲಿ ಸರ್ಕಾರದ ಮುಂದೆ ತಮ್ಮ ಬೇಡಿಕೆಗಳು ಏನಾದರೂ ಇದೆಯೇ?**

ಅವರಿಗೆ ರಾಷ್ಟ್ರೀಯ ಮಟ್ಟದ ಗೋಯಂಕಾ ಪ್ರಶಸ್ತಿ ಬಂತು. ಅದು ಪತ್ರಿಕೋದ್ಯಮ ರಂಗದ ಅತೀ ಶ್ರೇಷ್ಠ ಪುರಸ್ಕಾರ. ಅದನ್ನು ಪಡೆದ ಮೊದಲ ಕನ್ನಡಿಗ ಇವರು. ಅದರೊಂದಿಗೆ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿ ಸೇರಿದಂತೆ ನೂರಾರು ಪ್ರಶಸ್ತಿಗಳು ಅವರ ಬರಹಕ್ಕೆ ಬಂದಿದೆ. ಒಂದನ್ನೂ ಅವರು ಅರ್ಜಿ ಹಾಕಿ ಪಡೆದುಕೊಂಡಿದ್ದಲ್ಲ. ಸರಕಾರ ಕೊಟ್ಟ ಪಿಂಚಣಿಯನ್ನೂ ನನ್ನ ಹೆಸರಿಗೆ ವರ್ಗಾಯಿಸಲು ಹೊರಟ ಸ್ವಾಭಿಮಾನಿ ಅವರು. ನಾವು ಸರ ಕಾರದ ಮುಂದೆ ಮನವಿ ಮಾಡಿದರೆ ಅವರು ಅನು ಸರಿಸಿದ ಆದರ್ಶಕ್ಕೆ ಧಕ್ಕೆ ಆಗಬಹುದು. ಪಾವೆಂ ವಿಶ್ವಸ್ಥ ಸಮಿತಿ ರಚಿಸಿಕೊಂಡು ಅವರ ಕೃತಿಗಳನ್ನು ಸಂರಕ್ಷಿಸುವ ಕೆಲಸ ನಡೆಸುತ್ತಿದ್ದೇವೆ. ಹುಬ್ಬಳ್ಳಿಯಲ್ಲೂ ಈ ನಿಟ್ಟಿನಲ್ಲಿ ಕೆಲಸಗಳಾಗುತ್ತಿವೆ. ಅದಾದರೆ ಸಾಕು.



**ಆಚಾರ್ಯರಲ್ಲಿ ತಾವು ಗುರುತಿಸಿದ ಅಪರೂಪದ ಗುಣ?**

ಅವರು ಅತ್ಯಂತ ನ್ಯಾಯ ನಿಷ್ಠುರ ಮನುಷ್ಯ. ತನಗೆ ಸರಿ ಎನಿಸಿದ್ದನ್ನು ಅತ್ಯಂತ ನಿಷ್ಠುರವಾಗಿ ವ್ಯಕ್ತಪಡಿಸುತ್ತಿದ್ದರು. ತನ್ನ ಮೂಗಿನ ನೇರಕ್ಕೆ ಎಂದೂ ಅವರು ಬರೆದದ್ದಿಲ್ಲ. ಹತ್ತನೇ ತರಗತಿ ಶಿಕ್ಷಣ ಪಡೆದ ಅವರು ವೈಜ್ಞಾನಿಕ, ಸಾಮಾಜಿಕ ಲೇಖನಗಳನ್ನು ಪ್ರಭುದ್ಧವಾಗಿ ಬರೆಯುತ್ತಿದ್ದರು. ಆದರೆ ಪದವಿ ಇಲ್ಲ ಎನ್ನುವ ಕೊರಗು ಅವರಲ್ಲಿತ್ತು.

# ನನ್ನಜ್ಜ ಲಾಂಗೂಲಾಚಾರ್ಯ!



ಪಾ.ವೆಂ. ಆಚಾರ್ಯ

ಪಾ.ವೆಂ. ಆಚಾರ್ಯ ಎಂದರೆ ಶಬ್ದಗಳ ಗಾರುಡಿಗ. ಪದಾರ್ಥ ಚಿಂತಾಮಣಿಯ ಮೂಲಕ ಶಬ್ದಗಳ ಇತಿಹಾಸವನ್ನೇ ತೆರೆದಿಟ್ಟವರು. ಓದುಗರೊಡನೆ ಹರಟೆಯ ಮೂಲಕ ಲಾಂಗೂಲಾಚಾರ್ಯರಾಗಿ ರಾಜ್ಯದ ಮನೆಮಾತಾದವರು. ಕನ್ನಡ ಪತ್ರಿಕೋದ್ಯಮ ಮತ್ತು ಸಾಹಿತ್ಯ ಕ್ಷೇತ್ರಕ್ಕೆ ವಿಶೇಷ ಹಿರಿಮೆಯನ್ನು ತಂದುಕೊಟ್ಟವರು. ಅವರ ಮೊಮ್ಮಗಳು, ಅಜ್ಜನನ್ನು ನೆನಪಿಸಿಕೊಂಡ ಆಪ್ತ ಬರಹ ಇಲ್ಲಿದೆ...

ಛಾಯಾ ಕೆ. ಉಪಾಧ್ಯ

ನನಗೆ ಅಜ್ಜನ ನೆನಪೆಂದರೆ ಸದಾ ಬರೆಯುತ್ತ ಕೂತವರು ಸಾಹಿತ್ಯ, ಸಂಗೀತದ ಕುರಿತೇ ಯೋಚಿಸುವವರು, ದೇವರೆಂದರೆ ಸಿಡಿಮಿಡಿಗೊಳ್ಳುವವರು. ನಾನು ಅವರ ಮಗಳ ಮಗಳು. ನನ್ನ ಬಾಲ್ಯದ ದಿನಗಳವು. ನಾವು ಬೇಸಿಗೆ ರಜೆಗೆಂದು ಬೆಂಗಳೂರಿನಿಂದ ಹುಬ್ಬಳ್ಳಿಯಲ್ಲಿರುವ ಅವರ ಮನೆಗೆ ಹೋಗುತ್ತಿದ್ದೆವು. ಅಜ್ಜನೆಂದರೆ ಎಲ್ಲರಂತೆ ಮಾತಿಗೆ, ಹರಟೆಗೆ ಸಿಗುವ ಮನುಷ್ಯನಾಗಿರಲಿಲ್ಲ. ಬದಲಾಗಿ ಅವರು ಬರೆಯುತ್ತ ಒಂದೆಡೆ ಕೂತರೆ ಮಕ್ಕಳೆಲ್ಲ ಗಲಾಟೆ ಮಾಡಬಾರದೆಂದು ಮೊದಲೇ ನಮಗೆ ಹೇಳಿಬಿಟ್ಟಿದ್ದರಿಂದ ಅಲ್ಲೊಂದು ಅಲಿಖಿತ ಶಿಸ್ತು ಇದ್ದುಬಿಡುತ್ತಿತ್ತು. ಅಜ್ಜ ಬರೆಯಲು ಕೂತನೆಂದರೆ ಇಡೀ ಮನೆಯಲ್ಲಿ ಒಂಥರದಲ್ಲಿ ಮೌನ ಆವರಿಸುತ್ತಿತ್ತು.

ನನ್ನ ಅಮ್ಮ ಸುಶ್ರಾವ್ಯವಾಗಿ ಹಾಡುತ್ತಿದ್ದಳು. ಅಮ್ಮ ದಾಸರ ಪದ್ಯಗಳನ್ನು ಹೇಳುವಾಗಲೆಲ್ಲ ಬಂದು ಕೂತು ಶ್ರದ್ಧೆಯಿಂದ ಕೇಳುತ್ತಿದ್ದ ಅಜ್ಜ, ಅದು ಮುಗಿದ ಮೇಲೆ ಆ ದಾಸರ ಕುರಿತು ವಿವರಗಳನ್ನೂ ಕೊಡುತ್ತಿದ್ದರು. ಕುಮಾರವ್ಯಾಸ ಭಾರತವನ್ನು ಅದೆಷ್ಟು ಚೆಂದ ಹೇಳುತ್ತಿದ್ದರೆಂದರೆ, ನಮಗೆಲ್ಲ ಕರ್ಣನೆಂದರೆ ಇಷ್ಟವಾಗಲು ಕಾರಣನೇ ಕುಮಾರವ್ಯಾಸ ಎನ್ನುತ್ತ ನಮ್ಮ ಕರ್ಣದೊಳಗೂ ಕರ್ಣನನ್ನು ಇಳಿಸಿಬಿಡುತ್ತಿದ್ದರು.

ನನಗೆ ತುಂಬ ಕುತೂಹಲ ಎನಿಸಿದ್ದೆಂದರೆ ದೇವರೆಂದರೆ ಸಿಡಿದುಬೀಳುತ್ತಿದ್ದರು ಅಜ್ಜ. ಅಜ್ಜಿ, ದೊಡ್ಡಮ್ಮಂದಿರೆಲ್ಲ ಅಪಾರವಾಗಿ ದೈವಭಕ್ತಿ ಇಟ್ಟುಕೊಂಡಿದ್ದರೆ ಅಜ್ಜ ಮಾತ್ರ ಅದರಿಂದ ಮಾರುದೂರ. ಅಜ್ಜಿಗೆ ಮಾತುಕೊಟ್ಟಂತೆ ಪ್ರತಿದಿವಸ ದೇವರ ಪೂಜೆಯನ್ನೇನೋ ಮಾಡುತ್ತಿದ್ದರು. ಆದರೆ ಬೈದುಕೊಂಡೇ ಮಾಡುತ್ತಿದ್ದರು. ಒಮ್ಮೆ ಅವರಿಗೆ ಆಸ್ತಮಾ ಆಗಿ ಮಲಗಿಬಿಟ್ಟಿದ್ದರು. ಆಗ ಅವರು 'ಈ ಆಸ್ತಮಾಕ್ಕೆ ಥ್ಯಾಂಕ್ಸ್ ಹೇಳುತ್ತೇನೆ. ಇದರಿಂದ ನಾನು ದೇವರ ಪೂಜೆ ಮಾಡುವುದು ತಪ್ಪಿತಲ್ಲ' ಎಂದದ್ದು ಈಗಲೂ ನನ್ನ ನೆನಪಿನಲ್ಲುಳಿದಿದೆ.

ಅಲ್ಲದೆ 'ನನಗೆ ಇಬ್ಬರು ಹೆಂಡತಿಯರು, ಒಂದು ನನ್ನ ಧರ್ಮಪತ್ನಿ, ಇನ್ನೊಂದು ಆಸ್ತಮಾ' ಎನ್ನುತ್ತಿದ್ದರು. ಅಂದರೆ ನೋವನ್ನೂ ತಿಳಿಹಾಸ್ಯವಾಗಿಸುವ ಕಲೆ ಅವರಿಗೆ ಒಲಿದಿತ್ತು.

ಹೀಗೆಲ್ಲ ಇದ್ದ ಅಜ್ಜ ಇಷ್ಟೊಂದು ದೊಡ್ಡ ಪತ್ರಕರ್ತನಾಗಿದ್ದ, ನಾಡು ಗುರುತಿಸುವಂತಹ ಕೆಲಸ ಮಾಡಿದ್ದ, ದೊಡ್ಡ ಸಾಹಿತಿಯಾಗಿದ್ದ ಎನ್ನುವುದು ತಿಳಿದದ್ದೇ ನಾವು ಮಧ್ಯವಯಸ್ಸನ್ನು ದಾಟಿದ ಮೇಲೆ. ಅವರ ಪದಾರ್ಥ ಚಿಂತಾಮಣಿಯಾಗಲಿ, ಲಾಂಗೂಲಾಚಾರ್ಯನಾಗಿ ಬರೆದ ಹರಟೆಯಾಗಲಿ, ಅನುವಾದ ಕೃತಿಗಳಾಗಲಿ, ವಿಜ್ಞಾನ ಲೇಖನಗಳಾಗಲಿ ಎಲ್ಲವನ್ನೂ ನಾನು ಓದಿದ್ದು ಈ ದಿನಗಳಲ್ಲಿ. ಈಗ ಅನಿಸುತ್ತಿದೆ, ಈ ಅಜ್ಜ ಅದೆಷ್ಟು ಎತ್ತರದಲ್ಲಿದ್ದ, ನಾವು ಆತನ ಕುರಿತು ಅಧ್ಯಯನ ಮಾಡಬೇಕಾದ್ದು ಎಷ್ಟೊಂದು ಇತ್ತು ಎಂಬುದಾಗಿ.

ಅಜ್ಜನನ್ನು ನೆನಪಿಸಿಕೊಳ್ಳಲು ಈಗ ಕೆಲವು ಕಾರಣಗಳಿವೆ. ಈಗ ಸಂಸ್ಕೃತವೇಕೆ ಬೇಕು, ಕನ್ನಡವೊಂದೇ ಸಾಕು ಎಂದು ಕನ್ನಡ, ಎಲ್ಲರ ಕನ್ನಡ, ಸಂಸ್ಕೃತ ಎಂಬೆಲ್ಲ ಭಾಷೆಯ ಕುರಿತಾದ ಈ ಕಿತ್ತಾಟಗಳು ನಡೆಯುತ್ತಿರುವ ಸಂದರ್ಭದಲ್ಲಿ ತಾತ ಬದುಕಿದ್ದರೆ ಯಾವ ಪ್ರತಿಕ್ರಿಯೆ ಅವರಿಂದ ಬರುತ್ತಿತ್ತು ಎಂದು ಯೋಚಿಸುತ್ತೇನೆ. ಭಾಷೆಯೊಂದು ಬೇರೆಬೇರೆ ಮೂಲಗಳಿಂದ ಎರವಲು ಪಡೆದ ಒಂದು ಶಿಷ್ಟ ಸಂಸ್ಕೃತಿಯಾಗುತ್ತದೆಂಬುದನ್ನು ಬರೆದೇ ಬದುಕಿ ತೋರಿದವರು. ಶಬ್ದಗಳ ವ್ಯುತ್ಪತ್ತಿಯ ಕುರಿತು ಹೆಕ್ಕಿಹೆಕ್ಕಿ ಕನ್ನಡಕ್ಕೆ ಒದಗಿಸಿಕೊಟ್ಟವರು ಅವರು.

## ಪಾ.ವೆಂ. ಸಾಹಿತ್ಯ ಸಿರಿ

ಪಾ.ವೆಂ. ಆಚಾರ್ಯ ಅವರ ಲೇಖನಗಳನ್ನು ಸಾಹಿತ್ಯಾಸಕ್ತರ ನೆರವಿನಿಂದ ಸಂಗ್ರಹಿಸಿಡುವ ಕೆಲಸದಲ್ಲಿ ಸುಮಾರು 5-6 ವರ್ಷಗಳಿಂದ ಛಾಯಾ ಅವರು ತೊಡಗಿಸಿಕೊಂಡಿದ್ದಾರೆ. ಇದುವರೆಗೆ ಸಂಗ್ರಹಿಸಿರುವ ಲೇಖನಗಳನ್ನು ಆರ್ಕೈವ್ ಮಾಡಿ ಇಡಲಾಗಿದೆ. pavem.sirinudi.org ಎಂಬ ಅಂತರ್ಜಾಲ ತಾಣದಲ್ಲಿ ಪಾವೆಂರವರ ಪುಸ್ತಕಗಳು, ಛಾಯಾಚಿತ್ರಗಳು, ಪತ್ರಿಕಾವರದಿಗಳು, ಕೈಬರಹಗಳು ಮುಂತಾದವುಗಳನ್ನು ಜೋಡಿಸಿಡಲಾಗಿದೆ. ಕಾಂತಾವರ ಕನ್ನಡ ಸಂಘದಲ್ಲಿ 'ಪಾ.ವೆಂ. ಆಚಾರ್ಯ ಪತ್ರಿಕಾ ಮಾಧ್ಯಮ ಪ್ರಶಸ್ತಿ'ಯನ್ನು ಈ ವರ್ಷದಿಂದ ಪ್ರಾರಂಭಿಸಲಾಗಿದೆ.

ನಿಜಕ್ಕೂ ಭಾಷೆ ತೀರ ತರ್ಕಶೂನ್ಯ most illogical ಆಗಿದೆ. ಮತ್ತೆ ನಾವು ನಮ್ಮ ತರ್ಕಶಾಸ್ತ್ರವನ್ನು ಕಟ್ಟಿ ಅದು ಬಹುಭದ್ರ ಕಟ್ಟಡವೆಂದು ಭಾವಿಸುತ್ತೇವೆ- ಎನ್ನುತ್ತಿದ್ದರು ಅಜ್ಜ. ಅದಕ್ಕೆ ಉದಾಹರಣೆಗಳು ಹೀಗಿವೆ...

ಶಬ್ದ ಸೃಷ್ಟಿಯಲ್ಲಿ, ಅರ್ಥದಾನದಲ್ಲಿ ಮಾನವಕುಲದ ಸಮಾನ ಚಿಂತನೆಗೆ ಅಜ್ಜ ಮನುಷ್ಯ ಶಬ್ದವನ್ನು ಉದಾಹರಿಸುತ್ತಾರೆ. 'ನನ್ನ ಮನುಷ್ಯನನ್ನು ಕಳುಹಿಸುತ್ತೇನೆ' ಎನ್ನುವಾಗ ಮನುಷ್ಯ ಸೇವಕನೆಂಬ ಅರ್ಥಕ್ಕೆ ತಿರುಗುತ್ತದೆ. ದ್ರಾವಿಡದಲ್ಲಿ ಆಳ್ ಎಂದರೆ ಮನುಷ್ಯನೂ ಹೌದು, ಸೇವಕನೂ ಹೌದು. ಅರಬ್ಬಿಯಲ್ಲಿ ಆದ್ಮಿ ಎಂದರೆ ಮನುಷ್ಯ. ನಮ್ಮ ಮನುವಿನಂತೆ ಅರಬ್ಬರಲ್ಲದೆ ಹೀಬ್ರೂ ಜನಾಂಗಗಳಿಗೂ ಆದಮ್ ಮೂಲಪುರುಷನೂ ಆದಿ ಋಷಿಯೂ ಆಗಿದ್ದಾನೆ. ಅಲ್ಲಿ ಕೂಡ ಆದ್ಮಿ ಶಬ್ದ ಸೇವಕನೆಂಬ ಅರ್ಥವನ್ನು ಸಂಪಾದಿಸಿದೆ. ಖಂಡಾಂತರದಲ್ಲಿ ಇಂಗ್ಲಿಷ್‌ನ man ಕೂಡ ನಮ್ಮಲ್ಲಿರುವಂತೆ ಸೇವಕನೆಂಬ ಅರ್ಥ ಪಡೆಯುತ್ತದೆ. I will send my man ಎನ್ನುತ್ತಾರೆ. ಅಂದರೆ ಎಷ್ಟೆಷ್ಟು ದೂರ ದೂರದ ಮಾನವರು, ಎಷ್ಟು ಸಮಾನವಾಗಿ ಆಲೋಚಿಸುತ್ತಾರೆ, ಎಷ್ಟು ಸಮಾನವಾಗಿ ಮಾತು ನಿರ್ಮಿಸಿಕೊಳ್ಳುತ್ತಾರೆ ಮತ್ತು ಎಷ್ಟು ನಿರ್-ಅರ್ಥಕವಾಗಿ ಹೋರಾಡುತ್ತಾರೆ ಎಂದು ವಿವರಿಸುತ್ತಾರೆ.

ಶಬ್ದಗಳು ಭಾಷೆಯಿಂದ ಭಾಷೆಗೆ ಹೋದಾಗ ಹೊಸ ಅವತಾರ ತಾಳುತ್ತವೆ. ಕಾಲಕ್ಕೆ ತಕ್ಕ ಕೋಲ ಕಟ್ಟುತ್ತವೆ. ಅಜ್ಜ ಕೂಡ ಶಬ್ದಗಳ ಭವಾವಳಿಯನ್ನು ಶೋಧಿಸುತ್ತ ಸಂಸ್ಕೃತ, ಪ್ರಾಕೃತ, ತಮಿಳು, ಬಂಗಾಳಿ, ಮರಾಠಿ, ಹಿಂದಿ, ಉರ್ದು, ಪರ್ಷಿಯನ್, ಅರಬ್ಬಿ, ಇಂಗ್ಲಿಷ್, ಪೋರ್ಚುಗೀಸ್ ಶಬ್ದಗಳನ್ನು ತನಿಖೆ ಮಾಡುತ್ತಾರೆ. ಈ ಶಬ್ದ ಜಿಜ್ಞಾಸೆಯಲ್ಲಿ ಸ್ವಾರಸ್ಯಕರ ಮಾಹಿತಿಗಳು ಗೊತ್ತಾಗುತ್ತವೆ. ರಿಕ್ಷಾ ಜಪಾನಿ ಮೂಲದ ಶಬ್ದ- ಜಿನ್‌ರಿಕಿಷಾ (ಜಿನ್ - ಮನುಷ್ಯ, ರಿಕಿ - ಶಕ್ತಿ, ಷಾ - ವಾಹನ). ಸಂಸ್ಕೃತದ ಪೃಥುಕ (ಹೊಸ ಪ್ರಾಯದ ಪ್ರಾಣಿ) ಪ್ರಾಕೃತದಲ್ಲಿ 'ಹುಡುಅ' ಆಗಿ ಕನ್ನಡದ ಹುಡುಗ ಆಗಿದೆ ಎಂದು ಬರೆದಿದ್ದಾರೆ.

ಇದೆಲ್ಲಕ್ಕಿಂತ ಮುಖ್ಯವಾಗಿ ಅವರು ಮಹಿಳಾ ದೃಷ್ಟಿಕೋನದಿಂದ ಆ ಕಾಲದಲ್ಲೇ ಯೋಚಿಸಿದ್ದು ಮತ್ತು ಆ ಶಬ್ದಗಳ ಹಿನ್ನೆಲೆಯನ್ನೂ ವಿವರಿಸಿದ್ದು ಒಬ್ಬ ಮಹಿಳೆಯಾಗಿ ನನಗೆ ಅಚ್ಚರಿಯೆನಿಸುತ್ತದೆ.

ಹೆಣ್ಣನ್ನು ನಿರ್ದೇಶಿಸಲು ನಮ್ಮಲ್ಲಿರುವ ಶಬ್ದಗಳು, ಪುರುಷ ಪರಂಪರೆಯಲ್ಲಿರುವ ಹೆಣ್ಣನ್ನು ಕುರಿತ ಇಷ್ಟ ಅನಿಷ್ಟಗಳನ್ನು, ಕನಸುಗಳನ್ನು ವಿವರಿಸುತ್ತವೆ. ಜಾಯಾ-ಜನನ ಕೊಡುವವಳು, ಪುರಂಧ್ರೀ-ತುಂಬಾ ಫಲವೀಯುವವಳು, ಸತಿ-ಸತ್ಯವಾಗಿರುವವಳು, ವಧು-ಕರೆದುಕೊಂಡು ಅಥವಾ ಹೊತ್ತುಕೊಂಡು ಬಂದವಳು, ಯೋಷಿತ್-ಜವ್ವನಗಿತ್ತಿ, ಅಂಗನೆ-ಮಾಟವಾದ ಅಂಗಗಳುಳ್ಳವಳು, ಅಸಿಯಳ್-ತೆಳ್ಳಗಿರುವವಳು, ಮಹಿಳಾ-ಉತ್ತೇಜನಗೊಳಿಸುವವಳು, ವನಿತಾ-ಆಸೆಪಡುವಂತೆ ಮಾಡುವವಳು, ರಮಣಿ-ರಮಿಸುವಂತೆ ಪ್ರೇರಿಸುವವಳು, ಲಲನಾ- ಲಲ್ಲೆಗರೆಯುವವಳು, ಪ್ರಮದೆ-ಕಾಮೋನ್ಮಾದವುಳ್ಳವಳು, ವಶಾ-ಅಂಕೆಯಲ್ಲಿರುವವಳು, ಮಾನಿನಿ-ಹಮ್ಮುಳ್ಳವವಳು, ಭಾಮಿನಿ-ಕೋಪ, ಛಲವುಳ್ಳವಳು. 'ಇಷ್ಟೆಲ್ಲ ಗಡುಸು ಇದ್ದೂ ಅವಳು ಅಬಲಾ ಆಗಿರಬೇಕು. ಅಂದರೆ ಮಾತ್ರ ಅವಳನ್ನು ಕಾಯುವ ಹೆಮ್ಮೆಯನ್ನು ಗಂಡು ಅನುಭವಿಸಬಲ್ಲ. ಇಂಥ ಎಲ್ಲ ಪರಸ್ಪರ ವಿರೋಧವಾದ ಗುಣ ಲಕ್ಷಣಗಳನ್ನು ಭಾರತೀಯ ರೊಮ್ಯಾಂಟಿಕ್ ಗಂಡಸು ಹೆಣ್ಣಿನಲ್ಲಿ ನಿರೀಕ್ಷಿಸಿದ್ದಾನೆ. ಇದು ಈ ಶಬ್ದಗಳು ಕೊಡುವ ಮಾಹಿತಿ' ಎನ್ನುತ್ತಾರೆ ಅಜ್ಜ.

'ಶಬ್ದಗಳ ಬೇರುಗಳನ್ನು ಹುಡುಕುವುದಷ್ಟೇ ಪದಾರ್ಥ ಚಿಂತಾಮಣಿಯ ಉದ್ದೇಶವಲ್ಲ. ನಾನು ಶಬ್ದ ಮೂಲವನ್ನು ಶೋಧಿಸುವುದರಿಂದ ತೃಪ್ತನಾಗಿಲ್ಲ. ಅವು ಬೇರೆ ಯಾವಯಾವ ಐತಿಹಾಸಿಕ, ನರವಂಶ ಚರಿತ್ರದ, ಅರ್ಥ ವ್ಯವಸ್ಥೆಯ, ಸಂಸ್ಕೃತಿ ಸಂಪ್ರದಾಯಗಳ, ಜನಾಂಗದ ವಲಸೆಯ ಬಗ್ಗೆ ಗುಟ್ಟು ಹೇಳುತ್ತವೆ ಎಂದು ವಿಚಾರಿಸಿದ್ದೇನೆ. ಮನುಷ್ಯನ ವಿಚಾರ ರೀತಿಯಲ್ಲಿರುವ ಸಾಮ್ಯ, ವೈಷಮ್ಯಗಳನ್ನು ಬೇರೆ ಭಾರತೀಯ, ವಿದೇಶೀಯ ಭಾಷೆಗಳ ಪದಗಳ ವಿಕಾಸದೊಡನೆ ಹೋಲಿಸಿದ್ದೇನೆ' ಎನ್ನುತ್ತಾರೆ ಅಜ್ಜ. ಪದಾರ್ಥ ಚಿಂತಾಮಣಿಯ ಜನಪ್ರಿಯತೆ ಎಷ್ಟೆಂದರೆ 'ಲಾಂಗೂಲಾಚಾರ್ಯನಾಗಿ ಕಾಲು ಶತಮಾನದಿಂದ ಗುರುತಿಸಲ್ಪಡುತ್ತಿದ್ದವನನ್ನು ಈ 'ಚಿಂತಾಮಣಿ' ವಿಮೋಚನೆಗೊಳಿಸಿಬಿಟ್ಟಿತು ಎಂದೂ ಹೇಳಿಕೊಂಡಿದ್ದುಂಟು.

ಅಜ್ಜ ಸರ್ವ ಕುತೂಹಲಿಯಾಗಿದ್ದರು. ಅವರ ಆಸಕ್ತಿಗೆ ಬರದ ವಿಷಯವೇ ಇರಲಿಲ್ಲ. ಸೀರೆಯಿಂದಲೇ ಮಹಾಭಾರತವಾಯಿತು, ದ್ರೌಪದಿ ಫ್ರಾಕ್ ತೊಟ್ಟಿದ್ದಿದ್ದರೆ ಅಥವಾ ತಮಿಳು ರೀತಿಯಲ್ಲಿ ಸೀರೆ ಉಟ್ಟಿದ್ದಿದ್ದರೆ ವಸ್ತ್ರಾಪಹರಣಕ್ಕೆ ಅವಕಾಶವಿರುತ್ತಿರಲಿಲ್ಲ ಎಂದಿದ್ದರು. ದಶರಥನಿಗೆ ಒಬ್ಬಳು ಹೆಂಡತಿ ಕಡಿಮೆ ಇದ್ದಿದ್ದರೆ ಅಥವಾ ಆ ಹೆಂಡತಿಯ ಮನಸ್ಸು ಸ್ವಲ್ಪ ಕಡಿಮೆ ಗಟ್ಟಿಯಾಗಿದ್ದಿದ್ದರೆ ಅಥವಾ ಅವನ ರಥದ ಗಾಲಿಯ ಕೀಲು ಸ್ವಲ್ಪ ಹೆಚ್ಚು ಗಟ್ಟಿಯಾಗಿದ್ದಿದ್ದರೆ - ರಾಮಾಯಣವೇ ಆಗುತ್ತಿದ್ದಿಲ್ಲ ಎಂಬುದು ಕೂಡ ಅವರದೇ ಮಾತು.

ಅವರ ಬಲು ಇಷ್ಟವಾದ ಸಾಹಿತ್ಯಪ್ರಕಾರ ಕಾವ್ಯ. ಪ್ರಾರಂಭದಲ್ಲಿ ದೀರ್ಘವಾದ ಕವನಗಳನ್ನು ಬರೆದರೂ ನಂತರದ ದಿನಗಳಲ್ಲಿ ಚುಟುಕು ಕವನಗಳನ್ನು ಬರೆದಿದ್ದಾರೆ. ನವ್ಯ ಕವಿಗಳನ್ನು ಹೀಗೆ ಕವಿತೆಯೊಂದರಲ್ಲಿ ಲೇವಡಿ ಮಾಡಿದ್ದಾರೆ. ಅದು ಇಂತಿದೆ:

**ಕವಿಯೊಬ್ಬ ಕವಿತೆಯನ್ನು**<br>**ಗಾಜಿನಲ್ಲಿ ಬರೆದ**<br>**ಕೈತಪ್ಪಿ ಕೆಳಗೆ ಒಗೆದ**<br>**ಕೈಗೆ ಬಂದಂತೆ ಚೂರುಗಳ ಜೋಡಿಸಿದ**<br>**ನವ್ಯಕಾವ್ಯ ಇದೆಂದು ಕರೆದ**

ಮೂಲತಃ ಸೌಮ್ಯ ಸ್ವಭಾವದವರಾಗಿದ್ದ ಅಜ್ಜ, ಆಕಸ್ಮಿಕಗಳಿಂದಲೇ ತಮ್ಮ ಬದುಕನ್ನು ರೂಪಿಸಿಕೊಂಡವರು. ಈಗ ಅಂಗೈಯಲ್ಲಿ ಪ್ರಪಂಚವನ್ನೇ ಇಟ್ಟುಕೊಂಡಿರುವ ನಾನು ಅವರ ಪುಸ್ತಕಗಳು, ಲೇಖನಗಳನ್ನೆಲ್ಲ ಓದುವಾಗ ಸಿಗುವ ಬೇರೆಬೇರೆ ದೇಶಗಳ ಚಿಕ್ಕ-ಚಿಕ್ಕ ಘಟನೆಗಳು, ಶಬ್ದಗಳ ವಿವರಣೆ, ಹರಟೆ, ವಿಜ್ಞಾನ ಲೇಖನಗಳು ಕೊಡುವ ಮಾಹಿತಿಯಿಂದ ಪುಳಕಿತಳಾಗಿದ್ದೇನೆ. ಮಾಹಿತಿ ಸಂಗ್ರಹಿಸಲು ಕಷ್ಟವಾದ ಆ ದಿನಗಳಲ್ಲಿ ಪುಸ್ತಕವನ್ನು ಓದಿ ಬರೆದೇ ಅಜ್ಜ ಜೀವನವನ್ನು ಹೇಗೆ ಸಾಗಿಸಿದರೆಂದು ಆಶ್ಚರ್ಯಪಟ್ಟಿದ್ದೇನೆ. ಅನೇಕ ಸಲ ಅನಿಸಿದ್ದಿದೆ, ಎಸ್ಸೆಸ್ಸೆಲ್ಸಿಯವರೆಗೆ ಮಾತ್ರ ಓದಿದ ಅಜ್ಜ ಎಷ್ಟೊಂದನ್ನು ಬರೆದ! ಛೇ, ಆತನೊಂದಿಗೆ ನಾನು ಇನ್ನಷ್ಟು ಒಡನಾಡಬೇಕಿತ್ತು.

**ನಿರೂಪಣೆ: ಭಾರತಿ ಹೆಗಡೆ**

## ಕಾರಕೂನನಿಂದ ಪತ್ರಕರ್ತನವರೆಗೆ

ಪಾಡಿಗಾರು ವೆಂಕಟರಮಣ ಆಚಾರ್ಯರು ಹುಟ್ಟಿದ್ದು 1915ರ ಫೆಬ್ರುವರಿ 6ರಂದು. ಪಾ.ವೆಂ. ತಮ್ಮ ಐದನೇ ವಯಸ್ಸಿನಲ್ಲಿ ತಂದೆಯನ್ನು ಕಳೆದುಕೊಂಡು ಸೋದೆ ಮತ್ತು ಉಡುಪಿಯಲ್ಲಿ ತಮ್ಮ ಬಾಲ್ಯವನ್ನು ಕಳೆದರು. ಹತ್ತನೇ ತರಗತಿಯವರೆಗೆ ಓದಿದ ಅವರು ಹಣದ ಅಡಚಣೆಗಳಿಂದಾಗಿ ಮುಂದೆ ಓದಲು ಆಗಲಿಲ್ಲ. ಜೀವನ ನಿರ್ವಹಣೆಗಾಗಿ ಉಪಾಧ್ಯಾಯರಾಗಿ, ಅಂಗಡಿಯಲ್ಲಿ ಮಾರಾಟಗಾರರಾಗಿ, ಕಾರಕೂನರಾಗಿ, ಲೆಕ್ಕಪತ್ರ ನೋಡಿಕೊಳ್ಳುತ್ತಿದ್ದರು. ನಂತರ ಮದ್ರಾಸಿಗೆ ಹೋಗಿ, ಅಲ್ಲಿ ಹೋಟೆಲೊಂದರಲ್ಲಿ ಬಿಲ್ ರೈಟರ್ ಆಗಿ ಸೇರಿದರು. ಅದು ಎರಡನೇ ಮಹಾಯುದ್ಧದ ಅವಧಿಯಾದ್ದರಿಂದ ಸ್ವಲ್ಪೇ ಸಮಯದಲ್ಲಿ ಧಾರವಾಡಕ್ಕೆ ಹಿಂದಿರುಗಬೇಕಾಯಿತು. ಮುಂದೆ ಪತ್ರಕರ್ತರಾಗಿ ವೃತ್ತಿ ಆರಂಭಿಸಿದ ಅವರು 1956ರಲ್ಲಿ 'ಕಸ್ತೂರಿ' ಮಾಸ ಪತ್ರಿಕೆ ಸಂಪಾದಕತ್ವದ ಹೊಣೆ ಹೊತ್ತು, ದೀರ್ಘಕಾಲ ಕಾರ್ಯನಿರ್ವಹಿಸಿದರು. 1992 ಮೇ 4ರಂದು ಪಾ.ವೆಂ. ಅಸ್ತಂಗತರಾದರು.

ಕನ್ನಡಪ್ರಭ 17-2-2001

# ಪಾ.ವೆಂ. ಆಚಾರ್ಯ: ಆಯ್ದ ಹರಟೆಗಳು

**ಪಾ.** ವೆಂ. ಆಚಾರ್ಯರನ್ನು ಕನ್ನಡದ ಹೆಸರಾಂತ ಲೇಖಕರು ಎಂದರೆ ಸಾಲದು; 'ಅನೇಕ ಹೆಸರಾಂತ' ಲೇಖಕರು ಎನ್ನಬೇಕು. ಪಾ.ವೆಂ., ಪಾ.ವೆಂ. ಆಚಾರ್ಯ, ಪಿ.ವಿ. ಆಚಾರ್ಯ, ಲಾಂಗೂಲಾಚಾರ್ಯ – ಹೀಗೆ ಅನೇಕ ಹೆಸರುಗಳಿಂದ ಅವರು ಪ್ರಸಿದ್ಧರಾಗಿದ್ದಾರೆ! ಅವರ ಹೆಸರಿನಂತೆಯೇ ಅವರ ಬರವಣಿಗೆಯ ಕ್ರಮಗಳೂ ಅನೇಕ. ಹರಟೆಗಳು, ವ್ಯಕ್ತಿಚಿತ್ರಗಳು, ಘಟನಾ ಚಿತ್ರಗಳು, ರಾಜಕೀಯ ಆಗುಹೋಗುಗಳು, ವೈಜ್ಞಾನಿಕ ಲೇಖನಗಳು – ಹೀಗೆ. ಈ ಎಲ್ಲ ಭಾಷಿಕ ಚಟುವಟಿಕೆಗೆ ಅವರಿಗೆ ಆಸರೆಯಾಗಿ ನಿಂತದ್ದು ಪತ್ರಿಕೋದ್ಯಮ. ಒಬ್ಬ ಕ್ರಿಯಾಶೀಲ ಲೇಖಕ ಪತ್ರಿಕೋದ್ಯಮಿ ಆದಾಗ, ಪತ್ರಿಕೋದ್ಯಮ ಆತನ ಬರವಣಿಗೆಗೆ ಕೊಡಬಹುದಾದ ರುಚಿ, ಸಂಸ್ಕಾರ ಪಾವೆಂ ಅವರ ಬರವಣಿಗೆಗೂ ದಕ್ಕಿದೆ. ಹಳೇ ಮೈಸೂರಿನ ಕಡೆ ವೈಎನ್‌ಕೆ ಇದ್ದಂತೆ, ದಕ್ಷಿಣ ಕನ್ನಡದ ಈ ಪಾವೆಂ! ಆಮೇಲೆ ಉತ್ತರ ಕರ್ನಾಟಕದಲ್ಲೂ ತಮ್ಮ ಕಾರ್ಯಕ್ಷೇತ್ರ ಸ್ಥಾಪಿಸಿದವರು! ಪತ್ರಿಕೆಯ ಮೂಲಕ ಅನೇಕ ಲೇಖಕರನ್ನು ಬೆಳಕಿಗೆ ತಂದವರು. ಪತ್ರಿಕೋದ್ಯಮಕ್ಕೆ ಬಹು ಅಗತ್ಯವಾದ ಬಹುಶ್ರುತತತ್ವದಿಂದ, ತಮ್ಮ ಬರವಣಿಗೆಗೆ ಹಲವು ಬಣ್ಣಗಳನ್ನು ಪಡೆದವರು. ಪತ್ರಿಕೋದ್ಯಮದ ಬಹು ಮುಖ್ಯ ಆಸಕ್ತಿಯಾದ ರಾಜಕೀಯವನ್ನು ತಮ್ಮ ಬರವಣಿಗೆಯ ಹಾಸುಹೊಕ್ಕು ಮಾಡಿಕೊಂಡವರು. ಪತ್ರಿಕೋದ್ಯಮದ ಆದ್ಯ ಕರ್ತವ್ಯವಾದ ರಾಜಕೀಯ ಎಚ್ಚರವನ್ನು ಉದ್ದಕ್ಕೂ ಜತನವಾಗಿ ಕಾಯ್ದುಕೊಂಡವರು. ನಮ್ಮ ಪತ್ರಿಕೋದ್ಯಮ ತನ್ನ ರಾಜಕೀಯ ಎಚ್ಚರವನ್ನು ಪ್ರಕಟಿಸುವ ಎರಡು ಪ್ರಧಾನ ಉಪಕ್ರಮಗಳು ಕುಟುಕುವುದು ಅಥವಾ ಬಗುಳುವುದು. ಪಾವೆಂ ಕುಟುಕುವ ಮಾರ್ಗವನ್ನು ತಮ್ಮ ಬರವಣಿಗೆಯಲ್ಲಿ ಒಪ್ಪಿಕೊಂಡವರು. ಚೂಪಾದ ಬರವಣಿಗೆ ಅವರದ್ದು. ವಿಡಂಬನೆ ಅವರ ಪ್ರಧಾನವಾದ ಅಸ್ತ್ರ. ಹರಟೆ, ಪ್ರಬಂಧಗಳಿರಲಿ, ಅವರು ಪದ್ಯಗಳನ್ನು ಬರೆದಾಗಲೂ ವಿಡಂಬನೆ ಅಲ್ಲಿ ವಿಜೃಂಭಿಸುತ್ತದೆ. ಇನ್ನು ಹರಟೆಗಳಲ್ಲಿಯಂತೂ ಹೇಳಬೇಕಾದ್ದೇ ಇಲ್ಲ.

ಪಾವೆಂ ಅವರ ಸಾಧನೆಗಳಿಗೂ ಅನಂತ ಮುಖಗಳು. ಪ್ರಸ್ತಾವನೆಯಲ್ಲಿ ಶ್ರೀನಿವಾಸ ಹಾವನೂರು ಅವರು ವಿವರಿಸಿರುವಂತೆ ಪಾವೆಂ ಕಸ್ತೂರಿಯ ಸಮರ್ಥ ಸಂಪಾದಕರು (18 ವರ್ಷ ಅದರ ಚುಕ್ಕಾಣಿ ಹಿಡಿದು, ಕನ್ನಡಕ್ಕೆ ಈವತ್ತಿಗೂ ವಿಶಿಷ್ಟ ಎನ್ನಿಸುವ ಆ ಪತ್ರಿಕೆಯನ್ನು ರೂಪಿಸಿದವರು), ಓದುಗರೊಡನೆ ಹರಟೆ ಹೊಡೆಯುವ ಲಾಂಗೂಲಾಚಾರ್ಯರು, ಪ್ರಥಮ ದರ್ಜೆಯ ಚಿಂತಕರು, ಸರ್ವಕುತೂಹಲಿ – ಸರ್ವಜ್ಞಾಚಾರ್ಯರು, ಪ್ರತಿಭಾವಂತ ಪಂಡಿತರು.

ಅವರು ಶಾಲೆಯಲ್ಲಿ ಕಲಿತದ್ದು ಕಡಿಮೆ. (ಎಸ್.ಎಸ್.ಎಲ್.ಸಿ.ಗೆ ಅವರ ಶಾಲಾ ಅಭ್ಯಾಸ ಮುಗಿಯಿತು). ಆದರೆ ಅನುಭವ – ಅಧ್ಯಯನಗಳಿಂದ ಕಲಿತದ್ದು ಅಪಾರ. ಆದುದರಿಂದಲೇ ಅವರು ಡಿವಿಜಿ ಅವರಂತೆ ಸ್ವಯಂಭೂ ಆಚಾರ್ಯರು; ಆನಂದಕಂದರಂತೆ ಸ್ವಯಂಸಿದ್ಧ ಚರಿತ್ರರು. ಉಡುಪಿಯಲ್ಲಿ ಶಾಲಾಮಾಸ್ತರಿಕೆ ಮಾಡಿದರಂತೆ; ಅಂಗಡಿ ಲೆಕ್ಕ ಬರೆದರಂತೆ; ಮುದ್ರಣ ಕೆಲಸ ನೋಡಿಕೊಂಡರಂತೆ. ಹೀಗೆ ಏಳೆಂಟು ವರ್ಷ ಉಡುಪಿಯಲ್ಲಿ ಕಳೆದು, 1942 ರಲ್ಲಿ ಹುಬ್ಬಳ್ಳಿಗೆ ಬಂದು ಸಂಯುಕ್ತ ಕರ್ನಾಟಕ ಪತ್ರಿಕೆಯನ್ನು ಸೇರಿಕೊಂಡರು. ಕರ್ಮವೀರದಲ್ಲಿ ಲೇಖನ ವ್ಯವಸಾಯ ಕೈಗೊಂಡರು. ಪುಸ್ತಕ ವಿಮರ್ಶೆ, ಹರಟೆ, ರಾಜಕೀಯ ಟೀಕೆ ಟಿಪ್ಪಣಿ ಬರೆಯತೊಡಗಿದರು. 1959 ರಲ್ಲಿ ಕಸ್ತೂರಿ ಡೈಜೆಸ್ಟ್ ಪತ್ರಿಕೆ ಪ್ರಾರಂಭವಾದಾಗ ಪಾವೆಂ ಅದರ ಸಂಪಾದಕರಾದರು. ಕಸ್ತೂರಿಯನ್ನು ಅವರು ರೂಪಿಸಿದರು; ಅವರನ್ನು ಕಸ್ತೂರಿ ರೂಪಿಸಿತು.

## ಹಲವು ಕವಲು

ಕವನ, ಕತೆ, ಪ್ರಬಂಧ, ವೈಜ್ಞಾನಿಕ ಲೇಖನ, ಚಿಂತನೆ, ಹರಟೆ – ಎಂದು ಪಾವೆಂ ಅವರ ಬರವಣಿಗೆ ಹಲವು ಕವಲಾಗಿ ಹರಡಿಕೊಂಡರೂ, ಹರಟೆ ಅದರ ಆಧಾರ ಕಾಂಡ. ಹರಟೆ ಅವರಿಗೆ ಮೈ ಉಂಡಂತೆ ಕನ್ನಡದ ಇನ್ನೊಬ್ಬ ಲೇಖಕನಿಗೆ ಮೈಉಂಡದ್ದು ಕಾಣದು. ಸುಮಾರು 10,000 ಪುಟಗಳಷ್ಟು ಸಾಹಿತ್ಯವನ್ನು ಪಾವೆಂ ರಚಿಸಿದ್ದರೆ, ಅದರಲ್ಲಿ ಹರಟೆಗಳದ್ದೇ ಸಿಂಹಪಾಲು. ಈವರೆಗೆ ಅವರ ನಾಲ್ಕು ಹರಟೆಗಳ ಸಂಗ್ರಹಗಳು ಪ್ರಕಟವಾಗಿವೆ. ಅವು: ಪ್ರಹಾರ, ಲೋಕದ ಡೊಂಕು, ವಕ್ರದೃಷ್ಟಿ, ವಿಪರೀತ. ಇನ್ನೂ ಪುಸ್ತಕ ರೂಪದಲ್ಲಿ ಬಾರದೆ ಪತ್ರಿಕೆಯ ಕಾಲಮ್ಮುಗಳಲ್ಲೇ ಉಳಿದಿರುವ ಹರಟೆಗಳು ಅದೆಷ್ಟೋ! ಹೀಗಾಗಿ ಹರಟೆಗಳನ್ನು ಒಂದು ಸಾಹಿತ್ಯಕ ಪ್ರಭೇದವಾಗಿ ರೂಪಿಸಿದವರಲ್ಲಿ ಪಾವೆಂ ಆದ್ಯರು. ಲಲಿತ ಪ್ರಬಂಧಗಳಿಗೆ ಎ.ಎನ್. ಮೂರ್ತಿರಾಯರಿರುವಂತೆ, ಹರಟೆಗೆ ಲಾಂಗೂಲಾಚಾರ್ಯ ಉರುಫ್ ಪಾವೆಂ ಅವರು.

ಹರಟೆ ಹೊಡೆಯುವುದು ಒಂದು ಅದ್ಭುತ ಕಲೆ. ಅದು ಎಲ್ಲರಿಗೂ ಸಿದ್ಧಿಸುವಂಥದಲ್ಲ. ಅದಕ್ಕೆ ಕವಿತ್ವ ಬೇಕು; ಕತೆಗಾರಿಕೆ ಬೇಕು; ಮಾತಿನ ಜಾಣ್ಮೆ ಬೇಕು; ಶಬ್ದ ಚಮತ್ಕೃತಿ ಬೇಕು; ಹರಿತ ವ್ಯಂಗ್ಯ ಬೇಕು. ಹಾಸ್ಯವಂತೂ ಏಕಪ್ರಕಾರವಾಗಿ ಲಾಳಿ ಹೊಡೆಯುತ್ತಿರಬೇಕು. ಅನುಭವದ ಅಪಾರ ಬಂಡವಾಳ, ಅಧ್ಯಯನದಿಂದ ದೊರಕಿಸಿದ ಸರ್ವಶ್ರುತತ್ವ, ವಿಷಯದಿಂದ ವಿಷಯಕ್ಕೆ ಹಾರಿಕೊಳ್ಳುವ ಲಾಘವತೆ –ಎಲ್ಲವೂ ಬೇಕು. ಪಾವೆಂಗೆ ಅದು ಇದ್ದಿತೆಂದೇ ಅವರು ಕನ್ನಡದ ಅತ್ಯುತ್ತಮ 'ಹರಟೆಮಲ್ಲ'ರು. ತಮ್ಮ ಅನಾರೋಗ್ಯ, ಆಸ್ತಮಾ ಪೀಡೆಗಳನ್ನೇ ಹಾಸ್ಯಕ್ಕೆ ಗುರಿಮಾಡುವ ಮನಸ್ಸಿನ ಆರೋಗ್ಯ ಅವರಿಗೆ ಇದೆ. ಎಂಥ ಗಂಭೀರ ಸಂಗತಿಯನ್ನೂ ತಲೆಕೆಳಗು ಮಾಡಿ ನೋಡುವ ವಿಲಕ್ಷಣ ನೋಟ ಅವರಿಗೆ ಉಂಟು. ಕವಿಗಳೆಲ್ಲಾ ಕೋಗಿಲೆ, ನವಿಲು, ಗಿಳಿ, ದುಂಬಿಗಳನ್ನು ಹಾಡಿಹೊಗಳಿದರೆ, ಈ ವಿಕಟಕವಿ 'ನುಸಿ'ಯ ಬಗ್ಗೆ ಒಂದು ಸಾನೆಟ್ ಬರೆಯುತ್ತಾರೆ. 'ಓ ನುಸಿಯೆ, ಪ್ರೇಮಗಾನದ ಸಸಿಯೆ' ಎಂದು ಅದನ್ನು ತಾರೀಫು ಮಾಡುತ್ತಾರೆ!

**ಸಾಹಿತ್ಯ ಲೋಕ**




ಪಾ.ವೆಂ. ಆಚಾರ್ಯ: ಆಯ್ದ ಹರಟೆಗಳು ಗ್ರಂಥದಲ್ಲಿ ಸ್ವಯಂ ಸಮರ್ಥ ಹರಟೆಮಲ್ಲರಾದ ಪ್ರೊ। ಅ.ರಾ. ಮಿತ್ರರೂ, ವಿದ್ವಾಂಸರಾದ ಡಾ। ಶ್ರೀನಿವಾಸ ಹಾವನೂರರೂ ಕೂಡಿ, ಪಾವೆಂ ಅವರ ಅತ್ಯುತ್ತಮ ಹರಟೆಗಳನ್ನು ಆರಿಸಿ ಕೊಟ್ಟಿದ್ದಾರೆ. ಮಿತ್ರ ಮತ್ತು ಹಾವನೂರರ ಈ ಜೋಡಿಯೂ ವಿಲಕ್ಷಣವಾದದ್ದೇ. ಹರಟೆಮಲ್ಲರಾದ ಮಿತ್ರರು, ಮುಚ್ಚಿಟ್ಟುಕೊಂಡ ವಿದ್ವಾಂಸರು! ವಿದ್ವಾಂಸರಾದ ಹಾವನೂರರು ಮುಚ್ಚಿಟ್ಟುಕೊಂಡ ಹರಟೆಮಲ್ಲರು! ಪಾವೆಂ ಅವರ ಹರಟೆಗಳನ್ನು ಆಯ್ದು ಕೊಡಲು ಇವರನ್ನು ಪ್ರಕಾಶಕರು ಕೇಳಿಕೊಂಡಿದ್ದು ಯುಕ್ತವಾಗಿದೆ. ಸಂಗ್ರಹಕ್ಕೆ ಈ ಇಬ್ಬರು ಸಂಪಾದಕರು ಬರೆದಿರುವ ಪ್ರತ್ಯೇಕ ಪ್ರಸ್ತಾವನೆಗಳು ಪಾ.ವೆಂ. ಅವರ ಬಗ್ಗೆ ಓದುಗರಿಗೆ ಆಸಕ್ತಿ ಮೂಡಿಸುವಲ್ಲಿ ಸಫಲವಾಗಿವೆ.

**ಡಾ। ಎಚ್.ಎಸ್. ವೆಂಕಟೇಶಮೂರ್ತಿ**

ಬೇಡುವರ ರೇಡಿಯೋ ನೀನು! ಬಡವರ ಬಂಧು!
ಹರಕುಗೋಡೆಯ ವ್ಯಾಸಿ! ನಿನಗೆ ನಮಿಸುವೆನಿಂದು!
–ಎಂದು ಕೈಕೈ ಮುಗಿಯುತ್ತಾರೆ.

ಪಾವೆಂ ಅವರ ವಿಡಂಬನ ಸ್ವರೂಪವನ್ನು ಸೂಚಿಸಲು ಇಷ್ಟು ಸಾಕು!

ಇವರ ಹರಟೆ, ನಗೆಬರಹಗಳ ಪುಸ್ತಕಗಳ ಹೆಸರುಗಳನ್ನೇ ನೋಡಿ! ಪ್ರಹಾರ, ಲೋಕದ ಡೊಂಕು, ವಕ್ರದೃಷ್ಟಿ ವಿಪರೀತ! ಎಲ್ಲದರ ಮೂಲದಲ್ಲೂ ಘಾತಿಸುವ, ಜಗ್ಗಿಸಿ ನೋಡಿ ಸತ್ಯವನ್ನು ಕಾಣಿಸುವ ವಕ್ರದೃಷ್ಟಿ ಉಂಟು. ಇನ್ನು ಕವಿಗಳೆಲ್ಲಾ ಚಕೋರ, ಮರಾಳ ಎಂದು ಮುಂತಾಗಿ ರಮ್ಯವಾದ ಹೆಸರಿಟ್ಟುಕೊಂಡರೆ, ಪಾವೆಂ ತಮ್ಮನ್ನು ಕರೆದುಕೊಳ್ಳುವುದು ಲಾಂಗೂಲಾಚಾರ್ಯ ಎಂದು. ಲಾಂಗೂಲ ಎಂದರೆ ಬಾಲ ಎಂದು ಅರ್ಥ! ಪಾವೆಂ ಒಂದು ಲೇಖನದಲ್ಲಿ ತಾವೇ ವಿವೇಚಿಸಿಕೊಂಡಿದ್ದಾರೆ: "ಲಾಂಗೂಲಾಚಾರ್ಯರ ಹುಟ್ಟು ಹೆಸರೇನು? ಲಾಂಗೂಲಾಚಾರ್ಯ ಎಂಬ ಬಿರುದನ್ನು ಅವರಿಗೆ ಯಾರು ದಯಪಾಲಿಸಿದರು? ಎಂದು ಕುತೂಹಲ ಪ್ರದರ್ಶಿಸಲಾಗಿದೆ. ಮೊದಲನೆಯದಾಗಿ ಲಾಂಗೂಲಾಚಾರ್ಯರು ಹುಟ್ಟಲೇ ಇಲ್ಲ. ಆದ್ದರಿಂದ ಅವರಿಗೆ ಹುಟ್ಟು ಹೆಸರೇನು?– ಎಂಬ ಪ್ರಶ್ನೆಯೇ ಏಳುವುದಿಲ್ಲ. ಅವರು ಸ್ವಯಂಭು ಲಿಂಗದಂತೆ, ಕಾಲರಾ ಪಿಡುಗಿನಂತೆ ಏಕಾಏಕಿ ಪ್ರಕಟವಾದರು".

★

ಪ್ರಸ್ತುತ ಗ್ರಂಥದಲ್ಲಿ ಸ್ವಯಂ ಸಮರ್ಥ ಹರಟೆಮಲ್ಲರಾದ ಪ್ರೊ। ಅ.ರಾ. ಮಿತ್ರರೂ, ವಿದ್ವಾಂಸರಾದ ಡಾ। ಶ್ರೀನಿವಾಸ ಹಾವನೂರರೂ ಕೂಡಿ, ಪಾವೆಂ ಅವರ ಅತ್ಯುತ್ತಮ ಹರಟೆಗಳನ್ನು ಆರಿಸಿ ಕೊಟ್ಟಿದ್ದಾರೆ. ಮಿತ್ರ ಮತ್ತು ಹಾವನೂರರ ಈ ಜೋಡಿಯೂ ವಿಲಕ್ಷಣವಾದದ್ದೇ. ಹರಟೆಮಲ್ಲರಾದ ಮಿತ್ರರು, ಮುಚ್ಚಿಟ್ಟುಕೊಂಡ ವಿದ್ವಾಂಸರು! ವಿದ್ವಾಂಸರಾದ ಹಾವನೂರರು ಮುಚ್ಚಿಟ್ಟುಕೊಂಡ ಹರಟೆಮಲ್ಲರು! ಪಾವೆಂ ಅವರ ಹರಟೆಗಳನ್ನು ಆಯ್ದು ಕೊಡಲು ಇವರನ್ನು . ಪ್ರಕಾಶಕರು ಕೇಳಿಕೊಂಡಿದ್ದು ಯುಕ್ತವಾಗಿದೆ. ಸಂಗ್ರಹಕ್ಕೆ ಈ ಇಬ್ಬರು ಸಂಪಾದಕರು ಬರೆದಿರುವ ಪ್ರತ್ಯೇಕ ಪ್ರಸ್ತಾವನೆಗಳು ಪಾ.ವೆಂ. ಅವರ ಬಗ್ಗೆ ಓದುಗರಿಗೆ ಆಸಕ್ತಿ ಮೂಡಿಸುವಲ್ಲಿ ಸಫಲವಾಗಿವೆ.

•

ಆಯ್ದ ಹರಟೆಗಳು ಸಂಗ್ರಹದಲ್ಲಿ 36 ಲೇಖನಗಳಿವೆ. ಚದುರಂಗದ ಕುದುರೆಯಂತೆ ವಕ್ರ ಕುಪ್ಪಳಿಕೆ ಈ ಹರಟೆಗಳ ಸಾಮಾನ್ಯ ಲಕ್ಷಣ. ಲೋಕ ವ್ಯವಹಾರ, ವಿಶೇಷವಾಗಿ ರಾಜಕೀಯ, ಇವುಗಳ ಪ್ರಧಾನ ಆಸಕ್ತಿ. ನಗೆ ಇವುಗಳ ಸಹಜ ಸ್ವಭಾವ. ಇವುಗಳ ವಿಷಯಾಂತರ ಪ್ರವೃತ್ತಿ, ಲಲಿತ ಪ್ರಬಂಧಗಳಿಗಿಂತ ಕ್ಷಿಪ್ರಗತಿಯುಳ್ಳದ್ದು. ಅಶ್ವಮೇಧದ ಕುದುರೆಯಂತೆ ಹರಟೆಗೂ ಯಾವುದೇ ಲಂಗುಲಗಾಮು ಇರುವುದಿಲ್ಲ. ಇರಬೇಕಾದ್ದೂ ಇಲ್ಲ. ಹರಟೆಯ ಜಾಯಮಾನವೇ ಹಾಗೆ. ಹರಟೆ ಹರಡಿಕೊಳ್ಳುತ್ತದೆ. ಆದರೆ ಹರಟೆ ಹೊಡೆಯುವವ ನಮ್ಮ ಕಣ್ಣೆದುರು ಮೂರ್ತಿಮತ್ತಾಗಿ ನಿಲ್ಲುತ್ತಾನೆ. ಪುಸ್ತಕ ಓದಿ ಮುಗಿಸಿದಾಗ ಪಾ.ವೆಂ. ಒಬ್ಬ ಚುರುಕು ವ್ಯಕ್ತಿಯಾಗಿ, ಜೀವಂತ ವ್ಯಕ್ತಿಯಾಗಿ, ಒಬ್ಬ ಲೋಕವಿದನಾಗಿ ನಮ್ಮ ಕಣ್ಣೆದುರು ನಿಲ್ಲುತ್ತಾರೆ.

ಕೇಶವ ಪ್ರಸಾದ ವರ್ಮ ಎನ್ನುವವರು ನೊಣಗಳನ್ನು ಕೊಲ್ಲುವ ಒಂದು ಉಪಕರಣವನ್ನು ಕಂಡುಹಿಡಿದರು ಎಂಬುದು ಒಂದು ವಾರ್ತೆ. ಪಾ.ವೆಂ. ಅವರನ್ನು 'ಮಕ್ಷಿಕ ಧ್ವಂಸಕ ಯಂತ್ರ' ಎಂಬ ಹರಟೆಗೆ ತೊಡಗಿಸಲು ಅಷ್ಟು ವಾರ್ತೆ ಸಾಕು! ಕೆಲಸ ಇಲ್ಲದವರು ಈವರೆಗೆ ನೊಣ ಹೊಡೆಯುತ್ತಾ ಕುಳಿತುಕೊಳ್ಳುತ್ತಿದ್ದರು. ಈಗ ನೊಣ ಹೊಡೆಯುವ ಯಂತ್ರ ಬಂದಿರುವುದರಿಂದ, ನಿರುದ್ಯೋಗಿಗಳಿಗೆ ನೊಣ ಹೊಡೆಯುವ ಉದ್ಯೋಗವೂ ತಪ್ಪಿ ಹೋಯಿತು ಎಂದು ಹರಟೆಯನ್ನು ಪ್ರಾರಂಭಿಸುತ್ತಾರೆ. ನೊಣಗಳು ಸೊಳ್ಳೆಗಳಂತೆ ನಮ್ಮ ರಕ್ತವನ್ನೇನೂ ಹೀರುವುದಿಲ್ಲ. ಹಾಗಿರುವಾಗ ಇವು ಮನುಷ್ಯರನ್ನು ಮುತ್ತುವುದಾದರೂ ಏಕೆ ಎಂಬ ಗಂಭೀರ (!) ಜಿಜ್ಞಾಸೆಗೆ ಎರಡನೇ ಪ್ಯಾರಾದಲ್ಲಿ ತೊಡಗುತ್ತಾರೆ. ಆಮೇಲೆ ಕೇಶವ ಪ್ರಸಾದರ ಯಂತ್ರದ ಪರಿಚಯ. ಈ ಯಂತ್ರ ನಿರ್ಮಾಣಕ್ಕೆ ಅವರಿಗೆ ಸ್ಫೂರ್ತಿ ಹೇಗೆ ಒದಗಿತು ಎಂಬುದರ ರಸವತ್ತಾದ ವರ್ಣನೆ! ಇಷ್ಟೆಲ್ಲಾ ಆದ ಮೇಲೆ ಇಡೀ ಪ್ರಕರಣದ ಮೇಲೆ ಲಾಂಗೂಲಾಚಾರ್ಯರ ಭರತವಾಕ್ಯ (ಇದು ಸಾಮಾನ್ಯವಾಗಿ ಪಾ.ವೆಂ. ಅವರ ಹೆಚ್ಚಿನ ಹರಟೆಗಳಲ್ಲಿ ಕಾಣುವ ತಂತ್ರ).

"ಈ ಸುದ್ದಿಯನ್ನೋದಿದ ಮೇಲೆ ಲಾಂಗೂಲಾಚಾರ್ಯರು ಸರಕಾರಕ್ಕೆ ಎರಡು ಸೂಚನೆಗಳನ್ನು ಕೊಡಬೇಕೆನ್ನುತ್ತಾರೆ. ಒಂದು "ವರ್ಮಾಜಿಯವರಿಗೆ ನೊಳಂಬಾಂತಕ" ಎಂದು ಬಿರುದು ಕೊಡಬೇಕು. ಈ ಬಿರುದನ್ನು ಹೊತ್ತ ಅರಸನೊಬ್ಬ ಕರ್ನಾಟಕದಲ್ಲಿ ಆಗಿ ಹೋದುದರಿಂದ ಇವರನ್ನು "ಇಮ್ಮಡಿ ನೊಳಂಭಾಂತಕ" ಎಂದು ಕರೆಯಬಹುದು.

ಎರಡು, ಈ ಯಂತ್ರಗಳನ್ನು ಲಕ್ಷಗಟ್ಟಳೆ ಮಾಡಿಸಿ, ಪ್ರತಿಯೊಬ್ಬ ನಿರುದ್ಯೋಗಿಗೂ ಒಂದರಂತೆ ಪುಕ್ಕಟೆಯಾಗಿ ಒದಗಿಸಬೇಕು. ಅಂದರೆ ನಿರುದ್ಯೋಗಿಗಳಿಗೆ ನಿರಾತಂಕವಾಗಿ ತಮ್ಮ ನಿರುದ್ಯೋಗ ವೃತ್ತಿಯನ್ನು ಸಾಗಿಸಲು ಅನುಕೂಲವಾದೀತು."

ನಿಮ್ಮ ಅಲರ್ಜಿ ಯಾವುದು? ಎಂಬ ಹರಟೆಯಲ್ಲಿ ಪಾವೆಂ, ತಮ್ಮ 'ಅಲರ್ಜಿ'ಯನ್ನೇ ಹಾಸ್ಯಮಯವಾಗಿ ವರ್ಣಿಸಿದ್ದಾರೆ. ಆ ಹಾಸ್ಯದ ಹಿಂದೆಯೂ ಅಲರ್ಜಿಯ ಬಗ್ಗೆ ಅವರಿಗಿರುವ ವೈಜ್ಞಾನಿಕ ಅರಿವು ಸ್ಪಷ್ಟವಾಗಿ ವಿದಿತವಾಗುತ್ತದೆ. ಶ್ರೀಮನ್ನಾರಾಯಣನ ನಿವೃತ್ತಿ... ಎಂಬ ಹರಟೆಯಲ್ಲಿ ಒಂದು ಆಧುನಿಕ ಪುರಾಣದ ದೃಷ್ಟಿಯಿದೆ. (ನೆಹರೂ ನಿವೃತ್ತರಾಗುವುದಿಲ್ಲ ಎಂಬ ಅಡಿಗರ ಪದ್ಯ ಕೂಡ ನೆನಪಾಗುತ್ತಿದೆ). ರಾಜಕಾರಣದ ಎಲ್ಲ ನಾಟಕಗಳೂ ಇಲ್ಲಿ ಹಾಸ್ಯಸ್ಪದವಾಗಿ ಆಸ್ಫೋಟಿತವಾಗುತ್ತವೆ. ಐದು ಸಾಲದು, ಏಳು ಬೇಕು ಎಂಬ ಹರಟೆಯಲ್ಲಿ ಆಚಾರ್ಯರ ಲೋಕಜ್ಞಾನ ಮತ್ತು ಶಬ್ದವಿವೇಕ ಎರಡೂ ಒಟ್ಟಿಗೇ ವ್ಯಕ್ತವಾಗುವಂತಿದೆ.

7ನೇ ಪುಟ ನೋಡಿ

**ಸಂಪಾದಕರು: ಪ್ರೊ। ಅ.ರಾ. ಮಿತ್ರ, ಡಾ। ಶ್ರೀನಿವಾಸ ಹಾವನೂರ; ಪ್ರಕಾಶಕರು: ಪ್ರಿಸಮ್ ಬುಕ್ಸ್ ಪ್ರೈ. ಲಿ. ನಂ. 1865, 32ನೇ ಕ್ರಾಸ್, ಬನಶಂಕರಿ ಎರಡನೇ ಹಂತ, ಬೆಂಗಳೂರು– 560070; 2000; 70–00.**

...ಕ ಬಜೆಟ್:
...ವರ ಟೀಕೆ

...ನ್ಯಾಯವನ್ನು ಸರಿ ... ಸರ್ಕಾರವನ್ನು ...ರಡು ದಿನಗಳಲ್ಲೇ ...ಪಕ್ಷಗಳ ಸಂಸದರ ...ವಾಗಿ ರಾಜ್ಯಸಭೆಯ ...ಯುಕ ಕೆ.ರೆಹಮಾನ್

...ರಾದ ಜಾತ್ಯತೀತ ...ಾಡ ಮತ್ತು ಕಾಂಗ್ರೆ... ಕರ್ನಾಟಕದ ... ಕರಾಳ ಬಜೆಟ್

...ಳೂರು, ಮಂಡ್ಯ ...ದೇಶದ ಯೋಜನೆ ... ವರ್ಷವಾದರೂ ...ಡಿಮೆ ಹಣವನ್ನು ...ಲಾಗಿದೆ ಎಂದು ...ಧಾನ ವ್ಯಕ್ತಪಡಿಸಿ

# ಪಾ.ವೆಂ. ಆಚಾರ್ಯರ ಆಯ್ದ ಹರಟೆಗಳು

6ನೇ ಪುಟದಿಂದ

ಕಾರ್ಪೊರೇಷನ್ ಎಂಬ ಪದವನ್ನು ನೋಡಿ, ಎಚ್. ವಿ. ಕಾಮತರು ಚೋರ್ಪೊರೇಷನ್ ಎಂಬ ಪದವನ್ನು ಹುಟ್ಟು ಹಾಕಿದರಂತೆ. ಅಷ್ಟು ವಾಸನೆ ಲಾಂಗೂಲಾಚಾರ್ಯರಿಗೆ ಸಾಕು. ಅವರು ಶೋರ್ಪೊರೇಷನ್, ಗೊರ್ಪೊರೇಷನ್, ಹೋರ್ಪೊರೇಷನ್ ಎಂದು ಪರ್ಯಾಯಗಳ ಮಾಲೆಯನ್ನೇ ಸೃಷ್ಟಿಸುತ್ತಾರೆ. ಶೋರ್ – ಗೊಂದಲ. ಗೊರ್ – ಗೊರಕೆ, ಹೋರ್ – ಹೋರಾಟ. ಈ ಅರ್ಥಗಳನ್ನು ಗಮನಿಸಿದಾಗ ಕಾರ್ಪೊರೇಷನ್‌ನ ಈ ಸಮಾನಾರ್ಥಗಳ ಅರ್ಥವಿಶೇಷ ತನಗೆ ತಾನೇ ಸ್ಪಷ್ಟವಾಗುತ್ತದೆ!

ರೋಗಿಗಳು ಯಾಕೆ ಸತ್ತರು? ಎಂಬ ಹರಟೆಯಲ್ಲಿ ಅಸಂಗತ ತಂತ್ರದ ಬಳಕೆಯಿದೆ. ಚುಂಬನದ ರಾದ್ಧಾಂತ ಎಂಬ ಬರೆಹವನ್ನು ಓದುತ್ತಾ ನಗದೆ ಇರುವುದು ಸಾಧ್ಯವೇ ಇಲ್ಲ. 'ಇಂಗ್ಲೆಂಡಿನ ಒಬ್ಬಳು ಹುಡುಗಿ ಮೊನ್ನೆ ತನ್ನ ಸುಂದರನನ್ನು ಚುಂಬಿಸಿದ ಮರುಕ್ಷಣದಲ್ಲಿ ಆಸ್ಪತ್ರೆಗೆ ಹೋಗಬೇಕಾಯಿತು. ಪ್ರೇಮಾವೇಶದ ಭರದಲ್ಲಿ, ಅವಳು ಅಡ್ಡ ತಿಡ್ಡ ತಿರುಗಿಸಿ ಮುಖ ಒತ್ತಿದ ಪರಿಣಾಮವಾಗಿ ಅವಳ ದವಡೆಯ ಎಲುಬು ಸ್ಥಾನಭ್ರಷ್ಟವಾಯಿತಂತೆ! ನೆಹರು, ಇಂದಿರಾ, ವಾಜಪೇಯಿ, ರಾಜಾಜಿ – ಎಲ್ಲರೂ ಇಲ್ಲಿ ತಮಾಷೆಗೆ ಒಳಗಾದವರೇ! ರಾಜಕಾರಣಿಗಳ ತಾತ್ವಿಕ ನಿಲುವುಗಳು ಹಾಗಿರಲಿ. ಅವರ ಮಾನವ ಸಹಜ ದೌರ್ಬಲ್ಯಗಳತ್ತ ಬೆರಳು ತೋರಿ, ನೀವೂ 'ಕೇವಲ ಮನುಷ್ಯರೇ' ಎಂದು ತೋರಿಸುವುದರಲ್ಲಿ ಪಾ.ವೆಂ ಅವರಿಗೆ ವಿಶೇಷ ಆಸಕ್ತಿ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಇದು ಎಷ್ಟು ಅಗತ್ಯ ಎಂಬುದನ್ನು ವಿವರಿಸಬೇಕಾದ ಅಗತ್ಯವಿಲ್ಲ. ರಾಜನಾದವನು ದೇವರ ಅವತಾರ ಎಂದಾದಾಗ ಆರಾಧನೆ ಮಾತ್ರ ಸಾಧ್ಯ. ಪ್ರಜಾಪ್ರಭುತ್ವ ಬಯಸುವುದು ಆರಾಧನೆಯನ್ನಲ್ಲ – ಸಮಾನತೆಯನ್ನು. ಎಲ್ಲಿ ಟೀಕೆ, ಹಾಸ್ಯ ಕಾಣುವುದೋ ಅಲ್ಲಿ ಸಮಾನತೆಯ ಭಾವ ತನಗೇ ತಾನೇ ಉದ್ಬೋಧವಾಗುವುದು. ಭಾವದ ನೆಲೆಯಲ್ಲಿ ಪ್ರಜಾಪ್ರಭುತ್ವದ ಉಸಿರು – ಹಾಸ್ಯ ಮತ್ತು ಟೀಕೆ ಎಂದು ನಾನು ಭಾವಿಸುತ್ತೇನೆ! ಆದುದರಿಂದಲೇ ಪಾ.ವೆಂ. ಅಂಥವರ ಬರಹಕ್ಕೆ ನಾವು ಅಂದುಕೊಳ್ಳುವುದಕ್ಕಿಂತ ಹೆಚ್ಚಿನ ಮೌಲ್ಯವುಂಟು. ಅನುಸಂಧಾನವುಂಟು. ಆದುದರಿಂದಲೇ ಪಾ.ವೆಂ. ಆಚಾರ್ಯರ ಆಯ್ದ ಹರಟೆಗಳನ್ನು ಸಂಪಾದಿಸಿ ಕೊಟ್ಟಿರುವ ಸಂಪಾದಕದ್ವಯರಿಗೂ, ಪ್ರಕಾಶಿಸಿದ ಪ್ರಕಾಶಕ ಸಂಸ್ಥೆಗೂ ನಾವು ಅಭಿನಂದನೆಗಳನ್ನು ಸಲ್ಲಿಸಬೇಕು. ಪಾ.ವೆಂ. ಅವರ ಎಲ್ಲ ಬರಹಗಳೂ ಬೇಗ ನಮ್ಮ ಕೈ ಸೇರಲಿ ಎಂದು ಹಾರೈಸಬೇಕು!

**ಕರಾವಳಿ ಕರ್ನಾಟಕ:** ಹೊನ... (31–21), ಕಾರವಾರ (32–... ಶಿರಾಲಿ (33–24), ಮಂಗ... ವಿಮಾನ ನಿಲ್ದಾಣ (33–23), ...ಬೂರು (32–23).

**ಉತ್ತರ ಒಳನಾಡು:** ಬೆಳಗಾವಿ ವಿ... ನಿಲ್ದಾಣ (36–15), ಬೆ... (35–16), ಬೀದರ್ (37–21), ...ಪುರ (39–18), ಬಾಗಲಕ... (35–16), ಗದಗ (36–17), ಗು... (39–14), ರಾಯಚೂರು (38–2...

**ದಕ್ಷಿಣ ಒಳನಾಡು**

ಆಗುಂಬೆ (30–17), ಬೆಂಗ... ವಿಮಾನ ನಿಲ್ದಾಣ (34–19), ಬೆಂಗ... (35–21), ಚಿಕ್ಕಮಗಳೂರು (33–... ಚಿತ್ರದುರ್ಗ (35–21), ... (32–19), ಕೆಜಿಎಫ್ (33–... ಮಂಡ್ಯ (35–21), ಮೈ... (34–20), ಶಿವಮೊಗ್ಗ (35–17).

**ಪ್ರಮುಖ ವಿಮಾನ ನಿಲ್ದಾಣಗಳು:** ಕೊಲ್ಕೋತ್ತ (35–25), ... (37–23), ಹೈದರಾಬಾದ್ (38–... ನವದೆಹಲಿ (26–13), ಪುಣೆ (35–... ತಿರುವನಂತಪುರ (34–25).

... ಗೂಳಿಸುವ ಯೋಜನೆ ಜಾರಿ, ಬೆಂಗಳೂರಿನ ಪಶು ಆರೋಗ್ಯ ... ಮಾಧ್ಯಮಿಕ ಶಾಲೆಯ ಹೆಣ್ಣು ಮಕ್ಕಳಿಗೆ ಪ್ರೋತ್ಸಾಹಕ ... •ಇಂತಿಹ ಕ್ರಾಸ್ ಸಬ್ಸಿಡಿ...

# ಕನ್ನಡದ ಹರಟೆಗಳ ಆಚಾರ್ಯರು- ಪಾ.ವೆಂ.

ಮುಗುಳು

ಭುವನೇಶ್ವರಿ ಹೆಗಡೆ
hegdebhuvaneshwari@gmail.com
feedback@vijayavani.in

**'ಹೌದು'**, 'ಅಲ್ಲ' ಎಂದು ಮಾತ್ರ ಉತ್ತರಿಸಬಹುದಾದ ಒಂದು ಪ್ರಶ್ನೆಯನ್ನು ನಿಮಗೆ ಕೇಳುತ್ತಾರೆ. ನೀವು ಎರಡನ್ನೂ ಹೇಳಲಾರಿರಿ. ಆ ಪ್ರಶ್ನೆಯನ್ನು ಉತ್ತರಿಸುವುದೇ ಕಷ್ಟ. 'ಹೌದು' ಎಂದರೂ ಕಷ್ಟ, 'ಅಲ್ಲ' ಎಂದರೂ ಕಷ್ಟ. ಯಾವುದು ಆ ಪ್ರಶ್ನೆ?-'ನೀವು ಹೆಂಡತಿಗೆ ಹೊಡೆಯುವುದನ್ನು ನಿಲ್ಲಿಸಿದ್ದೀರಾ?'.

ಹೌದು ಎಂದಿರಾ, ಮೊದಲು ಹೊಡೆಯುತ್ತಿದ್ದೀರಿ ಈಗ ನಿಲ್ಲಿಸಿದ್ದೀರಿ ಎಂದಾಗುತ್ತದೆ. ಇಲ್ಲ ಎಂದಿರಾ, ಈಗಲೂ ಹೊಡೆಯುತ್ತಿದ್ದೀರಿ ಎಂದೇ ಅರ್ಥ. ಸಿಕ್ಕಿಬೀಳಿಸುವ ಪರಿ ನಗು ತರಿಸುವುದಿಲ್ಲವೇ? ಉದ್ದಕ್ಕೂ ಇಂಥ ಕಚಗುಳಿಗಳನ್ನು ಇಡುತ್ತಲೇ ಬುದ್ಧಿವಂತ ಮಿದುಳೊಂದು ತನ್ನ ಪಾಂಡಿತ್ಯ, ಅಧ್ಯಯನಗಳ ಅಗಾಧ ಸಾರಕ್ಕೆ ವಿನೋದದ ರುಚಿ ಸೇರಿಸಿ ಕನ್ನಡಿಗರಿಗೆ ಹರಟೆಗಳ ಹೆಸರಿನಲ್ಲಿ ನೀಡಿ, ಓದುಗರ ಬುದ್ಧಿ ಭಾವಗಳೆರಡಕ್ಕೂ ಚಾಲನೆ ನೀಡಿದ ಹೆಸರು ಪಾಡಿಗಾರು ವೆಂಕಟರಮಣ (ಪಾ.ವೆಂ.) ಆಚಾರ್ ಅಥವಾ ಪಾ.ವೆಂ. ತಾವೇ ಇಟ್ಟುಕೊಂಡ ಹೆಸರು ಲಾಂಗೂಲಾಚಾರ್ಯ.



ಕನ್ನಡ ವಿನೋದ ಸಾಹಿತ್ಯವಾಹಿನಿಗೆ ಹರಟೆಗಳೆಂಬ ಪ್ರಮುಖವಾದ ಒಂದು ಪ್ರಕಾರವನ್ನೇ ಧಾರೆ ಎರೆದು, ಕನ್ನಡ ವಿನೋದ ಸಾಹಿತ್ಯದ ಶ್ರೀಮಂತಿಕೆಯನ್ನು ಹೆಚ್ಚಿಸಿದ ಲಾಂಗೂಲಾಚಾರ್ಯ ಶೈಲಿ ಇವತ್ತಿಗೂ ಅನನ್ಯ, ಅನುಕರಣೀಯ ಮಾದರಿಯಾಗಿ ನಮ್ಮೆದುರಿಗಿದೆ. 'ಲಾಂಗೂಲಾಚಾರ್ಯ' ಎಂಬ ತಮ್ಮ ಅಂಕಿತನಾಮದ ಕುರಿತು ವಿಶ್ಲೇಷಿಸುತ್ತ, ತಾವು ಈ ಬಿರುದನ್ನೇ ಆರಿಸಿಕೊಳ್ಳಲು ಕಾರಣ 'ಲಾಂಗೂಲವಂತ ಜಾತಿಗಳ ಬಗೆಗೆ ತಮಗಿರುವ ಆದರವೊಂದು ಮತ್ತು ಅವುಗಳೊಡನೆ ಮನುಷ್ಯಜಾತಿ ಪುನಃ ಸಮಾವೇಶ ಹೊಂದಿದರೇನೇ ಅವರ ಉದ್ಧಾರವೆಂಬ ಅಚಲ ವಿಶ್ವಾಸವೊಂದು' ಎನ್ನುತ್ತಾರೆ.

ಲಾಂಗೂಲಾಚಾರ್ಯರ ಪ್ರಕಾರ- ಲಾಂಗೂಲವಂತ ಬಾಂಧವ್ಯದಲ್ಲಿ ಅತ್ಯಂತ ಆದರಣೀಯರೆಂದರೆ ಒಂದು ಗಾರ್ದಭ ಜಾತಿ, ಇನ್ನೊಂದು ವಾನರ ಜಾತಿ. ಗಾರ್ದಭನು ಮೃಗಜಾತಿಯಲ್ಲೇ ಶ್ರೇಷ್ಠ ತತ್ತ್ವಜ್ಞಾನಿ ಮತ್ತು ಋಷಿ. ಅವನ ರೋಮರೋಮದಲ್ಲಿ ಅನಾಸಕ್ತಿಯೋಗ. ಗಾರ್ದಭನು ಕರ್ಮವನ್ನು ತುಚ್ಛೀಕರಿಸುವುದಿಲ್ಲವಾದರೂ ಅವನು ಮುಖ್ಯವಾಗಿ ಜ್ಞಾನಯೋಗಿ. ಆದರೆ ವಾನರನನ್ನು ಕರ್ಮಯೋಗಿ ಎಂದು ವರ್ಗೀಕರಿಸಬಹುದು. ಅವನು ಕ್ಷಣಕಾಲವೂ ಸುಮ್ಮನೆ ಕುಳಿತಿರಲಾರ. ಸದಾ ಕರ್ಮನಿರತ. ಅವನ ಕುತೂಹಲ ವಿಜ್ಞಾನಿಗಳಂತೆ. ಅವನ ಬುದ್ಧಿ ಪೃಥಕ್ಕರಣಾತ್ಮಕವಾದದ್ದು. ಅವನ ಕೈಯಲ್ಲಿ ಒಂದು ಕನ್ನಡಿ ಹಾಕಿರಿ. ಅದರ ಫ್ರೇಮು ಕಿತ್ತು ಕನ್ನಡಿ ಬೇರ್ಪಡಿಸಿ ಅದರ ಬೆನ್ನಿಗೆ ಹಚ್ಚಿದ ಪಾದರಸಲೇಪವೇ ಅದರ ಪ್ರತಿಬಿಂಬನ ಶಕ್ತಿಯ ಆಧಾರವೆಂದು ಕ್ಷಣಾರ್ಧದಲ್ಲಿ ಕಂಡುಹಿಡಿಯುತ್ತಾನೆ (ಲೋಕದ ಡೊಂಕು, ಪುಟ 206).

ಲಾಂಗೂಲಹೀನ ನರರ ನಡವಳಿಕೆಗಳಲ್ಲಿನ ಬೂಟಾಟಿಕೆಗಳನ್ನೂ, ಹದಗೆಟ್ಟ ಸ್ಥಿತಿಗಳನ್ನೂ ತಮ್ಮದೇ ಆದ ರೀತಿಯಲ್ಲಿ ವಿಡಂಬಿಸುತ್ತ ಸಾಗುತ್ತಾರೆ. ನಮ್ಮ ದೇಶದ ರಾಜಕೀಯ, ಮಂತ್ರಿ-ಮಾನ್ಯರುಗಳ ನಡವಳಿಕೆ ವ್ಯವಹಾರ, ಸಾಮೂಹಿಕ ಸೋಮಾರಿತನ, ಪರಕೀಯರ ಅನುಕರಣೆ, ಮೂಢನಂಬಿಕೆಗಳು, ಮನುಷ್ಯ ಸಂಬಂಧಗಳು, ಹಣದಾಸೆ ಇವೇ ಮೊದಲಾದ ವಿಷಯಗಳನ್ನೆತ್ತಿಕೊಂಡು ಮುಲಾಜಿಲ್ಲದ, ನಿರ್ಭಿಡೆಯ ನಗೆಲೇಖನಗಳನ್ನು ರಚಿಸಿದ್ದಾರೆ. ಅವರ ಹರಟೆಗಳ ವಸ್ತುವೈವಿಧ್ಯವೂ ವಿಸ್ಮಯಕಾರಿಯಾದುದು.

'ಪರೋಪಕಾರ ಮಾಡುವುದು, ದೇಶಕ್ಕೋಸ್ಕರ ಜೀವ ತೇಯುವುದು ಇವೆಲ್ಲ ಹಳೆಯ ಭಾವನೆಗಳು. ಈ ಕಾಲದಲ್ಲಿ ನಮಗೆ ಪರೋಪಕಾರಕ್ಕೆ ಪುರುಸೊತ್ತಿಲ್ಲ. ಎಲ್ಲವನ್ನೂ ಎಲ್ಲರನ್ನೂ ಉದ್ಧಾರ ಮಾಡುವುದಕ್ಕಾಗಿ ಟೊಂಕಕಟ್ಟಿ ಎದೆತಟ್ಟಿ ನಿಂತಿರುವ ಸರ್ಕಾರಗಳಿರುವಾಗ, ನಾವು ವ್ಯಕ್ತಿಗಳಾಗಿ ಪರೋಪಕಾರ ಮಾಡುವ ಮಬ್ಬಿಗೆ ಬೀಳುವುದರಲ್ಲಿ ಅರ್ಥವಿಲ್ಲ' (ವಿಪರೀತ, ಪುಟ 29).

'ಸತ್ಯವನ್ನೂ ರಾಜಕಾರಣವನ್ನೂ ಬೆರೆಸಿ ಕಿಚಡಿ ಮಾಡಲು ನಾನೇನೂ ಗಾಂಧಿಯಲ್ಲ ತಿಳಿಯಿತೆ?' (ಲೋಕದ ಡೊಂಕು, ಪುಟ 101).

'ಸಂಭಾವಿತ ಮಂತ್ರಿಯೆಂಬುದು ಯುಟೋಪಿಯನ್ ಕಲ್ಪನೆ' (ಲೋಕದ ಡೊಂಕು, ಪುಟ 102).

ನೀವು ಇಷ್ಟೇಕೆ ಭಾಷಣ ಮಾಡುತ್ತೀರಿ ಅಂತ ಮಂತ್ರಿಯೋರ್ವರನ್ನು ಒಬ್ಬರು ಕೇಳಿದಾಗ ಅವರು, 'ಏನಾದರೂ ಮಾಡುವುದನ್ನು ತಪ್ಪಿಸಿಕೊಳ್ಳುವುದಕ್ಕಾಗಿ' ಎಂದುತ್ತರಿಸುವ ಮಂತ್ರಿಯೋರ್ವನ ದಿನಚರಿಯ ಕೆಲ ವಾಕ್ಯಗಳಿವು-

'ಇಂದಿನ ಕಾಲದಲ್ಲಿ ಸರ್ವಜ್ಞತ್ವ ಪದವಿಯನ್ನು ಪಡೆಯಲು ಎಲ್ಲಕ್ಕಿಂತ ಶ್ರೇಷ್ಠಸಾಧನ ಎಂದರೆ ಮಂತ್ರಿಪದಕ್ಕೇರುವುದು. ಮಂತ್ರಿಯಾದ ನಿರಕ್ಷರಿಯನ್ನು ವಿಜ್ಞಾನಿಗಳು ತಮ್ಮ ಪರಿಷತ್ತುಗಳನ್ನು ಉದ್ಘಾಟಿಸಲು ಕರೆಯುತ್ತಾರೆ ಮತ್ತು ಪರಮಾಣವನ್ನು ಜನಹಿತಕ್ಕೆ ಹೇಗೆ ಬಳಸಬೇಕೆಂಬ ಬಗ್ಗೆ ಅವನಿಂದ ಉಪದೇಶಾಮೃತ ಸ್ವೀಕರಿಸುತ್ತಾರೆ. ಸಂಸ್ಕೃತ ಪಂಡಿತರು ಅವನನ್ನು ಬರಮಾಡಿಕೊಂಡು ಸಂಸ್ಕೃತದ ಹಿರಿಮೆಯ ಬಗ್ಗೆ ಹೇಳಿಸಿಕೊಳ್ಳುತ್ತಾರೆ.... ಕವಿಗಳು ನಮ್ಮನ್ನು ಸ್ವಾಗತಿಸಿ ಕವಿತ್ವದ ವಿಷಯದಲ್ಲಿ ಸಲಹೆಗಳನ್ನು ಆಲಿಸುತ್ತಾರೆ. ಕಳ್ಳರು ಸಮ್ಮೇಳನಗಳನ್ನು ಮಾಡಿ ನಮ್ಮನ್ನು ಆಮಂತ್ರಿಸಿದ್ದರೆ ಅವರಿಗೂ ನಾವು ಒಂದೆರಡು ಉಪಯುಕ್ತ ಸಲಹೆಗಳನ್ನು ಕೊಡಬಹುದಿತ್ತು.....' ಹೀಗೆ ಸಾಗುತ್ತದೆ ರಾಜಕಾರಣಿಗಳ ಮೇಲಿನ 'ಪ್ರಹಾರ'.

ವಿನೋದ ಬರವಣಿಗೆಯ ಮೂಲಜೀವಾಳ ಬುದ್ಧಿವಂತಿಕೆ. ಭಾವನೆಗಳ ಮಹಾಪೂರದಲ್ಲಿ ಮುಳುಗಿದವ ಹಾಸ್ಯಲೇಖನಗಳನ್ನು ಬರೆಯಲಾರ. ಭಾವುಕತೆಯ ಗಡಿಯಾಚೆ ಬುದ್ಧಿಯ ಬೆಳಕಿನಲ್ಲಿ ಲೋಕವಿವರಗಳನ್ನು ವಿಶ್ಲೇಷಿಸಿ ನಗಬಲ್ಲ ವ್ಯಕ್ತಿ ನಿರ್ವಿಕಾರನಾಗಿ ಬದುಕನ್ನೂ ನೋಡಬಲ್ಲ.

ಲಾಂಗೂಲಾಚಾರ್ಯರ ಹರಟೆಗಳ ಇನ್ನೊಂದು ವೈಶಿಷ್ಟ್ಯ ಎಂದರೆ, ಅವರ ಬರಹಗಳಲ್ಲಿ ಹಾಸ್ಯ ಎಲ್ಲೂ ವಾಚ್ಯವಾಗಿ ಗೋಚರಿಸುವುದಿಲ್ಲ. ಅವರ ಲೇಖನ ಪ್ರತಿಪಾದಿತವಾದ ಒಟ್ಟು ಧೋರಣೆಯಲ್ಲೇ ಹಾಸ್ಯ ಅಂತರ್ಗತವಾಗಿರುತ್ತದೆಯೇ ಹೊರತು ಓದುಗರನ್ನು ನಗಿಸುವುದಕ್ಕಾಗಿ ಯಾವುದೋ ರೀತಿಯ ಕಸರತ್ತನ್ನು ಮಾಡುವ ಅಗತ್ಯ ಅವರಿಗಿಲ್ಲ. ತನ್ನಲ್ಲಿನ ಅಪಾರ ಧ್ವನಿಶಕ್ತಿಯಿಂದಾಗಿ ಲಾಂಗೂಲಾಚಾರ್ಯರ ಬರಹಗಳು ನಮ್ಮ ಸಾಮಾನ್ಯ ನಿರೀಕ್ಷೆಯ ನಗೆಬರಹಗಳಿಗಿಂತ ಭಿನ್ನವಾಗಿರುತ್ತವೆ. ಉದಾಹರಣೆಗೆ, 'ವಿಪರೀತ ಧ್ಯಾನಯೋಗಿಯೊಡನೆ ಒಂದು ಸಂಜೆ' ಎಂಬ ಲೇಖನದಲ್ಲಿನ ಕ್ಷುದ್ರರ್ಷಿಗಳು. ನಮ್ಮ ಸಾಮಾನ್ಯ ನಿರೀಕ್ಷೆಯ ನಗೆಬರಹಗಳಲ್ಲಿನ ಸ್ವಾಮಿಗಳು ವಿಷಯಾಸಕ್ತರು, ಭೋಗಿಗಳು ಎಂಬಂತೆ ವರ್ಣಿತರಾಗಿರುತ್ತಾರೆ. ಆದರೆ ಈ ಕ್ಷುದ್ರರ್ಷಿಗಳು ಮನಶ್ಶಾಸ್ತ್ರಜ್ಞರಂತೆ ಮಾತಾಡುತ್ತಾರೆ. ಕಾಲದ ಅಗತ್ಯಕ್ಕೆ ತಕ್ಕಂತೆ ಮನುಷ್ಯರ ಮಾನಸಿಕ ದೌರ್ಬಲ್ಯಗಳನ್ನು ಬಳಸಿಕೊಳ್ಳುವ ಚಾಣಾಕ್ಷರು ಆ ಕ್ಷುದ್ರರ್ಷಿಗಳು.

ಭಾರತೀಯ ಯೋಗದ ಅಷ್ಟಾಂಗವನ್ನೆಲ್ಲ ಒಂದು ಕಾಲುಗಂಟೆಯ ರಹಸ್ಯ ಮಂತ್ರೋಪದೇಶದಲ್ಲಿ ಅಡಕಮಾಡುವ ಅವರ 'ವಿಪರೀತ ಧ್ಯಾನಯೋಗ'ದಿಂದ ಸಂಪೂರ್ಣ ಮನಶ್ಶಾಂತಿ ದೊರಕುವ ರೀತಿ ಹೇಗೆ ಗೊತ್ತೆ? ಮನುಷ್ಯ ತಪ್ಪುಕೆಲಸ ಮಾಡಿದ ಬಳಿಕ ಅವನ ಆತ್ಮಸಾಕ್ಷಿ ಅವನ ಬದುಕಿನ ಶಾಂತಿಯನ್ನು ಕದಡುತ್ತದೆಯಷ್ಟೆ? ಈ ಆತ್ಮವನ್ನು ಮನಸ್ಸಿಗೆ ಜೋಡಿಸುವ ಒಂದು ನಾಡಿಯಿದೆಯೆಂದು ಕ್ಷುದ್ರರ್ಷಿಗಳು ಕಂಡುಹಿಡಿದು ಅದಕ್ಕೆ ವಿಷಮ್ನಾನಾಡಿಯೆಂದು ಹೆಸರಿಟ್ಟಿದ್ದಾರೆ. ಆ ನಾಡಿಯನ್ನು ಅವರ ವಿಪರೀತ ಧ್ಯಾನಯೋಗ ಕತ್ತರಿಸಿಹಾಕುತ್ತದೆ. ಆಗ ಆತ್ಮಸಾಕ್ಷಿ ನಿಮ್ಮ ಮನಸ್ಸನ್ನು ಗುಂಡುಸೂಜಿಯಿಂದ ಚುಚ್ಚುವುದು ನಿಂತುಹೋಗುತ್ತದೆ.

ಲಾಂಗೂಲಾಚಾರ್ಯರ ಹರಟೆಗಳಲ್ಲಿ ವಿಶಿಷ್ಟವಾದ ಇನ್ನೊಂದು ಅಂಶ ಅವರು ಕೊಡುವ ಹೋಲಿಕೆಗಳಲ್ಲಿರುವ ಸ್ವಾರಸ್ಯ. ಉದಾಹರಣೆಗೆ ಅವರು ನೇಟಿವ್ ವೈದ್ಯರು ಮತ್ತು ಅಲೋಪತಿಗಳ ನಡುವಿನ ವ್ಯತ್ಯಾಸವನ್ನು ವಿವರಿಸುವ ಬಗೆ-ನೇಟಿವ್ ವೈದ್ಯರು ಎಂದು ತಿರಸ್ಕಾರಪೂರಿತ ಅಭಿಮಾನದಿಂದ ಕರೆಯಲ್ಪಡುವ ದೇಸೀ ಚಿಕಿತ್ಸಕರಿಗಿಂತ ಅಲೋಪತಿ ಡಾಕ್ಟರು ಹೆಚ್ಚು ಜನಪ್ರಿಯರಾಗಲು ಅವರು ರೋಗಿಯ ಚಟಗಳ ಬಗ್ಗೆ ಉದಾರಬುದ್ಧಿ ತೋರುವುದೇ ಮುಖ್ಯಕಾರಣ.

ನೇಟಿವ್ ವೈದ್ಯರು ಹಿಂದೂ ದೇವರಂತೆ ತುಂಬಾ ಬಿಗಿ. ಉಪ್ಪನ್ನು ಕಿರುಬೆರಳಲ್ಲಿ ಮುಟ್ಟಬಾರದ ಪಥ್ಯ, ಮೆಣಸಿನಕಾಯನ್ನು ಕಣ್ಣಲ್ಲಿ ನೋಡಬಾರದ ಪಥ್ಯ, ನಿಮ್ಮ ಪ್ರೀತಿಯ ಚಹಾವನ್ನೋ ಕಾಫಿಯನ್ನೋ ಒಯ್ದ ದಾರಿಯಲ್ಲಿ ಕೂಡ ನಲವತ್ತೆಂಟು ತಾಸು ಕಾಲ ನಡೆಯಕೂಡದೆಂಬ ಪಥ್ಯ... ಹೀಗೆ ನೇಟಿವ್ ವೈದ್ಯರ ಚಿಕಿತ್ಸೆಯಲ್ಲಿ ನೀವು ಕಟ್ಟಿಕೊಂಡ ರೋಗದ ಋಣವನ್ನೂ ಪಥ್ಯ ಮಾಡಿಯೇ ತೀರಿಸಬೇಕಾಗುವುದು.

ಅದೇ ಅಲೋಪತಿ ವೈದ್ಯರ ಮೊರೆಹೊಕ್ಕಿರಿ. ಅಲೋಪಥಿಕನಾದರೋ ಅವನ ಫೀಯೊಂದನ್ನು ನೀವು ಸಲೀಸಾಗಿ ಸಲ್ಲಿಸುತ್ತಿದ್ದರೆ ನಿಮ್ಮಿಂದ ಪಥ್ಯರೂಪದ ಪ್ರಾಯಶ್ಚಿತ್ತವನ್ನು ಅಪೇಕ್ಷಿಸುವುದಿಲ್ಲ. ನಿಮಗೆ ಕಾಫಿ ಪ್ರಿಯವಾಗಿದ್ದರೆ ಅದೇ ನಿಮಗೆ ಪಥ್ಯವೆಂದು ಅವನು ಮಂಜೂರುಮಾಡುತ್ತಾನೆ. ಅಭ್ಯಾಸ ಬಿದ್ದಿದ್ದನ್ನು ಒಂದೇ ಹೊಡೆತಕ್ಕೆ ಪರಿತ್ಯಾಗ ಮಾಡುವುದು ಒಳ್ಳೇದಲ್ಲವೆಂದು ಕೂಡ ನಿಮಗೆ ಮನೋಹರವಾದ ಹಿತವಚನವನ್ನೇ ಹೇಳುತ್ತಾನೆ. ಅವನು ನಿಮಗೆ ನಿದ್ದೆ ಬಾರದಿದ್ದರೆ ನಿದ್ರೆಯ ಗುಳಿಗೆಗಳನ್ನು ಕೊಡುತ್ತಾನೆ (ಲೋಕದ ಡೊಂಕು: ಸಿಗರೇಟಿನ ಹೊಗೆ).

ಇದು ಲಾಂಗೂಲ ಲಹರಿಯ ಒಂದು ಮಾದರಿ. ಲೋಕದ ಡೊಂಕನ್ನು ವಿಡಂಬಿಸುವ ಇವರ ಲೇಖನಿಗೆ ತನ್ನನ್ನೇ ತಾನು ನೋಡಿ ನಗುವ ಉದಾತ್ತ ವಿನೋದದ ಶೈಲಿಯೂ ಪ್ರಿಯವಾದುದು. ಇದನ್ನು ನನ್ನ 'ಅಸ್ತಮಾ ಷಷ್ಟ್ಯಬ್ದಿ', 'ನಾನು ಯಾರು?', 'ಸತ್ಯ, ನಾನು ಮತ್ತು ಹರಿಶ್ಚಂದ್ರ' ಮೊದಲಾದ ಲೇಖನಗಳಲ್ಲಿ ಕಾಣಬಹುದು. ಪವಾಡಗಳನ್ನು ದೆವ್ವಗಳನ್ನು ಅವುಗಳ ಕುರಿತಾದ ಮೌಢ್ಯದ ಕತೆಗಳನ್ನು ಸೊಗಸಾಗಿ ವಿಡಂಬಿಸುವ ಲಾಂಗೂಲಾಚಾರ್ಯ ದೇವದೇವತಾ ಸ್ವಭಾವಗಳನ್ನು ಉಪದ್ವ್ಯಾಪಗಳನ್ನೂ ಬಿಟ್ಟಿಲ್ಲ. ದೇವತೆಗಳು ನಮ್ಮ ನಿಮ್ಮ ಹಾಗೆಯೇ ಪ್ರೀತಿ-ವಿಶ್ವಾಸ, ಕೋಪ-ತಾಪ, ಮರೆ-ಮೋಸ, ಚಟ-ಅಭ್ಯಾಸ ಎಲ್ಲದರಲ್ಲಿ ನಮಗಿಂತ ತುಂಬ ಹಿಗ್ಗಿಸಿದ ಆವೃತ್ತಿಗಳು ಎನ್ನುತ್ತಾರೆ. ಇಂದ್ರನ ಚಟಗಳನ್ನು ನಮ್ಮ ರಾಜಕೀಯ ಮುಖಂಡರ ಚಟಗಳೊಂದಿಗೆ ಸಮೀಕರಿಸುತ್ತಾರೆ. ಗಣಪತಿ ಬುದ್ಧಿವಂತನಾದ್ದರಿಂದಲೇ ಅವನು ಮದುವೆ ಮಾಡಿಕೊಳ್ಳಲಿಲ್ಲ. ಆದರೆ ಅವನಿಗೆ ತಿಂಡಿಯ ಚಟ. ಇನ್ನು ಸೂಪರ್ ದೇವತೆಗಳಾದ ವಿಷ್ಣು, ಶಿವ ಮೊದಲಾದವರಿಗೆ ಭಕ್ತಿಯ ಚಟ. ಭಕ್ತಿ ಎಂದರೆ ನಿಮ್ಮ ಎಲ್ಲವನ್ನೂ ಅರ್ಪಿಸಬೇಕು, ಎರಡನೇ ವಿಚಾರವೇ ಇರಬಾರದು. ಇವರಿಗೆ ಪೂಜೆ ಮಾಡುವಾಗ ಆ ಕಡೆ ಬೆಕ್ಕು ಹಾಲು ಕುಡಿಯುತ್ತಾ ಇದೆ ಅಂತ ಆಲೋಚನೆ ಬಂತೋ, ಮುಗಿದುಹೋಯಿತು... ನಿಮ್ಮ ಭಕ್ತಿ ವ್ಯರ್ಥ, ಫಲಶೂನ್ಯ..... ಎನ್ನುವ ಲಾಂಗೂಲಾಚಾರ್ಯರು ದೇವತೆಗಳ ಕೌಟುಂಬಿಕ ಕಲಹಗಳು, ದೇವತೆಗಳ ಪ್ರತಿಷ್ಠೆಗಾಗಿ ನಡೆಯುವ ಕಿತಾಪತಿಗಳು ಒಂದನ್ನೂ ಬಿಟ್ಟಿಲ್ಲ. ಅಂತೆಯೇ 'ಮದುವೆಯಾದರೂ ಸುಖಪಡುವುದು ಹೇಗೆ?', 'ಮಾದರಿ ಮಡದಿ ಬೇಕೆ?', 'ನೀವು ಹೆಂಡತಿಗೆ ಹೊಡೆಯುವುದನ್ನು ಬಿಟ್ಟಿದ್ದೀರಾ?' ಎಂಬ ಆಕರ್ಷಕ ತಲೆಬರೆಹದ ಹರಟೆಗಳು ನಮ್ಮ ಸಪ್ಪೆ ಸಾಂಸಾರಿಕ ಜೀವನಕ್ಕೆ ಲವಲವಿಕೆಯ ಸ್ಪರ್ಶ ನೀಡಬಲ್ಲವು.

ಪಾ.ವೆಂ.ರ ಕನ್ನಡದ ಹರಟೆಗಳನ್ನು ಓದಿಯೇ ಸವಿಯಬೇಕು.

(ಲೇಖಕರು ಅರ್ಥಶಾಸ್ತ್ರ ಉಪನ್ಯಾಸಕರು, ಖ್ಯಾತ ಹಾಸ್ಯ ಸಾಹಿತಿ)

ಬಿಟ್ಟರು. ಇಳಿಹೊತ್ತಿನಲ್ಲಿ ನನ್ನ ದೊಡ್ಡಪ್ಪನ ಮಗ ಅಕಸ್ಮಾತ್ತಾಗಿ ನಮ್ಮಲ್ಲಿಗೆ ಬಂದವರು ನನ್ನ ಅವಸ್ಥೆ ನೋಡಿ. ಆಫೀಸಿಗೆ ಹೋಗಿ ಇವರನ್ನು ಚೆನ್ನಾಗಿ ತರಾಟೆಗೆ ತೆಗೆದುಕೊಂಡ ಮೇಲೆಯೆ. ಇವರು ಮನೆಗೆ ಬಂದದ್ದು. ಆಮೇಲೆ ನನ್ನ ಅರೈಕೆ ಸರಿಯಾಗಿ ನೋಡಿಕೊಂಡರು ಅನ್ನುವುದು ಬೇರೆ.

ನನಗೆ ಅಂತಲ್ಲ. ಇವರ ತಾಯಿ ಅಂತ್ಯಾವಸ್ಥೆಯಲ್ಲಿದ್ದಾಗ ಮಾತು. ಅವರಿಗೆ ಲಿವರ್ ಕ್ಯಾನ್ಸರ್ ಆಗಿತ್ತು. ರಾತ್ರಿಯೆಲ್ಲ ನೋವಿಂದ ಕೂಗುವ ಅವರ ಅರೈಕೆ ನೋಡಿ. ಬೆಳಿಗ್ಗೆ ಆಫೀಸಿಗೆ ಹೋಗುವರು. ಆಗ 'ಕರ್ಮವೀರ' ದೀಪಾವಳಿ ಸಂಚಿಕೆಯ ಗಡಿಬಿಡಿ ಇವರಿಗೆ. ದೀಪಾವಳಿಗೆ ಆರು ದಿನ ಮುಂಚೆ ಇವರು. "ಅಮ್ಮಾ. ಈವೊತ್ತು ಸಂಜೆಗೆ ಕೆಲಸ ಮುಗಿಯುತ್ತೆ. ಆಮೇಲೆ ಒಂದು ತಿಂಗಳು ರಜಾ ಹಾಕಿ ನಿಮಗೆ ಭಾಗವತ ಪುರಾಣ ಹೇಳುತ್ತೇನೆ" ಎಂದು ಹೇಳಿ ಹೋದರು. ನಾಲ್ಕು ಗಂಟೆಗೆ ಮನೆಗೆ ಬಂದರು. ತಾಯಿ ಕಣ್ಣಲ್ಲಿ ಪ್ರಾಣ ಹಿಡಿದುಕೊಂಡಿದ್ದರು. ಕೈಸನ್ನೆಯಿಂದ ಬಾಯಿ

ತೋರಿಸಿದರು. ಇವರು ಎರಡು ಚಮಚ ಹಾಲು ಹಾಕಿದರು. ಅದು ಒಳಗೆ ಹೋಗುತ್ತಲೇ ಅವರ ಪ್ರಾಣ ಹೋಯಿತು. ಭಾಗವತ ಅಲ್ಲೇ ಉಳಿಯಿತು. ಇವರದೇ ರಾಮಾಯಣ ಆಗಿ ಹೋಯಿತು. ತಾಯಿಯನ್ನು ಬೂದಿ ಮಾಡಿ ಬಂದವರಿಗೆ ಭೀಕರ ಆಸ್ತಮಾ ಉಲ್ಬಣವಾಗಿ ಇವರು ಸತ್ತು ಬದುಕಿದರು! ಆಫೀಸಿನ್ನೇನು ಇವರೊಬ್ಬರೇ ಹೊತ್ತಿದ್ದಾರೆಯೇ? ಸುಮ್ಮನೆ ಒದ್ದಾಟ. ಅದೇಂದಲ್ಲ. ಯಾವುದಾದರೂ ಜವಾಬ್ದಾರಿ ಹೊತ್ತರೆ ಅದನ್ನು ಅತಿಯಾಗಿ ಹಚ್ಚಿಕೊಂಡು ಕಷ್ಟಪಡುವುದೊಂದು ಚಟ. ಅಷ್ಟೇ.

ಇವರಿಗೆ ಅಸ್ವಸ್ಥವಾದರೆ ಬಲು ಘೋರ. ಪುಣ್ಯಕ್ಕೆ ಆಸ್ತಮಾ ಹೊರತು ಈಚೆಗಿನವರೆಗೆ ಇವರಿಗೆ ಬೇರೆ ಕಾಯಿಲೆ ಇರಲಿಲ್ಲ. ಆಸ್ತಮಾ ಉಲ್ಬಣಿಸಿದರೆ ರಾತ್ರಿಯೆಲ್ಲ ಗಾವುದ ದೂರ ಕೇಳುವಂತೆ ನರಳಾಟ. ಸಾಯುವ ಮಾತು. ಬೆಳಗಾಯಿತೋ. ಕಾಫಿ ಗುಟಕರಿಸಿ ಆಫೀಸಿಗೆ ಓಡಿದರೇ! "ನಿನ್ನೆ ರಾತ್ರಿ ನರಳೋದು ಕೇಳಿ ಏನಾಯಿತೋ ನೋಡಿ ಬನ್ನಿ ಅಂತ ನಮ್ಮವರನ್ನು ಕಳಿಸಲೇ ಅನಿಸಿತು; ಈಗ ಎದ್ದು ಹೋಗಿಯೇಬಿಟ್ಟರಲ್ಲ!" ಎಂದು ನೆರೆಯವರು ಹೇಳಬೇಕು. ಕಡೆಗೊಂದುಸಲ ನಾನು. ಅಷ್ಟು ನರಳಬೇಡಿ ನೆರೆಮನೆಯವರಿಗೆ ಸುಮ್ಮನೆ ನಿದ್ದೆಗೇಡು" ಎಂದೆ. "ನರಳೋದಿಲ್ಲ ಇನ್ನು" ಎಂದರು. ಇದನ್ನು ನಾನು ಮರೆತಿದ್ದೆ. ಆ ವರ್ಷ ಎಂದಿಗಿಂತ ಭಯಂಕರವಾಗಿ ಉಬ್ಬಸ ಬಂತು. ತಿದಿಯ ಹಾಗೆ ಎದೆ ಭುಸುಗುಟ್ಟುತ್ತಿತ್ತು. ಇವರು ಎಂದಿನಂತೆ ಕೂಗದೆ ತೆಪ್ಪಗೆ ಬಿದ್ದುಕೊಂಡಿದ್ದರು. ಈ ವಿಚಿತ್ರ ನೋಡಿ ನನಗೆ ಅತಿ ಗಾಬರಿಯಾಗಿ ಬವಳಿ ಬಂದು ಬಿದ್ದುಬಿಟ್ಟೆ. ಧಾರವಾಡಕ್ಕೆ ಫೋನ್ ಹೋಗಿ ಅಣ್ಣಂದಿರು ಬಂದರು. ಆ ಮೇಲೆ ಇವರನ್ನು ಕೇಳಿದರೆ. "ನರಳಬಾರದು ಅಂತ ಆವೊತ್ತು ಅಪ್ಪಣೆ ಕೊಟ್ಟಿದ್ದಿಯಲ್ಲ. ಅದಕ್ಕೆ ಸುಮ್ಮನೆ ಬಿದ್ದಿದ್ದೆ!" ಎಂದರು.

1974 ಅಕ್ಟೋಬರ್ 31 ರಂದು ಇವರು ಬೆಳಗ್ಗೆ ಆಫೀಸಿಗೆ ಹೋದವರು ಸಂಜೆ ಹೊತ್ತಿಗೆ ಸರಿಯಾಗಿ ಬರಲಿಲ್ಲ. ನನಗೆ ಏನೋ ಕಳವಳ. 8-30ಕ್ಕೆ ನನ್ನ ಅಣ್ಣಂದಿರು ಧಾರವಾಡದಿಂದ ಬಂದು. ಇವರನ್ನು ಮೆಡಿಕಲ್ ಕಾಲೇಜ್ ಆಸ್ಪತ್ರೆಗೆ ಸೇರಿಸಿದ ಸುದ್ದಿ ಹೇಳಿದರು. ಯಾರೇನೆಂದರೂ ಕೇಳದೆ ನಾನು ಕೂಡಲೆ ಆಸ್ಪತ್ರೆಗೆ ಹೊರಟೆ. ಇವರಿಗೆ ಆಫೀಸಿನಲ್ಲಿ ರಕ್ತವಾಂತಿಯಾಗಿ ಅಲ್ಲಿಂದಲೇ ಆಸ್ಪತ್ರೆಗೆ ಸೇರಿಸಿದ್ದರಂತೆ. ರಕ್ತವಾಂತಿ ನಿಲ್ಲಲಿಲ್ಲ. ಅರ್ಧ ಮೂರ್ಛೆಯಲ್ಲಿದ್ದರು. ಡಾಕ್ಟರರು ಬಹಳ ಹೋರಾಡಿದರು. ರಕ್ತ ಕೊಡುತ್ತಲೇ ಇದ್ದರು. ವಾಂತಿಯಾಗುತ್ತಲೇ ಇತ್ತು. ಇವರು ತಂತಿ ಕೊಡಿಸಿ ಪರವೂರಲ್ಲಿದ್ದ ಮಕ್ಕಳನ್ನು ಕರೆಸಿದರು. ಆಸೆ ಮುಗಿದಂತಾಗಿತ್ತು.

ಆ ಸಮಯದಲ್ಲೇ ನನಗೆ ಹಿಂದೆ ನನ್ನ ಪತಿಯ ವಿಷಯ ತಿಳಿಯದಿದ್ದ ಕೆಲ ವಿಶೇಷಗಳು ಪ್ರತೀತಿಗೆ ಬಂದದ್ದು. ವ್ಯವಹಾರ ಚಾತುರ್ಯ ಇಲ್ಲದ. ಯಾರನ್ನೂ ಹೆಚ್ಚಿಗೆ ಹಚ್ಚಿಕೊಳ್ಳದೆ. ಹೆಚ್ಚು ಜನ ಆತ್ಮೀಯರನ್ನು ಸಂಪಾದಿಸದ. ಮರಗುಳಿ ಸ್ವಭಾವದ. ಬಹಳ ನಿರ್ಲಿಪ್ತವೃತ್ತಿಯ ವ್ಯಕ್ತಿ ಇವರು. ಇಂಥವರನ್ನು ಕಾಣಲು ಆಸ್ಪತ್ರೆಗೆ



ದಿನವೂ ಎಷ್ಟೋ ಜನ ಬರುತ್ತಿದ್ದರು. ನನಗೆ ಎಲ್ಲರೂ ಅಪರಿಚಿತರು. ವಿದ್ಯಾರ್ಥಿಗಳು. ಓದುಗರು. ಲೇಖಕರು. "ಲಾಂಗೂಲಾಚಾರ್ಯ"ರ ಅಭಿಮಾನಿಗಳು ಕೆಲವರು 'ಕಸ್ತೂರಿ' ಪ್ರಿಯರು ಕೆಲವರು.

ಆಸ್ಪತ್ರೆಯಲ್ಲಿ ಇವರು ತಮ್ಮ ವಿಕ್ಷಿಪ್ತ ವೃತ್ತಿಯಿಂದ ಬಹು ಬೇಗನೆ ಹಿರಿ-ಕಿರಿಯ ಡಾಕ್ಟರ್ ಇಂಟರ್ನಿಗಳಿಗೆಲ್ಲ ಪ್ರಿಯರಾಗಿಬಿಟ್ಟಿದ್ದರು. ಬೆಳಗ್ಗೆ ಡಾಕ್ಟರರು ಇವರನ್ನು ನೋಡಲು ಬಂದರೆ ಇವರೇ ಅವರ ಕ್ಷೇಮ ಸಮಾಚಾರ ಕೇಳುತ್ತಿದ್ದರು! ರಕ್ತ ಸೆಲೈನ್ ಕೊಡುವುದಕ್ಕೆ ನಿರಂತರವಾಗಿ ಇವರ ಕೈಕಾಲುಗಳಲ್ಲಿ ಹೊಸ ಹೊಸ ನಾಡಿಗಳನ್ನು ಹುಡುಕಿ ಚುಚ್ಚುವಾಗ ಇನ್ನಾರಿಗೋ ಚುಚ್ಚುತ್ತಾರೆಂಬ ಹಾಗೆ ಆಸಕ್ತಿಯಿಂದ ಗಮನಿಸುತ್ತ, ಇವರೇ ಅವರಿಗೆ ಹೊಸ ಹೊಸ ಸ್ಥಳಗಳನ್ನು ತೋರಿಸುತ್ತಿದ್ದರು. ಅವರಿಂದ ಡಾಕ್ಟರಿ ಕಲಿಯುವವರ ಹಾಗೆ ಏನೇನೋ ಕೇಳಿ ತಿಳಿದುಕೊಳ್ಳುತ್ತಿದ್ದರು. ತಮಾಷೆ ಮಾಡುತ್ತಿದ್ದರು. ಅವರಿಗೆಲ್ಲ ಇವರ ಕೇಸು ಅಪರೂಪವಾಗಿತ್ತಂತೆ. ಇವರ ನಡವಳಿಕೆ ಇನ್ನಷ್ಟು ವಿಚಿತ್ರವಾಗಿರಬೇಕು. ಇವರನ್ನು ಬದುಕಿಸಬೇಕೆಂಬ ಬಗ್ಗೆ ಅವರಿಗೊಂದು ಹಟ ಹುಟ್ಟಿಬಿಟ್ಟಿತ್ತು. ಕೆಲಗಂಟೆಗಳಲ್ಲಿ ಇವರು ಸಾಯುತ್ತಾರೆಂಬ ಸುದ್ದಿ ಬಂದಾಗ, ಒಬ್ಬ ಎಂ.ಡಿ. ವಿದ್ಯಾರ್ಥಿನಿ ನನ್ನನ್ನು ತಬ್ಬಿ ಅತ್ತುಬಿಟ್ಟಳು.

ಇವರಿಗೆ ಮಾತ್ರ ಯಾವ ಕಾಳಜಿಯೂ ಇದ್ದಂತಿರಲಿಲ್ಲ. ಮಕ್ಕಳನ್ನೆಲ್ಲ ಕರೆಸಿದರು. ಹೇಳುವುದನ್ನು ಹೇಳಿದರು. ಜೀವಂತ ತಿರುಗಿಬರುವ ಆಸೆಯಿಲ್ಲವೆಂದು 31 ದಿನಗಳಲ್ಲಿ ಒಂದು ಸಲ ಆಪರೇಷನ್ ರೂಮಿಗೆ ಅರೆಜೀವ ಅವಸ್ಥೆಯಲ್ಲಿ ಇವರನ್ನು ಸಾಗಿಸುತ್ತಿರುವಾಗ ಎಲ್ಲರನ್ನೂ ಕೈಬೀಸಿ ಬೀಳ್ಕೊಂಡಿದ್ದರು. ಆಪರೇಶನ್ ಮುಗಿದು ಎಲ್ಲರೂ ಆಶ್ಚರ್ಯ ಪಡುವ ಹಾಗೆ ಸಜೀವವಾಗಿ ಹಿಂದೆ ಬಂದರು. ಮಾರನೇ ದಿನವೋ ಏನೋ ವಾರ್ಡಿನಲ್ಲಿ ಎಲುಬಿನ ಗೂಡು ಮತ್ತು ಚರ್ಮ ಮಾತ್ರ ಸಹಿತವಾಗಿ ಮಲಗಿದ್ದ ಇವರ ಹತ್ತಿರ- ಯಾವನೋ ಹಳ್ಳಿಗ. ಯಾರನ್ನೋ ಹುಡುಕಿಕೊಂಡು ಬಂದು. ಇವರೇ ಅವನೆಂಬ ಭ್ರಾಂತಿಯಿಂದ, "ಭೀಮಪ್ಪ ಅಂದರೆ ನೀನೇ ಏನು?" ಎಂದು ಕೇಳಿದ. ಇವರು ಕಣ್ಣ ಮಾತ್ರ ಹೊರಳಿಸಿ (ಕೈಕಾಲು ಎತ್ತಲು ತ್ರಾಣ ಇರಲಿಲ್ಲ.) "ಏನಪ್ಪಾ, ನನ್ನ ಕಂಡರೆ ಭೀಮನ ಹಾಗೆ ಕಾಣುತ್ತಾ ನಿನಗೆ?" ಎಂದು ಕೇಳಿದರು. ಅವನು ಪೆಚ್ಚಾಗಿ ಹೊರಟು ಹೋದ.

ನನಗೆ ಆಗ ಅಳು ಬಂತು. ಎಂಥಾ ಹೊತ್ತಿನಲ್ಲಿ ತಮಾಷೆ ಇವರದು. ನಿರ್ಮೋಹಿ! ನಿರ್ಮೋಹಿ! ಅವರಿವರ ವಿಷಯದಲ್ಲಿ ಮಾತ್ರವಲ್ಲ, ತನ್ನ ಸ್ವಂತ ಜೀವ-ಸಾವಿನ ವಿಷಯದಲ್ಲಿಯೂ.

ಹೌದು, ನಿರ್ಮೋಹಿ! ನಮ್ಮ ಮಕ್ಕಳಲ್ಲಿ ಒಂದು ತನ್ನ ಒಂದೂವರೆ ವಯಸ್ಸಿನಲ್ಲಿ ತೀರಿಕೊಂಡಿತ್ತು. ಇವರು ಅಳಲಿಲ್ಲ. ಆದರೆ ಆ ಮಗು ತೀರಿಕೊಂಡ ಕೆಲ ತಿಂಗಳಲ್ಲಿ ಒಂದು ಸಂಜೆ ಇವರು ಮುಖ ಒಣಗಿಸಿಕೊಂಡು ಮನೆಗೆ ಬಂದರು. ತಣ್ಣೀರು ಸ್ನಾನ ಮಾಡಿದರು. ಊಟ ಬೇಡ ಎಂದರು. ಯಾಕೆ? ಎಂದೆ. ಗಾಂಧಿಯನ್ನು ಕೊಂದರು ಎಂದರು. ಹಾಗೇ ಮಲಗಿಬಿಟ್ಟರು. ಅವರಿಗೆ ಜ್ವರ ಬಂತು. ಮರುದಿನ ಇನ್ನೂ ಹೆಚ್ಚಾಯಿತು. ಸಂಜೆ ರೇಡಿಯೋವಿನಲ್ಲಿ ಗಾಂಧಿಯ ಚಿತಾರೋಹಣದ ಸುದ್ದಿ ಬರುತ್ತಿರುವಾಗ ಇವರು ಗೋಳೋ ಎಂದು ಅತ್ತುಬಿಟ್ಟರು.

"ಯಾರೋ ಏನೊ! ಅವನಿಗಾಗಿ ಹೀಗೆ ಅಳುತ್ತೀರಿ, ನಮ್ಮ ಮಗು ಸತ್ತಾಗ ನಿಮಗೆ ಅಳು ಬರಲಿಲ್ಲ? ಎಂದೆ" "ನಿನಗೆ ಗೊತ್ತಿಲ್ಲ ಲಕ್ಷ್ಮಿ, ಗಾಂಧಿ ಅಂದರೆ ಏನು ಅಂತ ನಿನಗೆ ಗೊತ್ತಿಲ್ಲ' ಎಂದು ಮತ್ತೆ ಬಿಕ್ಕತೊಡಗಿದರು. ಹದಿನೈದು ದಿನ ಇವರ ಜ್ವರ ಬಿಡಲಿಲ್ಲ.

ಇವರು ಮೋಹಿಯೆ? ನಿರ್ಮೋಹಿಯೆ? ಇವರೊಡನೆ ಬಾಳುವುದು ಸುಲಭವೇ? ಇವರನ್ನು ಪ್ರೀತಿಸದಿರುವುದು ಸುಲಭವೆ?

**ಸಂಪಾದಕರು: ಡಾ. ಶ್ರೀನಿವಾಸಹಾವನೂರ**
**ಪ್ರಕಾಶಕರು: ಪ್ರಸಾದನ ಪ್ರಕಾಶನ, ಆಶ್ರಯ,**
**36 ವಿನಾಯಕ ಲೇಔಟ್**
**ವಿಜಯನಗರ 3ನೇ ಹಂತ.**
**ಬೆಂಗಳೂರು-560040 ಬೆಲೆ:ರೂ. 88**

# ಪಾವೆಂ ಮರುಸೃಷ್ಟಿಸಿದ ಅರ್ಜುನನ ವಿಷಾದಯೋಗ

ಕನ್ನಡ ಪತ್ರಿಕಾ ಕ್ಷೇತ್ರದಲ್ಲಿ ಜ್ಯೋತಿಸ್ತಂಭದಂತೆ ಬೆಳಗಿದ ಪಾಡಿಗರು ವೆಂಕಟರಮಣಾಚಾರ್ಯರು (1915-1992). ಕರ್ನಾಟಕದಲ್ಲಿ ಆಗಿಹೋದ ಬಹುಶ್ರುತ ವಿದ್ವಾಂಸರಲ್ಲಿ ಒಬ್ಬರು. ಅವರಿಗೆ ದಕ್ಕಿದ್ದ ಔಪಚಾರಿಕ ಶಿಕ್ಷಣ ಎಸ್.ಎಸ್.ಎಲ್.ಸಿ.ವರೆಗೆ ಮಾತ್ರ. ಆದರೆ ಅವರು ಸ್ವಯಮಾಚಾರ್ಯರಾಗಿಯೇ ತಮ್ಮ ಜ್ಞಾನ ದಿಗಂತವನ್ನು ವಿಸ್ತರಿಸಿಕೊಂಡರು. ಕಸ್ತೂರಿ ಮಾಸಪತ್ರಿಕೆಯ ಸಂಪಾದಕರಾಗಿ, ಆ ಪತ್ರಿಕೆಯನ್ನು ಕನ್ನಡದ ಓದುಗರ ಪಾಲಿಗೆ 'ಜ್ಞಾನಕ್ಕೊಂದು ಬೆಳಕಿಂಡಿ'ಯಾಗಿ ರೂಪಿಸಿದ ಆಚಾರ್ಯರು ಪತ್ರಿಕೆಯೊಂದಿಗೆ ತಾವೂ ಬೆಳೆದರು; 'ಲಾಂಗೂಲಾಚಾರ್ಯ'ರಾಗಿ ಕರ್ಮವೀರದ ಓದುಗರೊಂದಿಗೆ ಅನನ್ಯವೆನ್ನಿಸುವ ರೀತಿಯಲ್ಲಿ ಹರಟೆಹೊಡೆದರು.

ಪ್ರಹಾರ, ಲೋಕದ ಡೊಂಕು, ವಿಪರೀತ- ಎಂಬ ಮೂರು ಸಂಕಲನಗಳಲ್ಲಿ ಸಂಕಲಿತವಾಗಿರುವ ಈ ಹರಟೆಗಳು ಇವತ್ತಿಗೂ ತಮ್ಮ ಪ್ರಸ್ತುತತೆಯನ್ನು ಉಳಿಸಿಕೊಂಡಿವೆ. ಬೇರೆ ಬೇರೆ ಹೆಸರುಗಳಲ್ಲಿ ಕಸ್ತೂರಿ ಮಾಸಿಕದಲ್ಲಿ ಅವರು ನೂರಾರು ಲೇಖನಗಳನ್ನು ಬರೆದರು. ವಿವಿಧ ಭಾಷೆಗಳ ಪದಗಳ ಉತ್ಪತ್ತಿ-ವಿಕಾಸಗಳ ಸ್ವಾರಸ್ಯವನ್ನು ಅನುಸಂಧಾನ ಮಾಡುವ 'ಪದಾರ್ಥ ಚಿಂತಾಮಣಿ' ಅಂಕಣದ ಬರೆಹಗಳು ಪಾವೆಂರವರ ಪ್ರಖರ ವಿದ್ವತ್ತಿಗೆ ಸಾಕ್ಷಿ ಹೇಳುತ್ತವೆ. 'ಸುಭಾಷಿತ ಚಮತ್ಕಾರ'ವೆಂಬ ಅಪೂರ್ವಗ್ರಂಥದಲ್ಲಿ ಪಾವೆಂ ತುಂಬಾ ಸ್ವಾರಸ್ಯವಾದ ಸಂಸ್ಕೃತ ಸುಭಾಷಿತಗಳನ್ನು ಆಯ್ದು, ಅಷ್ಟೇ ಸ್ವಾರಸ್ಯವಾಗಿ ಪದ್ಯರೂಪದಲ್ಲಿ ಕನ್ನಡದಲ್ಲಿ ಅನುವಾದಿಸಿದ್ದಾರೆ.

"ಪಾವೆಂ ಪತ್ರಿಕೋದ್ಯಮಿಯಾಗದಿದ್ದಲ್ಲಿ ಬಹುಶಃ ಕನ್ನಡದ ಶ್ರೇಷ್ಠ ಕವಿಗಳಲ್ಲಿ ಒಬ್ಬರಾಗುತ್ತಿದ್ದರೋ ಏನೋ" ಎಂಬ ಮಾತು ಸುಳ್ಳಲ್ಲ. ಬಿಡುವಿಲ್ಲದ ಪತ್ರಿಕಾ ದುಡಿತದಲ್ಲಿಯೂ ಅವರು ಕನ್ನಡದಲ್ಲಿ ಎರಡು ಕವಿತಾ ಸಂಕಲನಗಳನ್ನೂ, ತುಳುವಿನಲ್ಲಿ ಒಂದನ್ನೂ ಹೊರತಂದರು. ಅವರ ಪ್ರಥಮ ಕವನ ಸಂಕಲನ 'ನವನೀರದ'ಕ್ಕೆ ಮುಂಬಯಿ ಸರ್ಕಾರ ಬಹುಮಾನ ನೀಡಿ, ಪುರಸ್ಕರಿಸಿತು. ಪಾವೆಂ ಅವರಲ್ಲಿ ಸದಾಕಾಲ ಎಚ್ಚರವಿರುತ್ತಿದ್ದ ಆತ್ಮವಿಮರ್ಶಾ ಪ್ರಜ್ಞೆಯಿಂದಾಗಿ ಅವರ ಕವಿತಾ ರಚನೆ ಕುಂಠಿತವಾಗಿದ್ದರೆ ಆಶ್ಚರ್ಯವಿಲ್ಲ. ಅವರ ಬಹಳಷ್ಟು ಕವಿತೆಗಳಲ್ಲಿ ಒಂದು ಬಗೆಯ ವಿಲಕ್ಷಣವಾದ ವ್ಯಂಗ್ಯದೃಷ್ಟಿ, ಚುಚ್ಚುನೋಟ ಕಾಣಿಸುತ್ತದೆ.







ಪಯಣಿಸುವ ಆಸಕ್ತಿ, ಉತ್ಸಾಹ, ಸಾಹಸ- ಯಾವುದೂ ಇಲ್ಲ, ಅದಕ್ಕಾಗಿಯೇ ಆತ ಕೃಷ್ಣನನ್ನು ಆಕ್ಷೇಪಿಸುತ್ತಾನೆ:

ಯಾಕೆ ಕೃಷ್ಣ... ಬೇರು ಮೇಲಾದ<br>
ನಿನ್ನರಳೀಮರಕ್ಕೆ<br>
ಈ ಬೇತಾಳನ್ನ ನೇತು ಹಾಕಿ ಬಿಟ್ಟೆ?<br>
ಯಾಕೆ ಕೃಷ್ಣ ಈ ಹಿಮದ ಕಾಡಲ್ಲಿ<br>
ಮೂಗನ್ನು ಕೊಂಡು, ಕನ್ನಡಕವನ್ನು ಕೊಟ್ಟೆ?



ಕೃಷ್ಣ ಗೀತೋಪದೇಶ ಮಾಡಿ, ಲೌಕಿಕ ಬದುಕಿನ ಕುರಿತಾದ ಆಸಕ್ತಿಯೆಂಬ ಮೂಗನ್ನು ಕತ್ತರಿಸಿಬಿಟ್ಟಿದ್ದಾನೆ. ಮೂಗೇ ಇಲ್ಲದೆ, ಜ್ಞಾನದ ಕನ್ನಡಕವನ್ನು ಬಳಸುವ ಸ್ಥಿತಿಯಲ್ಲಿ ಅರ್ಜುನನಿಲ್ಲ. 'ಇಲ್ಲೂ ಇರಲಾರೆ, ಅಲ್ಲಿಗೂ ಹೋಗಲಾರೆ' ಎಂಬಂಥ ಎಡಬಿಡಂಗಿಯ ಪಾಡು ಅವನದು.

ಹೀಗಾಗಿ ಶ್ರೀಕೃಷ್ಣ ಗೀತೆಯ ಉಪದೇಶ ಮಾಡಿ ಅರ್ಜುನನನ್ನು ಬದುಕಿಸುವ ಬದಲು ಸಾಯಿಸಿದಂತಾಗಿದೆ. 'ಕೊಂದೆಯೋ ನನ್ನ... ಎಂದೂ ಸಾಯದಂತೆ ಕೊಂದೆಯೋ ನನ್ನ' ಎಂದು ತಳಮಳಿಸಿ, ಪ್ರಲಾಪಿಸುತ್ತಾನೆ ಅರ್ಜುನ.

ಅರಗಿಸಿಕೊಳ್ಳಲಾಗದ ಜ್ಞಾನದ ಪರಿಣಾಮ ಭಯಂಕರ. ಅತ್ತ ಸಾವೂ ಬಾರದ, ಇತ್ತ ಬದುಕಲೂ ಆಗದಂಥ ದಾರುಣ ಸ್ಥಿತಿಗೆ ತಲುಪಿದ್ದಾನೆ ಇಲ್ಲಿನ ಅರ್ಜುನ.

ಭಗವಂತನಿಗೆ ಅರ್ಜುನನ ಅವಸ್ಥೆಯನ್ನು ನೋಡಿ ಕನಿಕರವಾಗುತ್ತದೆ. ಅವನೆನ್ನುತ್ತಾನೆ:

'ಅಳಬೇಡ ವತ್ಸ, ಕೂರ್ಮನಾಗದೆ ಮತ್ಸ್ಯ ತಾಳಲಾರದು ಬಯಲು ಹವೆಯ ಸತ್ಯ.'

ಮೀನಿಗೆ ನೀರಲ್ಲಿ ಮಾತ್ರ ಉಸಿರಾಟ ಸಾಧ್ಯ. ಬಯಲ ಹವೆಯನ್ನು ಅನುಭವಿಸಬೇಕಾದರೆ, ಅದು ದ್ವಿಚರಿಯಾದ ಆಮೆಯಾಗಬೇಕು, ಹಾಗೆಯೇ ಮನುಷ್ಯ ಕೂಡ ಅವಸ್ಥಾಂತರಗಳನ್ನು ಹಾದು ಹೋದಾಗ ಮಾತ್ರ ಸತ್ಯದರ್ಶನ ಸಾಧ್ಯವಾದೀತು.

ಹೀಗೆಂದ ಶ್ರೀಕೃಷ್ಣ ತಾನು ತೋರಿಸಿದ, 'ಬೆಚ್ಚನ್ನ ಮಿಥ್ಯವನ್ನ' ಅಥವಾ ಅರ್ಜುನ ಕಳೆದುಕೊಂಡ 'ಅವನ ಸತ್ಯವನ್ನು' ಅವನಿಗೆ ಹಿಂತಿರುಗಿಸುವ ಸಲುವಾಗಿ-

ಶಿಷ್ಯೋತ್ತಮನ ಕಣ್ಣ। ಕಿರಿಬೆರಳ ತುದಿಯಿಂದ ಚುಚ್ಚಿದ<br>
ಆಗ ಕೌಂತೇಯ ತನ್ನ। ಅಜ್ಞಾನ ದೃಷ್ಟಿಯನ್ನು ಬಿಚ್ಚಿದ.

ಗೀತೆಯಲ್ಲಿ ಭಗವಂತ ಅರ್ಜುನನಿಗೆ 'ದಿವ್ಯಚಕ್ಷು'ಗಳನ್ನು ನೀಡಿ, ಸತ್ಯದರ್ಶನಕ್ಕೆ ಸಹಾಯ ಮಾಡಿದರೆ, ಇಲ್ಲಿ ಶ್ರೀಕೃಷ್ಣನಿಂದ ಅರ್ಜುನ 'ಅಜ್ಞಾನದ ದೃಷ್ಟಿ'ಯನ್ನು ಮರಳಿ ಪಡೆಯುತ್ತಾನೆ. ಇದೊಂದು 'ಅಪಗತಿ'ಯ ಪಯಣ. ಸತ್ಯಸೂರ್ಯನ ಪ್ರಖರತೆಯನ್ನು ಸಹಿಸಿಕೊಳ್ಳಲಾರದ ಸಾಮಾನ್ಯರಾದ ನಮ್ಮಂಥವರೆಲ್ಲರ ಪಾಡು ಇದು. ಪಾವೆಂ ತಮ್ಮ ವ್ಯಂಗ್ಯ ವೈಭವದಿಂದ ಅದನ್ನು ಇಲ್ಲಿ ಹಾಡಾಗಿಸಿದ್ದಾರೆ.

-ವಿಹಾರಿ



ಪಾವೆಂ. ದಂಪತಿಗಳು

# ನನ್ನ ಪತಿ ಪಾವೆಂ

**ಕನ್ನಡ ಸಾಹಿತ್ಯ ಹಾಗೂ ಪತ್ರಿಕಾ ಲೋಕದಲ್ಲಿ ಪಾವೆಂ ಅವರದು ಪರಿಚಿತವಾದ ಹೆಸರು. ಉಡುಪಿಯಲ್ಲಿ ಹುಟ್ಟಿ ಬೆಳೆದ ಪಾವೆಂ ಬದುಕಿನ ಬಹುಭಾಗ ಕಳೆದದ್ದು ಉತ್ತರ ಕರ್ನಾಟಕದಲ್ಲಿ. ಪಾವೆಂ ಅವರ ಕೆಲವು, ಅವರನ್ನು ಕುರಿತಂತೆ ಹಲವು ಬರಹಗಳನ್ನೊಳಗೊಂಡಂತೆ 'ಉಡುಪಿಯ ಪರಿಸರದಲ್ಲಿ ಪಾವೆಂ. ಆಚಾರ್ಯರು' ಗ್ರಂಥವೊಂದು ಪ್ರಕಟವಾಗಿದೆ. ಪಾವೆಂ ಅವರ ಪತ್ನಿ ಲಕ್ಷ್ಮೀಬಾಯಿ ಆಚಾರ್ಯ ಬರೆದಿರುವ 'ನನ್ನ ಪತಿ' ಲೇಖನವನ್ನು ಈ ಪುಸ್ತಕದಿಂದ ಆಯ್ದುಕೊಳ್ಳಲಾಗಿದೆ.**

ಕ್ರಿ.ಶ. 1936ರ ಮೇ ತಿಂಗಳ ಅಂತ್ಯದಲ್ಲಿ ಒಂದು ದಿವಸ 'ಇವರು' ನನ್ನ ಸೋದರಮಾವ ಶ್ರೀನಿವಾಸರಾಯರು ಮತ್ತು ಇತರ ಮೂವರ ಸಂಗಡ ನನ್ನನ್ನು ನೋಡಲಿಕ್ಕೆ ಬಂದರು. ನೋಡಲಿಕ್ಕೆ ಬರುತ್ತಾರೆಂಬುದಕ್ಕೆ ಸೂಚನೆ ಏನೂ ಬಂದಿರಲಿಲ್ಲ. ಆದ್ದರಿಂದ ನಾನು ಅದಕ್ಕೆ ಸ್ವಲ್ಪವೂ ಅಣಿಯಾಗಿರಲಿಲ್ಲ. ಒಂದು ಒಳ್ಳೇ ಸೀರೆ ಉಟ್ಟಿರಲಿಲ್ಲ: ಮುಖ ಕೂಡ ಸರಿಯಾಗಿ ತೊಳೆದುಕೊಂಡಿರಲಿಲ್ಲ. ಕೊಟ್ಟಿಗೆಗೆ ಹೊರಟಿದ್ದ ನನ್ನನ್ನು ಹಾಗೆಯೆ ನನ್ನ ಮಾವ ಕರೆತಂದು ಅವರ ಮುಂದೆ ನಿಲ್ಲಿಸಿದರು. ಕೆಲ ನಿಮಿಷ. ಅಷ್ಟೆ. ಬಂದವರು ಎದ್ದರು. ಹೊರಟರು. ಆ ಮೇಲೆ ಒಪ್ಪಿದರೆಂದು ಕೇಳಿದೆ. ವಾರ ಕಳೆಯುವುದರೊಳಗೆ ಮದುವೆ ಆಗಿಹೋಯಿತು. ಮದುವೆ ಕುದುರಿಸುವುದಕ್ಕೆ ನನ್ನ ಮಾವ ನೂರಲ್ಲದಿದ್ದರೂ ಹತ್ತಾರು ಸುಳ್ಳುಗಳನ್ನು ಎರಡೂ ಪಕ್ಷಗಳಿಗೆ ಹೇಳಿದ್ದರೆಂದು ಅನಂತರ ಬೆಳಕಿಗೆ ಬಂತು. ನನಗೆ ಸಂಸ್ಕೃತ ಮತ್ತು ಹಿಂದೀ ಬರುತ್ತದೆಂದು ಅವರಿಗೂ (ನಾನು ಎರಡನೆಯ ತರಗತಿ ದಾಟಿರಲಿಲ್ಲ) ಇವರಿಗೆ ಸುಮಾರು ಆಸ್ತಿ ಇದೆಯೆಂದು ನಮ್ಮ ತಂದೆಯವರಿಗೂ (ಇದ್ದದ್ದು ಒಂದು ಸಣ್ಣ ಮನೆ ಮಾತ್ರ) ಹೇಳಿದ್ದು ಮುಖ್ಯ ಸುಳ್ಳುಗಳು.

ಅಂತೂ ಹದಿನೈದನೆಯ ವಯಸ್ಸಿನಲ್ಲಿ ನಾನು ಇವರ ಮನೆಗೆ ಬಂದೆ. ಸುಳ್ಳುಗಳಿಗಾಗಿ ಹೆಚ್ಚು ಗದ್ದಲ ಆಗಲಿಲ್ಲ. ಆದರೆ ಅವರ ಮನೆತನದ ಉಭಯಕುಲಗಳಲ್ಲಿ ಇಂಗ್ಲಿಷ್ ಕಲಿತ ಮೊದಲನೆಯ ಹುಡುಗನಾದ ಇವರು ಏನೂ ವರದಕ್ಷಿಣೆ ಕೇಳದೆ ಮದುವೆ ಮಾಡಿಕೊಂಡದ್ದು ಇವರ ತಾಯಿಗೆ ಅಷ್ಟಾಗಿ ಹಿಡಿಸಿದ ಹಾಗೆ ಕಾಣಲಿಲ್ಲ. ವರದಕ್ಷಿಣೆ ಕೊಡಲಿಕ್ಕೆ ತಯಾರಾಗಿದ್ದ ಇತರರು ಕೇಳಿ ಹೋಗಿದ್ದರಂತೆ. ಅವರನ್ನು ಬಿಟ್ಟು ಇವಳಿಗೆ ಯಾಕೆ ಒಪ್ಪಬೇಕಿತ್ತು ಎಂಬ ಆತಂಕ ಅವರದು. ಹಣಕ್ಕಾಗಿ ಅಲ್ಲದಿದ್ದರೂ ಮಗನ ಅಭಿಮಾನಕ್ಕಾಗಿ! ಈ ವಿಷಯದಲ್ಲಿ ನಮ್ಮ ಅತ್ತೆಯವರು ಕೊನೆಗೂ ಇವರನ್ನಾಗಲಿ ನನ್ನನ್ನಾಗಲಿ ಪೂರ್ತಿ ಕ್ಷಮಿಸಲಿಲ್ಲ. ಒಮ್ಮೊಮ್ಮೆ ಅವರಿಲ್ಲದಾಗ ನವಿರಾದ ಕಟಕಿ ಮಾತುಗಳು ಬರುತ್ತಿದ್ದವು. ಆದರೆ ಪರರ ಮುಂದೆ ಮಾತ್ರ ಅವರು ಎಂದೂ ನನ್ನನ್ನು ಅವಮಾನಿಸಲಿಲ್ಲ. ಅಂತೂ ಒಟ್ಟಿನ ಮೇಲೆ ಇವರ ಮನೆಯಲ್ಲಿ ಪರವಾಗಿಲ್ಲ ಎನಿಸಿಕೊಂಡು ಬಾಳಿದೆ.

ಇವರು ಇಲ್ಲದಾಗ ಅಂದನೆಲ್ಲ. ಇವರು ಮನೆಯಲ್ಲಿ ಇರುತ್ತಿದ್ದದ್ದಾರೂ ಎಷ್ಟು ಅನ್ನುತ್ತೀರಿ! ಬೆಳಗ್ಗೆ ಏಳೋ ಎಂಟೋ ಗಂಟೆಗೆ ಆಫೀಸಿಗೆ ಹೋದರೆ. ಮಧ್ಯಾಹ್ನ ಒಂದು ತಾಸು ಊಟಕ್ಕೆ ಬಂದು ಹೊರಟವರು ಹಿಂದಿರುಗುವಾಗ ರಾತ್ರಿ ಹನ್ನೊಂದೋ ಹನ್ನೆರಡೋ-ಮನೆಯಲ್ಲಿ ಇವರ ಅಕ್ಕಂದಿರಲ್ಲಿ ಒಬ್ಬರಲ್ಲ ಒಬ್ಬರು. ಅವರ ಮಕ್ಕಳು ಬಂದಿರುತ್ತಿದ್ದರು. ಹೀಗಾಗಿ ಹೊತ್ತು ಹೋಗುವುದು ಕಷ್ಟವಾಗಿರಲಿಲ್ಲ. ಕೆಲಸ ಧಾರಾಳ ಇರುತ್ತಿತ್ತು. ಗಂಡಂದರಿಂದ ಬಹಳ ಅಪೇಕ್ಷಿಸುವುದಕ್ಕೆ ಅಂದಿನ ಸಂಪ್ರದಾಯಸ್ಥ ಬ್ರಾಹ್ಮಣ ಕನ್ಯೆಯರಿಗೆ ತರಬೇತಿಯೇ ಇರುತ್ತಿರಲಿಲ್ಲವಾಗಿ ನನಗೆ ಅಸಂತೋಷ ವ್ಯಕ್ತಪಡಿಸುವ ಯೋಚನೆಯೇ ಬರಲಿಲ್ಲ.

ಹೀಗೆ ಪ್ರಾರಂಭವಾದ ನಮ್ಮ ದಾಂಪತ್ಯ ಈಗ ನಲವತ್ತೊಂದು ವರ್ಷಗಳನ್ನು ಮುಗಿಸುತ್ತಿದೆ. ಇಷ್ಟೆಲ್ಲ ವರ್ಷಗಳಲ್ಲಿ ಮೊದಲ ನಾಲ್ಕನ್ನು ಇವರ ಕುಟುಂಬದೊಡನೆ ಮತ್ತು ಉಳಿದವುಗಳನ್ನು ಬಹುಮಟ್ಟಿಗೆ ಪ್ರತ್ಯೇಕ ಸ್ವಂತ ಸಂಸಾರವಾಗಿ ನಾವು ಬಾಳಿದ್ದೇವೆ. ಎಂಟು ಮಕ್ಕಳನ್ನು ಬೆಳೆಸಿದ್ದೇವೆ: ಒಂದನ್ನು ಕಳೆದುಕೊಂಡಿದ್ದೇವೆ. ಸುಖದುಃಖದ ಸಂಗಮದಲ್ಲಿ ಮಿಂದಿದ್ದೇವೆ. ಹೆಚ್ಚಿನ ಸಮಯ ಬಡತನದ ಕಷ್ಟಗಳಲ್ಲಿ ಸವೆದಿದ್ದರೂ ನಮ್ಮ ಬದುಕು ಒಟ್ಟಿನಲ್ಲಿ ಅಚ್ಚುಮೆಚ್ಚಿನಲ್ಲೇ ಸಾಗಿದೆ. ಬಹು ಅಪರೂಪವಾಗಿ ಜಗಳವಾಡಿರಬಹುದಷ್ಟೆ. ನಿಜವಾಗಿ. ನಿಮ್ಮಲ್ಲಿ ಜಗಳವಾಗುವುದೇ ಇಲ್ಲವಲ್ಲ! ಎಂದು ನೆರೆಹೊರೆಯವರು ಸೋಜಿಗದಿಂದ ಕೇಳಿದ್ದೂ ಉಂಟು. ಇವರಲ್ಲಿ ರಸಿಕತೆಗೆ ಕೊರತೆ ಇಲ್ಲ. ಮನೆಯಲ್ಲಿ ಯಾವಾಗಲೂ ವಿನೋದದ ಚಟಾಕಿಗಳು ಹಾರುತ್ತಲೇ ಇರುತ್ತವೆ. ಆದರೆ ಇವರೊಡನೆ ಬಾಳುವುದು ಸುಲಭವಾಗಿತ್ತೆಂದು ಹೇಳಲಾರೆ. ಮನೆಯ ಕಡೆ ಇವರ ಗಮನ ಕಡಿಮೆ. ಸಾಕಷ್ಟು ಗಳಿಸುವುದಕ್ಕಾಗಿ ಹೆಚ್ಚು ಹೊತ್ತು ಹೊರಗೇ ಕಳೆಯುತ್ತಿದ್ದರೆಂಬುದು ಒಂದು ಕಾರಣವಾದರೂ ಒಟ್ಟಿನಲ್ಲಿ ವ್ಯಾವಹಾರಿಕ ಸಂಗತಿಗಳಲ್ಲಿ ಇವರ ತಲೆ ಓಡುವುದು ಅಷ್ಟಕಷ್ಟೆ. ಇವರ ಸೂಕ್ಷ್ಮಜ್ಞತೆ ಕೆಲಸದಲ್ಲಿ ಓದಿನಲ್ಲಿ. ಚರ್ಚೆಗಳಲ್ಲಿ ಹೊರತು ಮನೆಯ ಅಗತ್ಯಗಳನ್ನು ತರ್ಕಿಸಿ ಪೂರೈಸುವುದರಲ್ಲಿ ಕುಂಟುವುದೇ ಜಾಸ್ತಿ. ನಾನೂ ವಿದ್ಯಾವಂತಳಾಗಿದ್ದರೆ ಹೇಗಿರಬಹುದಿತ್ತು ಎಂದು ಒಮ್ಮೊಮ್ಮೆ ಯೋಚಿಸುತ್ತೇನೆ. ನಮ್ಮಿಬ್ಬರ ಸುಖ ಸಂತೋಷ ಹೆಚ್ಚಾಗಬಹುದಿತ್ತೋ ಕಲಹಗಳು ಹೆಚ್ಚಾಗಬಹುದಿತ್ತೋ ಹೇಳಲಾರೆ. ಈ ಊಹಾಪೋಹಗಳಿಂದ ಆಗುವುದು ಏನು? ಆ ಗೊಡವೆ ಬಿಟ್ಟು ಇವರೊಡನೆ ಬಾಳಿನಲ್ಲಿ ನಾನು ಅನುಭವಿಸಿದ ಕೆಲ ವಿಚಿತ್ರ ಸನ್ನಿವೇಶಗಳನ್ನು ಮಾತ್ರ ಹೇಳುತ್ತೇನೆ. ಸುಖ ನಿಮಿಷಗಳಿಗೆ ಕೊರತೆ ಇರಲಿಲ್ಲ: ಆದರೆ ಅವು ನನ್ನ ಸ್ವಂತ ಆಸ್ತಿ.

ಮೂರು ವರ್ಷಗಳಲ್ಲಿ ನಮಗೆ ಎರಡು ಮಕ್ಕಳಾದವು. ಅಷ್ಟರಲ್ಲಿ ಇವರು ಮನೆಯೆಂದೇ ತಿಳಿದುಕೊಂಡಿದ್ದ ಇವರ ಆಫೀಸು ಇವರಿಗೆ ಕೈಕೊಟ್ಟಿತು. ಕಂಪೆನಿ ದಿವಾಳಿಯೆದ್ದು ಅದರ ಮುಖ್ಯಸ್ಥರು ಪಣೆಯಾಡಿ ಊರು ಬಿಟ್ಟು ಕಣ್ಮರೆಯಾದರು. ಬಂದ ಗಂಡಾಂತರದ ಪೂರ್ತಿ ಅರ್ಥ ನನಗೆ ಆಗಲಿಲ್ಲ. ಆದರೆ ಕಂಪೆನಿಯಲ್ಲಿ ಜವಾಬ್ದಾರಿ ಸ್ಥಾನದಲ್ಲಿದ್ದದ್ದಲ್ಲದೆ ತಮ್ಮ ಸಂಬಂಧಿಕರ ಹಣವನ್ನೂ ಅದರಲ್ಲಿ ತೊಡಗಿಸಿದ್ದ ಇವರಿಗೆ ತುಂಬಾ ಕಷ್ಟವೊದಗಿತ್ತೆಂದು ತಿಳಿಯಲು ಕಷ್ಟವಿರಲಿಲ್ಲ. ಕೆಳವು ತಿಂಗಳು ಹೇಗೆ ಹೇಗೋ ಕಳೆದು ಇವರು ಕಡೆಗೆ ಮದ್ರಾಸಿಗೆ ಒಂದು ಹೋಟೆಲಿನಲ್ಲಿ ಕ್ಲಾರ್ಕ್ ಆಗಲು ಹೊರಟು ಹೋದರು. ಕೆಲ ಕಾಲಾನಂತರ ಇವರ ತಾಯಿ ಕೂಡ ತಮ್ಮ ಮಗಳಿದ್ದಲ್ಲಿಗೆ ಹೋದದ್ದರಿಂದ ನಾನು ತವರು ಮನೆಯಲ್ಲಿ ಇರಬೇಕಾಯಿತು.

ಒಂದು ವರ್ಷ ಕಳೆದಿತ್ತು. ಆಗ ಮಹಾಯುದ್ಧದ ಸುದ್ದಿಗಳು ಬರತೊಡಗಿದವು.

ಮದ್ರಾಸಿನ ಮೇಲೆ ಬಾಂಬು ಬೀಳುತ್ತಿದೆಯೆಂಬ ಗಾಳಿವರ್ತಮಾನಗಳು ನನಗೂ ನನ್ನ ತಂದೆಯವರಿಗೂ ಗಾಬರಿ ಉಂಟುಮಾಡಿದವು. ಇಷ್ಟರಲ್ಲಿ ನನ್ನ ಅಣ್ಣಂದಿರು ಧಾರವಾಡದಲ್ಲಿ ಹೋಟೆಲ್ ವ್ಯವಸಾಯ ಆರಂಭಿಸಿದ್ದರು. ಅವರು ಇವರಿಗೆ ಕಾಗದ ಬರೆದು ಅಲ್ಲಿಗೆ ಬರಮಾಡಿಕೊಂಡರು. ನನಗೆ ಸ್ವಲ್ಪ ಧೈರ್ಯ ಬಂತು. ಇವರು ಮದ್ರಾಸಿನಲ್ಲಿದ್ದಾಗ ಇವರ ವರ್ತಮಾನಗಳಿಗಾಗಿ ನಾನು ತಿಂಗಳುಗಟ್ಟಳೆ ಕಾಯಬೇಕು. (ಇವರು ಪುಸ್ತಕ ಬರೆದಾರೇ ಹೊರತು ಒಂದು ಕಾಗದ ಬರೆಯಲಾರರು ಎಂಬುದು ಇಂದಿಗೂ ಸತ್ಯ) ಎಂದಾದರೂ ಬರೆದರೆ ಏನೇನೋ ಉದ್ದುದ್ದ ಬರೆದು ನನಗೆ ಕಣ್ಣೀರು ಬರಿಸುತ್ತಿದ್ದರು. ಕಾಗದ ಬರೆಯಲಿಲ್ಲೆಂದು ದೂರಿ ಬರೆದರೆ ಒಂದು ಸಲ.

"ಕ್ಷೇಮವಾಗಿದ್ದರಿಂದಲೇ ಬರೆದಿಲ್ಲ ಎಂದು ತಿಳಿದರೆ ಸಾಲದಾ?" ಎಂದೊಂದು ಕವಿತೆಯನ್ನೇ ಬರೆದು ಕಳಿಸಿದ್ದರು.

ಧಾರವಾಡಕ್ಕೆ ಇವರು ಬಂದದ್ದರಿಂದ ಆ ಚಿಂತೆ ದೂರವಾಯಿತು. ಅನಂತರ ಕೆಲ ತಿಂಗಳುಗಳಲ್ಲಿ ಇವರು ಹುಬ್ಬಳ್ಳಿಯಲ್ಲಿ 'ಸಂಯುಕ್ತ ಕರ್ನಾಟಕ'ದಲ್ಲಿ ಕೆಲಸಕ್ಕೆ ಸೇರಿದರು. 1943ರ ಕೊನೆಯಲ್ಲಿ ನನ್ನನ್ನು ಊರಿಂದ ಕರೆತಂದು ಹುಬ್ಬಳ್ಳಿಯಲ್ಲಿ ಮನೆ ಮಾಡಿದರು.

ಇವರೊಡನೆ ದೂರ ಪ್ರಯಾಣವೆಂದರೆ ಅದೇ ಮೊದಲ ಸಲ- 1943 ರಲ್ಲಿ. ಅಂದಿನಿಂದಲೂ ಇವರ ಸಂಗಡ ಎಲ್ಲಾದರೂ ಹೋಗುವುದೆಂದರೆ ನನಗೆ ಭಯ. ಈ ಮೊದಲ ಪ್ರಯಾಣದ ಕಥೆ ಕೇಳಿ. ಉಡುಪಿಯಿಂದ ಹೊರಟು ಬಸ್ಸಿನಲ್ಲಿ ಹರಿಹರಕ್ಕೆ ಬಂದೆವು. ಸಂಜೆಯಾಗಿತ್ತು. ಮುಂದೆ ಹುಬ್ಬಳ್ಳಿಗೆ ರೈಲು. ಸುಖವಾಗಿ ಹೋಗೋಣವೆಂದು ಇಂಟರ್ ಕ್ಲಾಸ್ ಟಿಕೆಟ್ ತೆಗೆದರು. ಅಷ್ಟರಲ್ಲಿ ಕರ್ಜಗಿಯ ಹತ್ತಿರ ಎಲ್ಲೋ ಇಳಿಯಬೇಕಾಗಿದ್ದ ವೃದ್ಧ ದಂಪತಿಗಳು ಇವರಿಗೆ ಗಂಟುಬಿದ್ದರು. ಅವರಿಗೆ ಇದು ಹೊಸ ರೈಲು ಪ್ರಯಾಣವಂತೆ. ಇವರು ಕೈಯಿಂದ ಹಣ ಸೇರಿಸಿ ಅವರಿಗೂ ಇಂಟರ್ ಟಿಕೆಟ್ ಕೊಂಡರು. ರೈಲು ಬಂತು. ಅದರಲ್ಲಿ ಯಾವ ಕ್ಲಾಸಿನಲ್ಲಿಯೂ ಎಳ್ಳು ಹಾಕುವಷ್ಟು ಸ್ಥಳ ಇರಲಿಲ್ಲ. ಮಿಲಿಟರಿಯವರು ತುಂಬಿಹೋಗಿದ್ದರು. ಓಡಾಡಿ ಗಂಡಸರ ಡಬ್ಬಿಯಲ್ಲಿ ಸ್ಥಳ ಕಾಣದೆ ಹೆಂಗಸರ ಡಬ್ಬಿಯಲ್ಲಿ ನಮ್ಮನ್ನು ಹತ್ತಿಸಿದರು. ಈ ಗಡಿಬಿಡಿಯಲ್ಲಿ ನಮ್ಮ ಟಿಕೇಟುಗಳು ಪ್ಲಾಟ್‌ಫಾರ್ಮಿನಲ್ಲಿ ಎಲ್ಲೊ ಬಿದ್ದುಹೋದವು. ಎಷ್ಟು ಹುಡುಕಿದರೂ ಸಿಗಲಿಲ್ಲ. ಹೊಸದನ್ನು ತೆಗೆಯಲಿಕ್ಕೆ ಸಮಯ ಇಲ್ಲ. ಇವರು ಹಾಗೇ ರೈಲು ಏರಿದರು. ರೈಲು ಹೊರಟು ಕೆಲ ಸೆಕೆಂಡುಗಳಲ್ಲಿ ಇವರು ಧೊಪ್ಪನೆ ಕೆಳಗೆ ಜಿಗಿದರು! ನನಗೆ ಜೀವ ಹಾರಿದಂತಾಯಿತು. ರೈಲಿನ ವೇಗ ಹೆಚ್ಚಾಗುತ್ತಿದೆ. ಇವರು ಯಾಕೆ ಹಾರಿದರು? ಹೇಗೆ ತಿರುಗಿ ಬರುತ್ತಾರೆ? ನಮ್ಮ ಗತಿ ಏನು? ಮಕ್ಕಳು ಬೇರೆ ಇದ್ದಾರೆ. ಏನು ಗತಿ ಬಂತಪ್ಪಾ! ನನಗೆ ಧಾರವಾಡವೂ ಗೊತ್ತಿಲ್ಲ. ಹುಬ್ಬಳ್ಳಿಯೂ ಗೊತ್ತಿಲ್ಲ...

ಆದರೆ ಮುಂದೆ ರಾಣೇಬೆನ್ನೂರಲ್ಲಿರಬೇಕು. ಇವರು ನಮ್ಮ ಡಬ್ಬಿಯಲ್ಲಿ ಹಾಜರಾದರು. "ಹೆದರಿದೆಯಾ?" ಎಂದರು. ಹೆದರಿದ್ದೇನೆ! "ರೈಲು ಹೊರಟ ಮೇಲೆ ನಮ್ಮ ಟಿಕೆಟ್ ಪ್ಲಾಟ್‌ಫಾರ್ಮಿನಲ್ಲಿ ಬಿದ್ದಿದ್ದು ಕಂಡೆ. ಹೆಕ್ಕಿಕೊಳ್ಳುತ್ತೇನೆಂದು ಜಿಗಿದೆ" ಎಂದರು. "ಓಡುವ ಗಾಡಿಯಿಂದ ಹಾರುವುದೆ?" ಎಂದರೆ. "ಓ ಅದೇನು ಮಹಾ! ಮದ್ರಾಸಿನಲ್ಲಿದ್ದಾಗ ಟ್ರಾಮುಗಳಿಂದ ಹಾರಲಿಕ್ಕೆ ಅಭ್ಯಾಸ ಮಾಡಿಕೊಂಡಿದ್ದೆ." ಎಂದರು. "ಟಿಕೆಟ್ ಸಿಕ್ಕಿತೆ?" ಎಂದು ಕೇಳಿದೆ. ಸಿಕ್ಕಿರಲಿಲ್ಲ. ಇವರು ನೋಡಿದ್ದಕ್ಕೂ ಹಾರಿದ್ದಕ್ಕೂ ನಡುವೆ ರೈಲು ಸುಮಾರು ಮುಂದೆ ಹೋಗಿಬಿಟ್ಟಿತ್ತು. ಟಿಕೆಟ್ ಆಸೆ ಬಿಟ್ಟು ರೈಲಿನ ಹಿಂದೆ ಓಡತೊಡಗಿದರು. ಫಸ್ಟ್‌ಕ್ಲಾಸಿನಲ್ಲಿದ್ದ ಯಾವನೋ ಮಿಲಿಟರಿ ಆಫೀಸರ್ ಇವರ ಕೈಹಿಡಿದು ಮೇಲೆಳೆದು ತನ್ನ ಕಂಪಾರ್ಟ್‌ಮೆಂಟಿನಲ್ಲಿ ಹತ್ತಿಸಿಕೊಂಡು. ಚೆನ್ನಾಗಿ ಬೈದು. ಮುಂದಿನ ಸ್ಟೇಷನ್ನಿನಲ್ಲಿ ನಮ್ಮ ಡಬ್ಬಿಗೆ ಕಳಿಸಿದ್ದ. "ಅವನು ಮೇಲೆ ಎಳೆದುಕೊಳ್ಳದಿದ್ದರೆ ಏನು ಮಾಡುತ್ತಿದ್ದಿರಿ?" ಎಂದರೆ "ಧಾರವಾಡದಲ್ಲಿ ನಿನ್ನಣ್ಣನಿಗೆ ತಂತಿ ಕೊಡುತ್ತಿದ್ದೆ. ಅವರು ನಿನ್ನನ್ನು ಇಳಿಸಿಕೊಳ್ಳುತ್ತಿದ್ದರು!" ಎನ್ನುತ್ತಾರೆ. ಅಂತೂ ಧಾರವಾಡದಲ್ಲಿ ಸ್ವಲ್ಪ ದಂಡ ಸಹಿತ ಟಿಕೆಟ್ ಹಣ ಸಲ್ಲಿಸಿ ಪಾರಾಗಿ ಬಂದೆವು.



ಪ್ರತಿಸಲ ಪ್ರಮಾಣದಲ್ಲಿ ಒಂದಲ್ಲ ಒಂದು ತೊಂದರೆ ತಂದುಕೊಳ್ಳುತ್ತಾರೆ. ಒಮ್ಮೆ ಬೆಳಗಿನ ಜಾವದ ರೈಲಿಗೆ ನಮ್ಮನ್ನು ಕರೆದೊಯ್ಯಲು ಟಾಂಗಾದವನನ್ನು ಮನೆಗೆ ಬರಹೇಳಿದ್ದರು. ಹೇಳಿದ್ದಕ್ಕಿಂತ ಅವನು ಹತ್ತು ನಿಮಿಷ ತಡಮಾಡಿದನೆಂದು ಸಹನೆಗೆಟ್ಟು ಬೇರೆ ಟಾಂಗಾ ತಂದರು. ದಾರಿಯಲ್ಲಿ ಮೊದಲನೇ ಟಾಂಗಾದವನು ಎದುರಾಗಿ ಜಗಳ ಹೂಡಿದ. "ನೀನು ಯಾಕೆ ಹೇಳಿದ ಟೈಮಿಗೆ ಬರಲಿಲ್ಲ?" ಎಂದು ಇವರು. "ರೈಲಿಗೆ ಇನ್ನೂ ಟೈಮಿದೆ. ಅದರೊಳಗೆ ನಾನು ಬಂದೇ ಬರುತ್ತಿದ್ದೆ" ಎಂದ ಅವನು. "ಟೈಮು ಅಂದರೆ ಟೈಮು!" ಎಂದು ಇವರ ಹಟ. ಪಾಪ, ಅವನ ಹತ್ತಿರ ರಿಸ್ಟ್‌ವಾಚ್ ಇದೆಯೇ? ಅವನೂ ಬಿಡ; ಇವರೂ ಬಿಡರು. ಪೋಲಿಸ್ ಸ್ಟೇಷನ್ನಿಗೆ "ಅವನು ಮೇಲೆ ಎಳೆದುಕೊಳ್ಳದಿದ್ದರೆ ಏನು ಮಾಡುತ್ತಿದ್ದಿರಿ?" ಎಂದರೆ "ಧಾರವಾಡದಲ್ಲಿ ನಿನ್ನಣ್ಣನಿಗೆ ತಂತಿ ಕೊಡುತ್ತಿದ್ದೆ. ಅವರು ನಿನ್ನನ್ನು ಇಳಿಸಿಕೊಳ್ಳುತ್ತಿದ್ದರು!" ಎನ್ನುತ್ತಾರೆ. ಅಂತೂ ಧಾರವಾಡದಲ್ಲಿ ಸ್ವಲ್ಪ ದಂಡ ಸಹಿತ ಟಿಕೆಟ್ ಹಣ ಸಲ್ಲಿಸಿ ಪಾರಾಗಿ ಬಂದೆವು.

ಪ್ರತಿಸಲ ಪ್ರಮಾಣದಲ್ಲಿ ಒಂದಲ್ಲ ಒಂದು ತೊಂದರೆ ತಂದುಕೊಳ್ಳುತ್ತಾರೆ. ಒಮ್ಮೆ ಬೆಳಗಿನ ಜಾವದ ರೈಲಿಗೆ ನಮ್ಮನ್ನು ಕರೆದೊಯ್ಯಲು ಟಾಂಗಾದವನನ್ನು ಮನೆಗೆ ಬರಹೇಳಿದ್ದರು. ಹೇಳಿದ್ದಕ್ಕಿಂತ ಅವನು ಹತ್ತು ನಿಮಿಷ ತಡಮಾಡಿದನೆಂದು ಸಹನೆಗೆಟ್ಟು ಬೇರೆ ಟಾಂಗಾ ತಂದರು. ದಾರಿಯಲ್ಲಿ ಮೊದಲನೇ ಟಾಂಗಾದವನು ಎದುರಾಗಿ ಜಗಳ ಹೂಡಿದ. "ನೀನು ಯಾಕೆ ಹೇಳಿದ ಟೈಮಿಗೆ ಬರಲಿಲ್ಲ?" ಎಂದು ಇವರು. "ರೈಲಿಗೆ ಇನ್ನೂ ಟೈಮಿದೆ. ಅದರೊಳಗೆ ನಾನು ಬಂದೇ ಬರುತ್ತಿದ್ದೆ" ಎಂದ ಅವನು. "ಟೈಮು ಅಂದರೆ ಟೈಮು!" ಎಂದು ಇವರ ಹಟ. ಪಾಪ, ಅವನ ಹತ್ತಿರ ರಿಸ್ಟ್‌ವಾಚ್ ಇದೆಯೇ? ಅವನೂ ಬಿಡ; ಇವರೂ ಬಿಡರು. ಪೋಲಿಸ್ ಸ್ಟೇಷನ್ನಿಗೆ ಹೋಗುವಾ ಎಂದು ಇವರು. ನನಗೆ ಎರಡು ಸಂಕಟ. ಒಂದು, ಈ ಜಗಳದಲ್ಲಿ ರೈಲು ತಪ್ಪಿದರೆ ಎಂದು; ಇನ್ನೊಂದು ಆ ದಾಂಡಿಗ ಇವರನ್ನು ಜಪ್ಪಿದರೆ ಎಂದು.

**ಅನರ್ಥ**

**ಪೂರ್ಣ ವಿರಾಮದ**
**ಲಕ್ಷಣ ರೇಖೆ**
**ದಾಟಿದರೆ ಅರ್ಥ**
**ಅನರ್ಥ!**

**-ಡಿ. ವಿ. ಬಡಿಗೇರ**

ಅವನಿಗೆ ಏನಾದರೂ ಕೊಟ್ಟುಬಿಡಿ ಎಂದರೆ ಇವರು ಕೇಳುವವರೇ? ಅಂತೂ ದಮ್ಮಯ್ಯ ಹಾಕಿ ಅವನಿಗೆ ಎರಡಾಣೆ ಕೊಡಿಸಿ ರೈಲು ಹೊರಡುವ ಮುಂಚೆ ಬಂದು ಸೇರಿದೆವು ಹಣದ ಪ್ರಶ್ನೆ ಅಲ್ಲ, ತತ್ವದ ಪ್ರಶ್ನೆ ಎಂದು ರೇಗುತ್ತಲೇ ಇದ್ದರು. ತತ್ವಕ್ಕೆ ಬೆಂಕಿ ಬಿತ್ತು! ಯಾವಾಗಲೂ 'ತತ್ವ'ಕ್ಕಾಗಿ ಬೇಡದ ಜಗಳ ಹೂಡುತ್ತಾರೆ. ಬಸ್ಸಿನಲ್ಲಿ ಅರಾದರೂ ಬೀಡಿ ಸೇದಿದರೆ ಅದು ಕಾನೂನು ವಿರುದ್ಧವೆಂದು ಅವರ ಆಕ್ಷೇಪ. ಕಂಡಕ್ಟರನೇ ಸುಮ್ಮನಿರುವಾಗ ನಿಮಗೆ ಯಾಕೆ ಅದರ ಚಿಂತೆ? ಅಂತ ನಾನು ವಾದಿಸಬೇಕು. ಕ್ಯೂ ನಿಂತಲ್ಲಿ ಬುದ್ಧಿವಂತರು ಕ್ಯೂ ಜಂಪ್ ಮಾಡಿ ಹೋದರೆ ಅದಕ್ಕೆ ಇವರ ತಡೆ! ಎಲ್ಲರೂ ಸುಮ್ಮನಿರುವಾಗ ಇವರಿಗೇಕೆ ಉಸಾಬರಿ? ಸ್ವಂತದ ಹಕ್ಕುಗಳಿಗಾಗಿ ಅಲ್ಲದೆ ಇತರರಿಗಾಗಿಯೂ ಕಲಹ. ಒಂದು ಸಲ, ಬಸ್ಸಲ್ಲಿ ಟಿಕೇಟು ಕೊಳ್ಳದಿದ್ದ ಪ್ರಯಾಣಿಕನ ವಿರುದ್ಧ ಕಂಡಕ್ಟರನ ಪಕ್ಷದಲ್ಲಿ ವಾದಿಸಿದರು. ಅವನು ಟಿಕೇಟು ಕೊಂಡನಂತರ ಕಂಡಕ್ಟರ್ ಅವನನ್ನು ಅವಾಚ್ಯವಾಗಿ ಬೈದದ್ದಕ್ಕೆ ಆ ಪ್ರಯಾಣಿಕನ ಪರವಾಗಿ ಹೋರಾಡಿದರು. ಅಂತೂ ಇಬ್ಬರಿಗೂ ಸಲ್ಲದವರಾದರು!

* * *

ಉಡುಪಿಯಲ್ಲಿ ಆದ ಅನುಭವದ ನಂತರ ಕೂಡ ಇವರಿಗೆ ಹುಬ್ಬಳ್ಳಿಯಲ್ಲಿನ ಆಫೀಸಿನ ಗೀಳು ಬಿಡಲಿಲ್ಲ. ಆಫೀಸಿಗೆ ಹೋದರೆ ಮನೆ ಪೂರ್ತಿ ಮರೆತುಹೋಗುತ್ತಿತ್ತು. ಒಂದು ಸಲ ನನಗೆ ಜ್ವರ ಬಂದಿತ್ತು. ಬೆಳಗ್ಗೆ ನನಗೆ ಒಂದಿಷ್ಟು ಗಂಜಿ ತೋರಿಸಿ, ಮಗು ಬೀದಿಗೆ ಹೋಗಬಾರದೆಂದು ಬಾಗಿಲು ಚಿಲಕ ಹಾಕಿ ಆಫೀಸಿಗೆ ಹೋದವರು ತಮ್ಮ ಮಧ್ಯಾಹ್ನದ ಊಟವನ್ನೂ ನನ್ನ ಜ್ವರವನ್ನೂ ಮರೆತೇ

ಕನ್ನಡಿಗರಿಗೆ ಕಸ್ತೂರಿಯ ಪರಿಮಳವನ್ನು ಹಂಚಿದ ಪಾ.ವೆಂ.ಆಚಾರ್ಯ ಜನಿಸಿ ಇಂದಿಗೆ ನೂರು ವರ್ಷಗಳು. ಈ ಪತ್ರಿಕಾ ತಪಸ್ವಿ ಈಗ ನೆನಪಾಗಿ ಕಾಡುತ್ತಾರೆ.

# ‘ಪದಾರ್ಥ ಚಿಂತಾಮಣಿ’ಗೆ ನೂರು ವರುಷ

ಪಾಡಿಗಾರು ವೆಂಕಟರಮಣಾಚಾರ್ಯ ನಾಡಿನ ಶ್ರೇಷ್ಠ ಲೇಖಕ, ಚಿಂತಕ-ಪತ್ರಿಕೋದ್ಯಮಿ. ಹೀಗೆ ಅವರ ಸಾಧನೆಗಳ ಪಟ್ಟಿ ಬೆಳೆಯುತ್ತಲೇ ಹೋಗುವುದು. ನೋಡಲು ಕೃಶಕಾಯ, ಆದರೆ ಅವರಲ್ಲಿದ್ದ ಪತ್ರಿಕೋದ್ಯಮದ ಪ್ರತಿಭೆ ಆಕಾಶದಗಲ. ಅವರ ಜೀವನ ದಂತಕಥೆಯೇ ಸರಿ. ಪತ್ರಿಕೋದ್ಯಮಕ್ಕೆ ಹೊಸ ದಿಗಂತ ಸೃಷ್ಟಿಸಿದ ‘ಪಾವೆಂ’ ಎಂಬ ಎರಡಕ್ಷರದಲ್ಲಿ ಅಪಾರ ಪ್ರತಿಭೆ ಅಡಗಿದೆ. ವಿಸ್ತಾರ ಓದು, ವೈವಿಧ್ಯಮಯ ಬರಹ ಅವರದ್ದು. ಬಹುಶ್ರುತತ್ವ ಅವರ ಕಾಯಕದ ವೈಶಿಷ್ಟ್ಯ.

ಮಾಸ್ತರಿಕೆ, ಕಾರಕೂನಿಕೆ, ಹೋಟೆಲಿನ ಬಿಲ್ ಬರೆಯುವಿಕೆ ಮುಂತಾದವುಗಳಲ್ಲಿ ಬದುಕಿನ ಅನಿವಾರ್ಯತೆಗಳಿಂದಾಗಿ ತೊಡಗಿಸಿಕೊಳ್ಳಬೇಕಾಯಿತು. ಕೊನೆಗೆ ಅವರು ಅಪ್ಪಿಕೊಂಡಿದ್ದು ಜರ್ನಲಿಸಂ. ಬಾಲ್ಯದಿಂದಲೂ ಕಿತ್ತು ತಿನ್ನುವ ಬಡತನದಲ್ಲಿಯೇ 1924ರಲ್ಲಿ ಹೈಸ್ಕೂಲು ಶಿಕ್ಷಣವೂ ಮುಗಿಯಿತು.ಪ್ರತಿಭಾನ್ವಿತ ವಿದ್ಯಾರ್ಥಿಯಾದ ಇವರು ಗಣಿತದಲ್ಲಿ ನೂರಕ್ಕೆ ನೂರು ಗಳಿಸಿದರು. 1942ರಲ್ಲಿ ಧಾರವಾಡಕ್ಕೆ ಪಯಣ. ಅಲ್ಲಿ ರಂಗರಾವ್ ಸೋದರರು ನಡೆಸುತ್ತಿದ್ದ ಧಾರವಾಡ ರೆಸ್ಟೋರೆಂಟ್‌ನದಲ್ಲಿ ಬಿಲ್ ರೈಟರರಾಗಿ ಕೆಲಸ ಆರಂಭ. ಅಲ್ಲಿ ಸಾಹಿತಿಗಳ ಮತ್ತು ಕಾಲೇಜು ವಿದ್ಯಾರ್ಥಿಗಳ ನೆಚ್ಚಿನ ‘ಚಿಟ್ ಮತ್ತು ಚಾಟ್’ ಕೇಂದ್ರ ಸ್ಥಳವಾಗಿತ್ತು. ರುಚಿರುಚಿಯಾದ ತಿಂಡಿ ತಿನಿಸುಗಳ ಜೊತೆಗೆ ಹರಟೆ ನಗೆ- ಹೀಗೆ ರಸಮಯ ಸನ್ನಿವೇಶಗಳು ಅನೇಕ. ಅದರಲ್ಲಿ ಪಾವೆಂ ಅವರ ಮಾತಿನ ವೈಖರಿ ಪ್ರತಿಭೆ ಅನಾವರಣ ಎಲ್ಲರನ್ನು ಸೆಳೆಯುತ್ತಿತ್ತು. ಅಲ್ಲಿ ಗೆಳೆಯರ ಬಳಗದ ಹಿರಿಯರಾದ ದ.ಬಾ.ಕುಲಕರ್ಣಿ, ಹೊಸಕೇರಿ ನಾರಾಯಣಾಚಾರ್ಯ, ಪಾಟೀಲ ಪುಟ್ಟಪ್ಪ ಅವರೊಡನೆ ಪಾವೆಂ ಚರ್ಚೆಯಲ್ಲಿ ಒಂದಾಗುತ್ತಿದ್ದರು.

ಇವರ ಆಳವಾದ ಅಧ್ಯಯನ ವಿಷಯ ವೈವಿಧ್ಯತೆಯ ಪ್ರಭುತ್ವ ಕಂಡು ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕ ಇವರನ್ನು ಕೈಮಾಡಿ ಕರೆಯಿತು. ಜಾಬ್ ವಿಭಾಗದಲ್ಲಿ ಇವರ ಮೇಲ್ವಿಚಾರಕತೆಯಲ್ಲಿ ಅದು ಸಾಕಷ್ಟು ಸುಧಾರಣೆ ಕಂಡಿತು. ನಂತರ ಅವರ ಸೇವೆ ಕರ್ಮವೀರಕ್ಕೆ ವರ್ಗಾವಣೆಗೊಂಡಿತು. ಕರ್ಮವೀರದಲ್ಲಿಯ ಅವರ ಹರಟೆಗಳು ‘ಲಾಂಗೂಲಾಚಾರ್ಯ’ ಎಂಬ ಹೆಸರಿನಿಂದ ಪ್ರಕಟಗೊಳ್ಳಹತ್ತಿದವು. ಇನ್ನನೇಕ ಲೇಖನಗಳು ರಾಧಾಕೃಷ್ಣ, ಪಾವೆಂ ಮುಂತಾದ ಹೆಸರಿನಿಂದ ಜನಪ್ರಿಯಗೊಂಡವು. 1956 ಸೆ. 23ರಂದು ಲೋಕಶಿಕ್ಷಣ ಪ್ರಕಟನೆಯಾಗಿ ಕಸ್ತೂರಿ ಡೈಜೆಸ್ಟ್ ರೂಪದಲ್ಲಿ ಪ್ರಥಮ ಸಂಚಿಕೆ ಹೊರಬಂದಿತು. ಆಗ ನಾನು ಪ್ರಾಥಮಿಕ ಶಾಲೆಯಲ್ಲಿ ಓದುತ್ತಿದ್ದೆ. ಅಥಣಿಯ ಏಜೆಂಟ್ ಹೆರಕಲ್ ಶಿನಾಪಾಚಾರಿಯವರು ಮನೆಯ ವರೆಗೂ ಬಂದು ‘ಇದನ್ನು ಓದು’ ಎಂದು ಕಸ್ತೂರಿ ಕೈಗಿತ್ತರು. ನಮ್ಮ ಮನೆಯ ಹಿತ್ತಲಲ್ಲಿ ಭಾವಿಯ ಕಟ್ಟೆಯ ಮೇಲೆ ಕುಳಿತು ಸಾಯಂಕಾಲದ ವರೆಗೂ ಓದಿ ಮುಗಿಸಿದೆ, ಅಷ್ಟೊಂದು ಆಕರ್ಷಣೀಯವಾಗಿತ್ತು. ಅಂದಿನಿಂದ ಇಂದಿನವರೆಗೂ ಸುಮಾರು ಎಲ್ಲ ಸಂಚಿಕೆಗಳನ್ನೂ ಓದಿದ್ದೇನೆ.

ಮೊದಲನೆಯ ಸಂಚಿಕೆಯಲ್ಲಿ ಅಂದವಾದ ಗೋಳಗುಮ್ಮಟದ ಚಿತ್ರವಿತ್ತು. ನೈಚ್ಯಾನುಸಂಧಾನ ಎದಿರಿಸುವ ಬಗೆ, ಬೊಜ್ಜಿಗೆ ಕಾಯಕಷ್ಟವೇ ಉತ್ತರ, ಇಸ್ರೇಲ್ ಕಾಲುವೆ ಯಾರದು? ಹೀಗೆ 59 ವರುಷಗಳ ಹಿಂದೆ ಓದಿದ ನೆನಪಿದೆ. ಮೊಹರೆ ಹಣಮಂತರಾಯರ ನಂತರ ಪಾವೆಂ ಕಸ್ತೂರಿ ಸಂಪಾದಕತ್ವದ ನೊಗ ಹೊತ್ತರು. ಅವರ ತಪಃಶ್ಶಕ್ತಿಯೆನ್ನಲ್ಲ ಅದಕ್ಕೆ ಧಾರೆ ಎರೆದರು. ಅದು ಉಚ್ಛ್ರಾಯ ಮಟ್ಟಕ್ಕೆ ಏರಿ ಕನ್ನಡಿಗರ ಪ್ರೀತಿಗೆ ಪಾತ್ರವಾಯಿತು. ಇದರ ಹಿನ್ನೆಲೆಯಲ್ಲಿ ಇದ್ದವರು ಜಿ.ಜಿ.ಹೆಗಡೆ, ಮಾಧವ ನಾ ಮಹಿಷಿ, ಕೆಬಿ ಕುಲಕರ್ಣಿ ಮುಂತಾದವರು.

ನನಗೆ ಹುಬ್ಬಳ್ಳಿ ಕೆಎಂಸಿಯಲ್ಲಿ ಎಂಬಿಬಿಎಸ್ ಪ್ರವೇಶ ದೊರೆತದ್ದರಿಂದ ಆಗಾಗ ಕಸ್ತೂರಿ ಕಚೇರಿಗೆ ಹೋಗುತ್ತಿದ್ದೆ. ಅದು ಪ್ರಯೋಗ ಶಾಲೆಯಂತೆ ಕಾಣುತ್ತಿತ್ತು. ತರಂಗದ ಸಂಪಾದಕರಾಗಿದ್ದ ಸಂತೋಷ ಕುಮಾರ ಗುಲ್ವಾಡಿಯವರು ಆಗ ಮುಂಬಯಿಯ ಸಿಂಗರ್ ಕಂಪನಿಯಲ್ಲಿ ಕೆಲಸ ಮಾಡುತ್ತಿದ್ದರು. ಅವರೂ ಅಲ್ಲಿಗೆ ಆಗಾಗ ಬರುತ್ತಿದ್ದರು. ಅವರ ಪರಿಚಯವಾಯಿತು. ನನ್ನ ವೈದ್ಯಕೀಯ ಓದಿನೊಡನೆ ಧಾರವಾಡದಲ್ಲಿ ವರಕವಿ ಬೇಂದ್ರೆ ಹಾಗೂ ಬಹುಶ್ರುತ ಪಾವೆಂ ಅವರ ಒಡನಾಟ ನನಗೆ ಅನೇಕ ವಿಧದಿಂದ ಬರವಣಿಗೆಗೆ ಉತ್ತೇಜನ ನೀಡಿತು. ಗುಲ್ವಾಡಿಯವರು ಒಂದು ಅತ್ಯುತ್ತಮ ಲೇಖನ ಬರೆದರು. ಅದು ‘ಕಣ್ಣು ಕಳೆದುಕೊಂಡೆ ಮತ್ತು ಪಡೆದುಕೊಂಡೆ’ ರೋಗಿಯ ಅನುಭವ ಕಸ್ತೂರಿಯಲ್ಲಿ ಪ್ರಕಟಗೊಂಡು ಪ್ರಸಿದ್ಧಿ ಪಡೆಯಿತು. ಅದರಂತೆ ನಾನು ‘ಕಳಚಿದ ಅಕ್ಷಿಪಟಲಕ್ಕೆ ಅಭಯ ಹಸ್ತ’ ಬರೆದೆ, ಅದು ಕೂಡ ಜನಮೆಚ್ಚುಗೆ ಪಡೆಯಿತು. ಅವರ ಸಂಪಾದಕತ್ವದಲ್ಲಿ ಕಸ್ತೂರಿ ಜನಪ್ರಿಯತೆಯ ಶಿಖರಕ್ಕೇರಿತು.



ದೇವರು ಇದ್ದಾನೆಯೆ? ಎಂಬ ರೋಚಕ ಚರ್ಚೆ, ‘ಫ್ರೀಡಮ್ ಎಟ್ ಮಿಡ್ ನೈಟ್’ ಅನುವಾದ, ಬ್ರಾಹ್ಮಣರು ಏನು ಮಾಡಬೇಕು ಎಂಬ ಲೇಖನಕ್ಕೆ ಚಂಪಾ ಬ್ರಾಹ್ಮಣರು ಏನು ಮಾಡಬಾರದು ಎಂಬ ಖಾರವಾದ ಉತ್ತರವಿತ್ತುದು, ಗುಲ್ವಾಡಿಯವರ ‘ಹೃದಯ ಚಿಕಿತ್ಸೆ ಮಾಡಿಸಿಕೊಂಡೆ’ ಎಂಬ ಅನುಭವದ ಲೇಖನ ಬರೆದುದು ನೆನಪಿದೆ. ಹೀಗೆ ನೂರಾರು ಲೇಖಕರನ್ನು ಕಸ್ತೂರಿ ಬೆಳಕಿಗೆ ತಂದಿತು. ನನ್ನ ವೈದ್ಯಕೀಯ ಅನುಭವದ ಅನೇಕ ಲೇಖನಗಳು ಸಾಲುಸಾಲಾಗಿ ಪ್ರಕಟಗೊಂಡವು. ಒಮ್ಮೆ ಅವರು ಲೇಖನ ಸಂಪಾದಿಸುವುದರಲ್ಲಿ ಮಗ್ನರಾಗಿದ್ದರು. ‘ಏನು ಮಾಡುತ್ತಿರುವಿರಿ?’ ಎಂದು ಕೇಳಿದಾಗ ಅವರ ಮಾರ್ಮಿಕ ಉತ್ತರ ‘ಲೇಖನದ ಒಳಗಿದ್ದ ಕಸ ತೂರಿ ಕಸ್ತೂರಿ ಮಾಡುತ್ತಿರುವೆ’ ಕಚೇರಿಗೆ ಬಂದಾಗಿನಿಂದ ಮರಳಿ ಹೋಗುವವರೆಗೂ ಬರೆಯುವ ಹಾಗೂ ತಪ್ಪು ತಿದ್ದುವ ಕಾಯಕದಲ್ಲಿ ನಿರತ.

1972ರಲ್ಲಿ ಅವರು ಬರೆದ ‘ಶಾಸನಬದ್ಧ ಗರ್ಭಪಾತ’ ಲೇಖನಕ್ಕೆ ನಾನು ಕುಟುಂಬ ಯೋಜನೆಯ ಕೆಲ ಸಂಗತಿಗಳನ್ನು ಸೇರಿಸಿದೆ. ಮುಂದೆ ಶಿರಸಿಯಿಂದ ಒಂದು ಕಾಗದ ಬಂದಿತು. ಹೆಂಡತಿಗೆ ಕುಟುಂಬ ಯೋಜನೆಯಾಗಿದೆ. ಇದ್ದ ಒಂದು ಮಗುವನ್ನು ಕಳೆದುಕೊಂಡು ದುಃಖಿತರಾಗಿದ್ದರು. ಆಚಾರ್ಯರು ಆ ಪತ್ರವನ್ನು ನನ್ನ ಕೈಗಿತ್ತರು. ಆಗ ಡಿಂಭನಾಳದ ಪುನರ್ಜೋಡಣೆ ಕರ್ನಾಟಕದಲ್ಲಿ ಮಾಡುತ್ತಿರಲಿಲ್ಲ. ನಾನು ಪ್ರಯತ್ನ ಪಟ್ಟು ಮುಂಬಯಿಯ ಒಬ್ಬ ಸರ್ಜನ್‌ರ ವಿಳಾಸವನ್ನು ಶಿರಸಿ ದಂಪತಿಗಳಿಗೆ ತಿಳಿಸಿದೆ. ಮುಂದೆ ಒಂದು ವರುಷದ ನಂತರ ನಾನು ಹೌಸ್‌ಸರ್ಜನ್ ಇದ್ದಾಗ ಒಂದು ಪತ್ರ ಬಂದಿತು. ಶಿರಸಿ ದಂಪತಿಗಳು ಮುಂಬಯಿಗೆ ಹೋಗಿ ಶಸ್ತ್ರ ಚಿಕಿತ್ಸೆ ಮಾಡಿಸಿಕೊಂಡ ನಂತರ ಪುನಃ ಗಂಡು ಮಗುವಾಗಿದೆ ಎಂಬ ಸಂತೋಷದ ಸಮಾಚಾರವಿತ್ತು. ಅದು ಕಸ್ತೂರಿಯ ಅಪರೂಪದ ಸೇವೆ.

ಪಾವೆಂ ವಿಡಂಬನೆ ಅದ್ಭುತವಾಗಿತ್ತು. ಅವರಿಗೆ ಅಸ್ತಮಾ ತೊಂದರೆ ಇತ್ತು. ಅದನ್ನೇ ಅವರು ‘ನನ್ನ ಅಸ್ತಮಾದ ರಜತ ಮಹೋತ್ಸವ’ ಎಂಬ ಲೇಖನದಲ್ಲಿ ಬರೆದರು. ತುಂಬ ಪ್ರಸಿದ್ಧಿ ಪಡೆಯಿತು. ಅದರಂತೆ ‘ನನ್ನ ಮಧುಮೇಹದ ರಜತ ಮಹೋತ್ಸವ’ ಎಂಬ ಲೇಖನ ಪ್ರಕಟಗೊಂಡಿತು. ನಾನು ಬರೆದ ಹಲವಾರು ಲೇಖನಗಳು ಪಾವೆಂ ಅವರ ಮಾರ್ಗದರ್ಶನದಿಂದ ನನ್ನನ್ನು ಲೇಖಕನಾಗಿ ರೂಪಿಸಿತು. ಪಾವೆಂ ಚಿಂತನೆಯ ಮೂಸೆ ಹಾಗೂ ವಿಶ್ಲೇಷಣೆಯ ಜಾಡು ನೋಡಬೇಕೆಂದರೆ ಅವರ ಪದಾರ್ಥ ಚಿಂತಾಮಣಿ ಎಂಬ ಅಂಕಣ ನೋಡಬೇಕು.ಅದು ಸರ್ವಕಾಲಿಕ ಆಧಾರವಾಗಬಲ್ಲ ಕೊಡುಗೆ.

ಹೀಗೆ ಸಾಹಿತ್ಯ- ವಿಜ್ಞಾನ- ಖಗೋಲಶಾಸ್ತ್ರ- ಸಂಖ್ಯಾಶಾಸ್ತ್ರ ಹೀಗೆ ಪಾವೆಂ ಅಧ್ಯಯನ ಮಾಡದೆ ಇರುವ ವಿಷಯಗಳಿಲ್ಲ. ಅವರ ಲೇಖನಿ ನವೋನವೋನ್ಮೇಷ ಶಾಲಿನಿ. ಪ್ರಮುಖವಾಗಿ ‘ರೀಡರ್ಸ್ ಡೈಜೆಸ್ಟ್’ನಂಥ ಮಾಸಪತ್ರಿಕೆ ಹೊರ ತರುವ ಶಕ್ತಿ ಕನ್ನಡಕ್ಕೂ ಇದೆ ಎಂಬುದನ್ನು ಸಾಬೀತುಪಡಿಸಿದ ಮಹಿಮರು. ನನ್ನ ನೆನಪಿನ ಖಜಾನೆಯಲ್ಲಿ ಅವರ ಒಡನಾಟದ ನೂರಾರು ನೆನಪುಗಳು ತುಂಬಿವೆ. ಅವರ ಮಂಜೂಷಾ ಪ್ರಬಂಧಗಳ ಸಂಕಲನ, ಪ್ರಹಾರ ಹರಟೆಟಗಳ ಸಂಕಲನ, ‘ಮಾನವ ಪ್ರವೃತ್ತಿ ಮತ್ತು ಮೌಲ್ಯಗಳು’ ವಿಷಯದ ಪುಟ್ಟ ಪುಸ್ತಕ ಇನ್ನೂ ಅನೇಕ ಮೌಲಿಕ ಕೃತಿಗಳು ಪ್ರಕಟಗೊಂಡು ಪ್ರಶಸ್ತಿಗೆ ಭಾಜನವಾದವು. ಅವರ ಅನನ್ಯ ಸೇವೆಯನ್ನು ಕಂಡು 1975ರಲ್ಲಿ ಗೋಯಂಕಾ ಪ್ರಶಸ್ತಿ, ಹುಬ್ಬಳ್ಳಿಮೂರು ಸಾವಿರ ಮಠದ ಸನ್ಮಾನ, 1977ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನಿಂದ ವಜ್ರ ಮಹೋತ್ಸವ ಪದಕ, 1977ರಲ್ಲಿ ಮಂಗಳೂರಲ್ಲಿ ನಡೆದ ಅಖಿಲ ಕರ್ನಾಟಕ ಕಾರ್ಯನಿರತ ಪತ್ರಿಕೋದ್ಯಮಿಗಳ ಸಮ್ಮೇಳನದಲ್ಲಿ ಪಿ.ಆರ್.ರಾಮಯ್ಯ ಪ್ರಶಸ್ತಿ, 1977ರಲ್ಲಿ ಸಾರ್ವಜನಿಕ ಸನ್ಮಾನ ಹಾಗೂ ‘ಪಾವೆಂ ಕಸ್ತೂರಿ’ ಎಂಬ ಸಂಭಾವನಾ ಗ್ರಂಥದ ಸಮರ್ಪಣೆ. 1981ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, 1981ರಲ್ಲಿ ಮೂಡುಬಿದರೆಯ ವರ್ಧಮಾನ ಪ್ರಶಸ್ತಿ, 1989ರಲ್ಲಿ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಸಂದವು.

ಇಂಥ ಸಮರ್ಪಿತ ಭಾವದ ಅನನ್ಯ ಪತ್ರಿಕಾಕರ್ತನಿಗೆ ಜೀವನದಲ್ಲಿ ದುರ್ಭರ ಪ್ರಸಂಗವೊಂದು ಬಂದೊದಗಿತು. ಒಮ್ಮೆ ರಕ್ತ ವಾಂತಿಯಾಯಿತು. ಹುಬ್ಬಳ್ಳಿಯ ಕೆಎಂಸಿ ಆಸ್ಪತ್ರೆಯಲ್ಲಿ ನನ್ನ ಗುರು ಡಾ.ರಘು ಶಸ್ತ್ರ ಚಿಕಿತ್ಸೆ ಮಾಡಿದರು. ಪುನಃ ಎರಡನೆಯ ಬಾರಿಯೂ ಶಸ್ತ್ರ ಚಿಕಿತ್ಸೆಯಾಯಿತು. ಎರಡು ತಿಂಗಳು ಆಸ್ಪತ್ರೆಯಲ್ಲಿದ್ದರು. ಜೀವನ್ಮರಣ ಹೋರಾಟದ ಮಧ್ಯೆ ಗೆದ್ದರು, ಗುಣಮುಖಗೊಂಡರು. ಅವರ ಮನೋಬಲ ಅವರನ್ನು ಗೆಲ್ಲಿಸಿತು. ಆ ಸನ್ನಿವೇಶದಲ್ಲಿಯೂ ಅವರ ಚೈತನ್ಯ ಉಡುಗಿರಲಿಲ್ಲ. ನಂತರ 1975 ಜನವರಿ 15ರಂದು ಕಸ್ತೂರಿ ಸಂಪಾದಕತ್ವದಿಂದ ನಿವೃತ್ತಗೊಂಡರು. ಹಲವಾರು ದಶಕ ವೈವಿಧ್ಯಮಯ ಸಾಹಿತ್ಯದ ಕಣಜ ತುಂಬಿದ ಈ ಮಹೋನ್ನತ ಜೀವಿ 1992 ಮೇ 4ರಂದು ವಿಧಿವಶರಾದರು. ಆದರೆ ಅವರು ಪತ್ರಿಕಾರಂಗದಲ್ಲಿ ಸೃಷ್ಟಿಸಿದ ಅನೇಕ ಹೊಸಹಾದಿಗಳು ಇಂದಿಗೂ ಮಾರ್ಗದರ್ಶಿಯಾಗಿವೆ.

**ಡಾ.ವಸಂತ ಅ.ಕುಲಕರ್ಣಿ**

ಲೇಖಕರು ಹಿರಿಯ ವೈದ್ಯರು

# ಸಾಪ್ತಾಹಿಕ ಸೌರಭ

■ saptahikasourabha80@gmail.com



ಪಾ. ವೆಂ. ಜನ್ಮಶತಮಾನೋತ್ಸವ ಸಮಾರಂಭವನ್ನು ಇಂದು ರವಿವಾರ 27ನೇ ಸೆಪ್ಟಂಬರರಂದು ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕ ಕಚೇರಿಯ ಆವರಣದಲ್ಲಿರುವ ಕಬ್ಬೂರ್ ಸಭಾಂಗಣದಲ್ಲಿ ಜರುಗಿಸಲಾಗುತ್ತಿದೆ. ಅಂದು ಬೆಳಿಗ್ಗೆ 10.30 ನಾಡೋಜ ಪಾಟೀಲ ಪುಟ್ಟಪ್ಪನವರು ಕಾರ್ಯಕ್ರಮ ಉದ್ಘಾಟಿಸಲಿದ್ದಾರೆ. ಲೋಕ ಶಿಕ್ಷಣ ಟ್ರಸ್ಟ್‌ನ ಧರ್ಮದರ್ಶಿ ಶ್ರೀ ಕೇಶವ ದೇಸಾಯಿ ಅವರು ಉಪಸ್ಥಿತರಿರುತ್ತಾರೆ. ಕನ್ನಡ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷೆ, ಕವಯಿತ್ರಿ ಪ್ರೊ. ಮಾಲತಿ ಪಟ್ಟಣಶೆಟ್ಟಿ ಅಧ್ಯಕ್ಷತೆ ವಹಿಸಲಿದ್ದಾರೆ. ಮಧ್ಯಾಹ್ನ 12 ಕ್ಕೆ ಕಸ್ತೂರಿ ಮಾಸ ಪತ್ರಿಕೆಯ ಪಾ.ವೆಂ. ಕುರಿತು ಡಾ. ಶ್ಯಾಮಸುಂದರ ಬಿದರಕುಂದಿ ಹಾಗೂ ವಿನೋದ ಸಾಹಿತಿ ಪಾ. ವೆಂ. ಕುರಿತು ಡಾ. ಪ್ರಜ್ಞಾ ಮತ್ತಿಹಳ್ಳಿ ಉಪನ್ಯಾಸ ನೀಡುವರು. ಮಧ್ಯಾಹ್ನ ಅವಧಿಯಲ್ಲಿ 2 ಗಂಟೆಗೆ ಪದಾರ್ಥ ಚಿಂತಾಮಣಿ ಪಾ. ವೆಂ ಹಾಗೂ ನನ್ನ ತಂದೆ ಪಾ. ವೆಂ ಕುರಿತು ಪ್ರೊ. ರಾಧಾಕೃಷ್ಣ ಆಚಾರ್ಯ ಮಾತನಾಡುವರು. ಡಾ. ಸರೋಜಿನಿ ಚವಲಾರ ಕಾರ್ಯಕ್ರಮವನ್ನು ಸಮನ್ವಯಿಸುವರು. ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು ಹಾಗೂ ಲೋಕ ಶಿಕ್ಷಣ ಟ್ರಸ್ಟ್ ಜಂಟಿಯಾಗಿ ಕಾರ್ಯಕ್ರಮ ಸಂಯೋಜಿಸಿದೆ.

## ಪದಾರ್ಥ ಚಿಂತಾಮಣಿ

# ವಿದ್ವತ್ ಶಿಖಾಮಣಿ



ಪಾ.ವೆಂ. ಆಚಾರ್ಯರು ಲಾಂಗೂಲಾಚಾರ್ಯ, ಪಿ.ವಿ. ಆಚಾರ್ಯ, ಪಾ.ವೆಂ ಹೆಸರುಗಳಿಂದ ಕನ್ನಡ ಪತ್ರಿಕಾ ಪ್ರಪಂಚದಲ್ಲಿ ಪ್ರಸಿದ್ಧಿ ಪಡೆದವರು. 5-6 ಮತ್ತು 7 ನೆಯ ದಶಕದಲ್ಲಿ ಪಾಡಿಗಾರು ವೆಂಕಟರಮಣ ಆಚಾರ್ಯ (1915-1992) ಒಬ್ಬ ಪ್ರೌಢ ಲೇಖಕ, ಕವಿ ಮತ್ತು ಬಹುಶೃತತ್ವದ ಪತ್ರಕರ್ತನಾಗಿ 50-80ನೇಯ ದಶಕಗಳಲ್ಲಿ ಮಾಡಿದ ಸಾಧನೆ ಉಲ್ಲೇಖಾರ್ಹವಾಗಿದೆ.

ಸಾಂಪ್ರದಾಯಿಕ ಬ್ರಾಹ್ಮಣ ಕುಟುಂಬದಲ್ಲಿ ಜನಿಸಿ ಮೆಟ್ರಿಕ್‌ವರೆಗೆ ಮಾತ್ರ ಶಿಕ್ಷಣ ಪಡೆದಿದ್ದ ಅವರು ತಮ್ಮ ಉದ್ಯೋಗ ಜೀವನದ ಮೊದಲ ಭಾಗದಲ್ಲಿ ಲೆಕ್ಕಿಗನಾಗಿ, ಕಾರಕೂನನಾಗಿ, ಹೋಟೆಲ್ ಬಿಲ್ ರೈಟರ್ ಆಗಿ ಕೆಲಸಗಳನ್ನು ಅವಲಂಬಿಸಬೇಕಾಯಿತು. ಪರಕೀಯರ ವಿರುದ್ಧ ಭಾರತದಲ್ಲಿ ಸ್ವಾತಂತ್ರ್ಯ ಚಳವಳಿ ಜರಗುತ್ತಿದ್ದುದಲ್ಲದೇ, ಜಗತ್ತಿನಾದ್ಯಂತ ಅಶಾಂತತೆ, ಅವ್ಯವಸ್ಥೆ ತಲೆದೋರಿದ್ದ 30-40ರ ದಶಕಗಳಲ್ಲಿ ಯಾವುದೇ ಪ್ರತಿಭಾವಂತ ವ್ಯಕ್ತಿ ಸ್ವತಂತ್ರವಾಗಿ ಬೆಳೆಯುವುದು ಕಠಿಣವಿತ್ತು. ಉಡುಪಿಯ ಧಾರ್ಮಿಕ, ಸಾಂಪ್ರದಾಯಿಕ ಪರಿಸರದಲ್ಲಿ ಅವರು ತಾರುಣ್ಯದಲ್ಲಿ ಸಂಸ್ಕೃತ, ಇಂಗ್ಲೀಷ ಗ್ರಂಥಗಳನ್ನು ಓದುವ, ಮನನ ಮಾಡಿಕೊಳ್ಳುವ ಪ್ರವೃತ್ತಿ ಬೆಳೆಸಿಕೊಳ್ಳುತ್ತ. ಲೇಖಕನಾಗಿಯೇ ಬದುಕುವ ಹಂಬಲವನ್ನು ಇಟ್ಟುಕೊಂಡವರು.

ಅಂದರೆ ತಮಗೆ ಅನಾಯಾಸವಾಗಿ ಆದಾಯ ಸಿಗುವಂತಿದ್ದ ಪೌರೋಹಿತ್ಯವೃತ್ತಿಯಿಂದ ವಿಮುಖರಾಗಿ ಆಧುನಿಕ ಚಲನಶೀಲ ಮನೋವೃತ್ತಿಯನ್ನು ಪಾ.ವೆಂ. ಬೆಳೆಸಿಕೊಂಡರು. ಅವರ ಸ್ವಾಧ್ಯಾಯ ಪ್ರಯತ್ನಗಳ ಫಲವಾಗಿ ಲೇಖಕ ಮತ್ತು ಕವಿಯಾಗಿ, ಕಥೆಗಾರನಾಗಿ ಆಗಿನ ನವಯುಗ ಸುಬೋಧಿನಿ, ಕೃಷ್ಣಸೂಕ್ತಿ, ರಾಷ್ಟ್ರಬಂಧು, ಕಂಠೀರವ, ನವಶಕ್ತಿ, ನವಯುಗ, ಅಂತರಂಗ, ಧುರೀಣ, ಜಯಕರ್ನಾಟಕ, ಪ್ರಬುದ್ಧ ಕರ್ನಾಟಕ ಪತ್ರಿಕೆಗಳಿಗಾಗಿ ಬರೆಯಲಾರಂಭಿಸಿ ಅವು ಪ್ರಕಟವಾದಂತೆ ತನ್ನದು ಸಾಹಿತ್ಯ ಜೀವನಮಾರ್ಗ ಎಂಬುದು ಮನದಟ್ಟಾಯಿತು.

ಪಾ.ವೆಂ. ಸಾಹಿತ್ಯ ರಚನೆಯೊಂದನ್ನು ಅವಲಂಬಿಸಿ ತಮ್ಮ ಸಂಸಾರ ರಥವನ್ನು ಎಳೆಯುವಂತಿರಲಿಲ್ಲ. ಮುಂದೆ 1942ರಲ್ಲಿ ಹುಬ್ಬಳ್ಳಿಗೆ ಬಂದು ಲೋಕ ಶಿಕ್ಷಣ ಟ್ರಸ್ಟ್‌ದ "ಸಂಯುಕ್ತ ಕರ್ನಾಟಕ" ಪತ್ರಿಕೆಗೆ ಸೇರಿದಾಗ ಅವರ ಬರಹ ವ್ಯವಸಾಯಕ್ಕೆ ಸರಿಯಾದ ನೆಲೆ ಸಿಕ್ಕಿತು. ಪತ್ರಿಕೆಯ ಮುದ್ರಣಾಲಯದ ವ್ಯವಸ್ಥಾಪಕ ಹುದ್ದೆಯಲ್ಲಿ ಇದ್ದರೂ ಅವರ ಓದು, ಬರಹಗಳು ಹವ್ಯಾಸವಾಗಿ ಮುಂದುವರಿದವು. ಬಹುಭಾಷಾ ಪರಿಣತಿ ಮತ್ತು ಸಂಸ್ಕೃತ ನುಡಿಯ ಮನೋಗತ ತಂದೆಯವರಿಂದಾಗಿ ಮನೆಯಿಂದಲೇ ಕರಗತವಾಗಿತ್ತು. ಇಂಗ್ಲೀಷ ವ್ಯಾಪಕ ಓದಿನಿಂದ ಇವರ ಚಿಂತನ ಪ್ರವೃತ್ತಿಗೆ ಹೊಸ ಚಾಲನೆ ದೊರಕಿತು. ರಾಷ್ಟ್ರ ಭಾಷೆ ಪ್ರವೀಣರಾಗಿದ್ದರು. ಬಂಗಾಳಿಯನ್ನು ಸ್ವಯಾಸಕ್ತಿಯಿಂದ ಕಲಿತರು. ಓದುವ ಹವ್ಯಾಸ ವ್ಯಾಪಕವಾಗಿತ್ತು. ಆಳವೂ-ಎತ್ತರದ್ದು ಆಗಿತ್ತು. ಹೀಗೆ ಪುಸ್ತಕಗಳಿಂದ ಸಾಹಿತ್ಯ ಜ್ಞಾನ, ಭಾಷಾಜ್ಞಾನ ಮತ್ತು ಸಾಮಾಜಿಕ - ರಾಜಕೀಯ ಜ್ಞಾನಗಳನ್ನು ಸಂಗ್ರಹಿಸುತ್ತ ಒಬ್ಬ ಸ್ವಯಂ ಸಂಪನ್ಮೂಲ ವ್ಯಕ್ತಿಯಾಗಿ ಪಾ.ವೆಂ. ಬೆಳೆದರು. ಸಂಯುಕ್ತ ಕರ್ನಾಟಕ, ಕರ್ಮವೀರ ವಾರ ಪತ್ರಿಕೆಗಳಲ್ಲಿ ಅವರು ಅನಾಮಧೇಯವಾಗಿ ಬೇರೆ ಬೇರೆ ಕಾಲಂಗಳಲ್ಲಿ ಬರೆದು ತುಂಬುತ್ತಿದ್ದರು. ಇದು ಪಾ.ವೆಂ. ಅವರ ಸ್ವಯಂಪ್ರೇರಿತ ಬರಹದ ರೀತಿ, ಆತ್ಮಾಭಿವೃದ್ಧಿಯ ಪ್ರಯತ್ನ ಅವರ ಈ ಬರಹಗಳ ಸೇವೆ 1956ರಲ್ಲಿ ಕಸ್ತೂರಿಯ ಮೂಲ ಬಂಡವಾಳ ಇದಾಯಿತು. "ಕಸ್ತೂರಿಯ ಆಚಾರ್ಯ" ಎಂಬ ಅನ್ವರ್ಥಕ ನಾಮದಿಂದ ಪ್ರಸಿದ್ಧರಾದುದು ಅವರ ಅಸಾಧಾರಣ ಬೌದ್ಧಿಕಶ್ರಮ, ಸಮಯ ಪ್ರಜ್ಞೆ ಮತ್ತು ವೈಯಕ್ತಿಕ ಸಾಧನೆಗಳಿಂದ. ಕರ್ನಾಟಕದ ಪತ್ರಿಕೋದ್ಯಮದಲ್ಲಿ "ಕಸ್ತೂರಿ" ಒಂದು ಅಪೂರ್ವ ಡೈಜೆಸ್ಟ್ ಆಗಿ ಪಡೆದ ಜನಪ್ರಿಯತೆಯನ್ನು ಉಳಿಸಿಕೊಂಡ ಮೇಲ್ಮಟ್ಟದ ಗುಣಶೀಲತೆ ಇಂದಿಗೂ ಒಂದು ದಾಖಲೆ.




ಕಸ್ತೂರಿಗಳಿಗಾಗಿ ಅವರು ಬರೆದ ಲೇಖನಗಳು ಸಾಂದರ್ಭಿಕವೂ ಆಗಿವೆ. ಅವರ ಗದ್ಯ ಸಾಹಿತ್ಯ ರಚನೆ "ರಷ್ಯಾದ ರಾಜ್ಯಕ್ರಾಂತಿ" ಎಂಬ ಪುಸ್ತಕದಿಂದ ಪ್ರಾರಂಭವಾಯಿತು. 1952ರಲ್ಲಿ 'ನವನೀರದ' ಮೊದಲ ಕವನ ಸಂಕಲನ, ಕೆಲವು ಪದ್ಯಗಳು ಎರಡನೇ ಕವನ ಸಂಕಲನಗಳನ್ನು ರಚಿಸಿದ್ದಾರೆ. 1981ರಲ್ಲಿ 'ಬಯ್ಯಮಲ್ಲಿಗೆ' ತುಳು ಕವನ ಸಂಕಲನ ಪ್ರಕಟವಾಗಿದೆ. ಪಾ.ವೆಂ. ಅವರ ವಿಚಾರ ಪ್ರಧಾನ ಹೃದ್ಯಭಾವ ಜೀವನ ಪ್ರತಿಕ್ರಿಯೆಗಳಾಗಿ ಈ ತುಳು ಪದ್ಯಗಳಿವೆ. ಪಾ.ವೆಂ. ಅವರ ಕಥಾಸಂಕಲನ 2002ರಲ್ಲಿ 'ಹಿಂದೂ ಮುಸ್ಲಿಂ ಮತ್ತು ಇತರ ಕಥೆಗಳು' (ಮರಣೋತ್ತರದಲ್ಲಿ) ಶ್ರೀನಿವಾಸ ಹಾವನೂರರು ಸಂಪಾದಿಸಿದ್ದಾರೆ. ಮಾನವ ಪ್ರವೃತ್ತಿ ಮತ್ತು ಮೌಲ್ಯಗಳು (1980)ರಲ್ಲಿ ಚಿಂತನಪರ ಬರಹ, 1985 ರಲ್ಲಿ ಪಾ.ವೆಂ. ಕಂಡಂತೆ ಡಾ. ಶಂಬಾ (ವಿಚಾರ ವಿಶ್ಲೇಷಣೆ) 1992 ರಲ್ಲಿ (ರಾಜಕೀಯ ಚಿಂತನ) "ಮಂಜೂಷ" ಕೃತಿಯನ್ನು ರಚಿಸಿದ್ದಾರೆ. 1975 ರಲ್ಲಿ 'ಸ್ವತಂತ್ರ ಭಾರತ' (ಚಿಂತನ ಬರಹ) ರಚನೆಯಾಯಿತು.

ಸ್ವಭಾವತಃ ಹಾಸ್ಯ ಪ್ರಜ್ಞೆಯ ಅವರು ವ್ಯಂಗ್ಯ ವಿಡಂಬನ ನೋಟದ ಹರಟೆ-ನಗೆ ಲೇಖನಗಳನ್ನು ಬರೆದು ಲಾಂಗೂಲಾಚಾರ್ಯರಾಗಿ ಓದುಗ ವರ್ಗಕ್ಕೆ ಪ್ರಿಯರೂ ಆಗಿದ್ದರು. 1) 'ಪ್ರಹಾರ' (ನಗೆಬರಹ) (1965) 2) 'ವಿಪರೀತ' ನಗೆಬರಹಗಳು (1977) 3) 'ವಕ್ರದೃಷ್ಟಿ' (1990) 4) 'ಲೋಕದ ಡೊಂಕು' (1976) ರಲ್ಲಿ ಪ್ರಕಟಿಸಿದ್ದಾರೆ. ಸಂಸ್ಕೃತ ಸುಭಾಷಿತಗಳ ಕನ್ನಡಾನುವಾದ 'ಸುಭಾಷಿತ ಚಮತ್ಕಾರ' ಇವು ಪಾ.ವೆಂ. ಅವರ ಭಾಷಾಂತರ ಕೃತಿಗಳು.

ಪಾ.ವೆಂ. ಸಹಜವಾಗಿ ಭಾಷೆ ಪ್ರಾವೀಣ್ಯ ಹೊಂದಿದ್ದರಿಂದ ಪದಗಳ ಜಗತ್ತಿನಲ್ಲಿ ವಿವರಿಸುವ ವೃತ್ತಿಯನ್ನು ಬೆಳೆಸಿಕೊಂಡರು. ಆಚಾರ್ಯರಿಗಿದ್ದ ಆಸಕ್ತಿ ಕುತೂಹಲಗಳ ಸ್ವಭಾವದಿಂದಾಗಿ ಭಾಷಾಭ್ಯಾಸದ ಪ್ರವೃತ್ತಿ ಸಾಕಷ್ಟು ಬೆಳೆದು 1991ರಲ್ಲಿ 'ಪದಾರ್ಥ ಚಿಂತಾಮಣಿ' ಕೃತಿ ಪ್ರಕಟವಾಯಿತು.

ಈ ಕೃತಿಗೆ ನುಡಿನಮನವನ್ನು ಬರೆದ ಹಾ.ಮಾ. ನಾಯಕರು ಆಚಾರ್ಯರ ಈ ಅಧ್ಯಯನಕ್ಕೆ ಪದಪರಂಪರೆ (World) ಎಂದು ನಾಮಕರಣ ಮಾಡಿದ್ದಾರೆ. ಇದು ಕನ್ನಡ ಮೊದಲನೆಯ ಜನಪ್ರಿಯ ಪ್ರಯತ್ನ.

ಅವರ ಬರಹಗಳು ಕನ್ನಡಕ್ಕೆ ವಿಶೇಷ ಮತ್ತು ವೈವಿಧ್ಯಮಯ ವಸ್ತು, ವಿಚಾರ ಶೈಲಿಯನ್ನು ಕೊಟ್ಟಿವೆ. ಅವರ ಈ ಸ್ವತಂತ್ರ ಸಾಹಿತ್ಯ ಅವರ ಪ್ರತಿಭೆ-ಪರಿಶ್ರಮಗಳ ಬರಹಗಾರನ 'ಸವ್ಯಸಾಚಿತ್ವವನ್ನು' ಪ್ರಕಟಪಡಿಸುವಂತಿದೆ.

ಪಾ.ವೆಂ. ಅವರು ಅನುಭವದಿಂದ ಭಾಷಾತಜ್ಞರೂ ಆಗಿದ್ದಾರೆ. ಸ್ವಾತಂತ್ರ್ಯಪೂರ್ವದ ನವೋದಯ ಸಂಪ್ರದಾಯ, ರಾಷ್ಟ್ರೀಯ ಚಳವಳಿಕಾರರ ಪ್ರಗತಿಶೀಲ ಸಾಹಿತ್ಯ, ಸ್ವಾತಂತ್ರ್ಯೋತ್ತರದ ನವ್ಯಸಾಹಿತ್ಯ ಹಾಗೂ ಅದನ್ನು ಅನುಸರಿಸಿಬಂದ ಸಾಮಾಜಿಕ ಪ್ರಜ್ಞೆಯ ಬಂಡಾಯ-ದಲಿತ ಸಾಹಿತ್ಯ ಪ್ರವೃತ್ತಿಗಳೊಂದಿಗೆ ಪಾ.ವೆಂ. ಅವರದು ನಿಕಟ ಸಂಬಂಧ.

ಅವರ ದೇಹಕ್ಕೆ ವಯಸ್ಸು ಆಗುತ್ತಿತ್ತೇ ಹೊರತು ಅವರ ಮನಸ್ಸು ಎಂದೂ ಕಳೆಗುಂದಲಿಲ್ಲ. ವಿಚಾರವಂತಿಕೆಯಂತೂ ಜಡವಾಗಲಿಲ್ಲ. ಸಾವಿನ ಹಿಂದಿನ ದಿನದವರೆಗೂ ಪತ್ರಿಕೆಗಳಿಗಾಗಿ ಬರೆಯುತ್ತಿದ್ದರು. ಅವರ ಈ ಸಾಹಿತ್ಯದ ಸಾಧನೆಯನ್ನು ಪ್ರಜ್ಞಾವಂತರ ವಲಯ ವಿರಳವಾಗಿ ಗುರುತಿಸಿದೆ. ಸಾಂದರ್ಭಿಕವಾಗಿ ಮನ್ನಿಸಿದೆ. ಅವರಿಗೆ ಕೊನೆಗಾಲದಲ್ಲಿ

ರಾಷ್ಟ್ರಮಟ್ಟದ ಪ್ರತಿಷ್ಠಿತ ಗೋಯಂಕಾ ಪ್ರಶಸ್ತಿ (1992) ಬಂದದ್ದು ಒಂದು ಔಚಿತ್ಯಪೂರ್ಣ ಮನ್ನಣೆಗಳಲ್ಲಿ ಒಂದು.

■ ಸರ್ವಮಂಗಳಾ. ಪಿ. ಆರ್. ಹುಬ್ಬಳ್ಳಿ.

9481601926

ಪಾ.ವೆಂ. ಸಹಜವಾಗಿ ಭಾಷೆ ಪ್ರಾವೀಣ್ಯ ಹೊಂದಿದ್ದರಿಂದ ಪದಗಳ ಜಗತ್ತಿನಲ್ಲಿ ವಿವರಿಸುವ ವೃತ್ತಿಯನ್ನು ಬೆಳೆಸಿಕೊಂಡರು. ಆಚಾರ್ಯರಿಗಿದ್ದ ಆಸಕ್ತಿ ಕುತೂಹಲಗಳ ಸ್ವಭಾವದಿಂದಾಗಿ ಭಾಷಾಭ್ಯಾಸದ ಪ್ರವೃತ್ತಿ ಸಾಕಷ್ಟು ಬೆಳೆದು 1991ರಲ್ಲಿ 'ಪದಾರ್ಥ ಚಿಂತಾಮಣಿ' ಕೃತಿ ಪ್ರಕಟವಾಯಿತು. ಅವರ ಬರಹಗಳು ಕನ್ನಡಕ್ಕೆ ವಿಶೇಷ ಮತ್ತು ವೈವಿಧ್ಯಮಯ ವಸ್ತು, ವಿಚಾರ ಶೈಲಿಯನ್ನು ಕೊಟ್ಟಿವೆ. ಅವರ ಈ ಸ್ವತಂತ್ರ ಸಾಹಿತ್ಯ ಅವರ ಪ್ರತಿಭೆ-ಪರಿಶ್ರಮಗಳ ಬರಹಗಾರನ 'ಸವ್ಯಸಾಚಿತ್ವವನ್ನು' ಪ್ರಕಟಪಡಿಸುವಂತಿದೆ.



# ಪತ್ರಿಕಾ ಸಂಗ್ರಹಣೆ

# ಮಂ. ಅ. ವೆಂಕಟೇಶ್

ವಿಳಾಸ : ನಂ.140/ಸಿ, 13ನೇ ಮುಖ್ಯ ರಸ್ತೆ, 3ನೇ ಬ್ಲಾಕ್ ಪೂರ್ವ, ಜಯನಗರ, ಬೆಂಗಳೂರು -11. ದೂರವಾಣಿ : 22447322

ಪಾ.ವೆಂ. ಜನ್ಮದಿನೋತ್ಸವ

ಜನವರಿ 17, 18ರಂದು ದಕ್ಷಿಣ ಕನ್ನಡ ಜಿಲ್ಲೆಯ ಮೂಲ್ಕಿಯಲ್ಲಿ ನಡೆಯುವ ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪಾ. ವೆಂ. ಆಚಾರ್ಯರು ಕನ್ನಡ ಪತ್ರಿಕಾ ಲೋಕದ ಜನಪ್ರಿಯ 'ಕಸ್ತೂರಿ' ಡೈಜೆಸ್ಟ್‌ನ ಸಂಪಾದಕರಾಗಿ ದೀರ್ಘಕಾಲದ ಸೇವೆ ಸಲ್ಲಿಸಿ ಖ್ಯಾತರಾದವರು. ಪತ್ರಿಕೆಯಿಂದ ನಿವೃತ್ತರಾದ ಆಚಾರ್ಯರು ತಮ್ಮ ಲೇಖನಿಗೆ ವಿಶ್ರಾಂತಿ ನೀಡಿಲ್ಲ. ಪತ್ರಿಕೆ, ಪತ್ರಕರ್ತ ಮತ್ತು ಪತ್ರಿಕೋದ್ಯಮ – ಇವು ಹೇಗಿರಬೇಕು? ಹೇಗಿರಬಾರದು? ಎನ್ನುವುದನ್ನು ಪಾ.ವೆಂ. ಇಲ್ಲಿ ವಿವರಿಸಿದ್ದಾರೆ. 'ತರಂಗ' ಆಚಾರ್ಯರ ಮುಂದೆ ಇರಿಸಿದ ಪ್ರಶ್ನೆಗಳಿಗೆ ಅವರು ತಮ್ಮ ಅನುಭವದ ನೆಲೆಯಲ್ಲಿ ಉತ್ತರಿಸಿದ್ದಾರೆ.



"ಪತ್ರಿಕಾ ರಂಗ ಪ್ರಬುದ್ಧತೆಯ ಕಡೆ ಸಾಗುತ್ತಿದೆ"

– ಪಾ.ವೆಂ.

**ಪಾ. ವೆಂ :** ಪತ್ರಿಕಾರಂಗದಲ್ಲಿ ನನಗಾದ ಸಾರ್ಥಕತೆಯರ ಅನುಭವಗಳಲ್ಲಿ ಲೇಖಕರ ಮತ್ತು ಓದುಗರನೇಕು ಶಾಶ್ವತ ಸ್ನೇಹ ಮುಖ್ಯವಾದದ್ದು. ಆದರೂ ಒಂದೇ ಒಂದು ಸಾರ್ಥಕತೆಯ ಅನುಭವ ಹೇಳಬೇಕಿದ್ದರೆ ಒಬ್ಬ ಓದುಗನ ಮುರುಟಿ ಹೋದ ಜೀವನಕ್ಕೆ ಚಿಗುರು ಬರಿಸಲು ನೆರವಾದದ್ದು. ಉತ್ತರ ಕನ್ನಡದ 'ಕಸ್ತೂರಿ' ಓದುಗರೊಬ್ಬರು ಸಂತತಿ ನಿಯಂತ್ರಣಕ್ಕಾಗಿ ವ್ಯಾಸೆಕ್ಟಮಿ ಮಾಡಿಸಿಕೊಂಡಿದ್ದರು. ಅದಾದ ಕೆಲ ಕಾಲಾನಂತರ ಅವರ ಏಕಮಾತ್ರ ಪುತ್ರ ಅಪಘಾತದಲ್ಲಿ ಊನನಾದ. ದಂಪತಿಗಳಿಬ್ಬರೂ ಹುಚ್ಚು ಹಿಡಿಯುವಷ್ಟು ನಿರಾಶರಾದರು. ಈ ವೇಳೆಗೆ ನಾನು ಆದೇ ಹೊಸದಾಗಿ ಮುಂಬಯಿಯ ಡಾ। ಫಡಕೆಯವರು ರೂಪಿಸಿದ್ದ ವೀರ್ಯನಾಳ ಪುನರ್ಜೋಡಣೆಯ ಶಸ್ತ್ರಕ್ರಿಯೆಯ ಬಗ್ಗೆ ವಿವಿಧ ವೈದ್ಯಕೀಯ ಪತ್ರಿಕೆಗಳಿಂದಲೂ ಸ್ವತಃ ಡಾಕ್ಟರ್ ಫಡಕೆಯವರಿಂದಲೂ ವಿಷಯ ಸಂಗ್ರಹಿಸಿ ಒಂದು ಆಶಾದಾಯಕ ಲೇಖನ ಪ್ರಕಟಿಸಿದೆ. ಅದನ್ನೋದಿ ಮೇಲೆ ಹೇಳಿದ ಓದುಗರು ನನಗೆ ಬರೆದರು. ನಾನು ಪುನಃ ಡಾ. ಫಡಕೆಯವರಿಗೆ ಬರೆದು ಹೆಚ್ಚು ವಿವರ ಸಂಪಾದಿಸಿ ಹುಬ್ಬಳ್ಳಿಯ ಸರ್ಜನ್ನರೊಬ್ಬರೊಡನೆ ಮಾತಾಡಿ ಆ ಸಂತ್ರಸ್ತ ಓದುಗರಿಗೆ ಸಲಹೆ ಕಳಿಸಿದೆ. ಆ ಓದುಗರು ಆ ಸರ್ಜನ್ನರಿಂದಲೇ ಪುನರ್ಜೋಡಣೆಯ ಶಸ್ತ್ರಕ್ರಿಯೆ ಮಾಡಿಸಿಕೊಂಡರೆಂದೂ ಪುನಃ ಮಕ್ಕಳಾದವೆಂದೂ ಅವರಿಂದಲೇ ಅನೇಕ ಕಾಲದ ನಂತರ ಪತ್ರ ಬಂದಾಗ ಪತ್ರಿಕೆಯ ಮೂಲಕ ಇಂಥ ಒಂದು ಉಪಕಾರವೂ ಸಾಧ್ಯವಿದೆಯಲ್ಲ ಎಂದು ಸಮಾಧಾನವಾಯಿತು.

**ಪಾ. ವೆಂ :** ಆರೋಪ ಶುದ್ಧಾತ್ಮನಾ ಸುಳ್ಳೆನ್ನಲಾಗದು. ಪತ್ರಿಕಾಕರ್ತರು ಕೂಡ ಈ ದೇಶದ ಗಾಳಿ ನೀರುಂಡು ಬೆಳೆದವರೇ. ಈ ದೇಶದಲ್ಲಿ ರಾಜಕೀಯದ ಬಗ್ಗೆ ಇರುವ ಅನಾರೋಗ್ಯಕರ ಆಸಕ್ತಿಯಿಂದ ಪತ್ರಿಕಾಕರ್ತರೂ ಮುಕ್ತರಲ್ಲ. ಜನರ ಬೇಡಿಕೆಗೆ ತಕ್ಕ ಪೂರೈಕೆ ಆಗುತ್ತಿದೆ ಅಷ್ಟೇ. ಎತ್ತಿಕಟ್ಟುವ - ಇಳಿಸುವ ಮಾತು ಪತ್ರಿಕಾ ಪ್ರಭಾವಗಳಿಗೆ ಸಲ್ಲದ ಮಹತ್ವ ಕೊಡುತ್ತದೆಂದು ನನಗೆ ತೋರುತ್ತದೆ. ವಿ. ಕೆ. ಕೃಷ್ಣಮೆನನ್ನರು ಮುಂಬಯಿಯ ಪತ್ರಿಕೆಗಳ ಸಾರ್ವತ್ರಿಕ ವಿರೋಧವನ್ನು ಕಡೆಗಣಿಸಿ ಚುನಾವಣೆ ಗೆದ್ದು ಬಂದದ್ದನ್ನು ನೆನೆದುಕೊಳ್ಳಿ. ಪತ್ರಿಕೆಗಳನ್ನು ಬೈಯುವುದು ಗ್ರಹಗಳನ್ನು ಬೈಯುವಂತೆಯೇ ಆಟದಲ್ಲಿ ಸೋತವರ ನೆವನ. ಜನರ ಆಸಕ್ತಿ ಬದಲಾದರೆ ಪತ್ರಿಕೆಗಳೂ ಬದಲಾಗದೆ ಇರವು.

**ಪಾ. ವೆಂ :** ಜನ ತಿಳಿದುಕೊಂಡಷ್ಟಲ್ಲದಿದ್ದರೂ ಇದರಲ್ಲಿಯೂ ತಥ್ಯಾಂಶ ಇದೆ. ಆದರೆ ಇದು ಪತ್ರಿಕಾಕರ್ತರ ವಿಶೇಷ ರೋಗವಲ್ಲ. ಈ ದೇಶದಲ್ಲಿ ಪ್ರಧಾನಮಂತ್ರಿಯಿಂದ ಚಪರಾಸಿಯವರೆಗೆ ಯಾರೊಬ್ಬರೂ ರೂಬರೂಬು ಕಾಣಿಸುವ ತಪ್ಪನ್ನೂ ಒಪ್ಪಲು ಸಿದ್ಧರಿಲ್ಲ. ಒಪ್ಪದಿದ್ದರೆ ತಪ್ಪು ತಪ್ಪೇ ಅಲ್ಲ! ನನ್ನ ವ್ಯಾಖ್ಯಾನ: ಒಂದು, ಈ ದೇಶ ನೈಚ್ಯಾನುಸಂಧಾನದಿಂದ ಬಳಲುತ್ತಿದೆ; ಎರಡು, ಪತ್ರಿಕಾಕರ್ತರು ಅತಿಮಾನವರಲ್ಲ.

**ಪಾ. ವೆಂ :** ರಂಗಭೂಮಿ, ಸಿನೆಮಾ, ಕಲೆಗಳ ಬಗ್ಗೆ ನನಗೆ ಗೊತ್ತಿರುವುದು ಸೊನ್ನೆಗಿಂತ ಬಹಳ ಹೆಚ್ಚಿಲ್ಲ. ಆದರೆ ನಾನು ಪತ್ರಿಕಾರಂಗ ಪ್ರವೇಶಿಸುವಾಗ ಇದ್ದದ್ದಕ್ಕಿಂತ ಈಗ ಈ ಕ್ಷೇತ್ರದಲ್ಲಿ ತಿಳಿದು ಮಾಡುವ ವಿಮರ್ಶೆ ಹೆಚ್ಚಾಗಿದೆ ಎಂದೇನು. ಅದಕ್ಕೆ ದೊರೆಯುವ ಸ್ಥಳವೂ ಹೆಚ್ಚಾಗಿದೆ. ಉದಾಹರಣೆಗೆ ನಿಮ್ಮ ಗುಂಪಿನ ಪತ್ರಿಕೆಗಳಲ್ಲಿ ಪ್ರಬುದ್ಧ ಸಂಗೀತ ವಿಮರ್ಶೆ ಬರುತ್ತಿದೆ. ರಂಗ ವಿಮರ್ಶೆಯೂ ಹೆಚ್ಚಿನ ಪತ್ರಿಕೆಗಳಲ್ಲಿ ಒಳ್ಳೇ ಮಟ್ಟದಲ್ಲಿ ಕಾಣಿಸಿಕೊಳ್ಳುತ್ತಿದೆ.

**ಪಾ. ವೆಂ :** ಎಲ್ಲ ವಿಷಯಗಳಲ್ಲಿ ಅಲ್ಲದಿದ್ದರೂ ಕನ್ನಡ ಪತ್ರಿಕಾರಂಗ ಪ್ರಬುದ್ಧತೆಯ ಕಡೆ ಸಾಗುತ್ತಿದೆ. ತಾಂತ್ರಿಕ ವಿಷಯದಲ್ಲಿ ಅಂದರೆ ಉತ್ಪಾದನೆ, ಡಿಸೈನ್ ಇತ್ಯಾದಿಗಳಲ್ಲಿ ಹೆಚ್ಚಿನ ದೈನಿಕಗಳೂ ವಾರ, ಮಾಸಿಕ ಪತ್ರಿಕೆಗಳೂ ಆಧುನಿಕವಾಗುತ್ತಿವೆ. ಜನರ ಅಭಿರುಚಿಗಳನ್ನು ಗುರುತಿಸಿ ಅವುಗಳಿಗೆ ಸಮಾಧಾನಕರ ಅನ್ನವೊದಗಿಸುವ ಪ್ರಯತ್ನಗಳಾಗುತ್ತಿವೆ. ಒಟ್ಟಿನಲ್ಲಿ ಕನ್ನಡ ಪತ್ರಿಕೋದ್ಯಮ ಹೆಚ್ಚು ವೃತ್ತಿಪರವಾಗುತ್ತಿದೆ. ಆದರೆ ಅಭಿರುಚಿಗಳನ್ನು ಸೃಷ್ಟಿಸುವ ಪ್ರಯತ್ನಗಳು ಸಾಲವು ಎನಿಸುತ್ತಿದೆ. ಕನ್ನಡ ಓದುಗರ ಜೀರ್ಣಶಕ್ತಿ ಇಂಗ್ಲಿಷ್ (ದೇಶೀಯ) ಪತ್ರಿಕೆಗಳ ಪಾಠಕರ ಜೀರ್ಣಶಕ್ತಿಗಿಂತ ಕಡಿಮೆ ಇಲ್ಲ ಎಂಬ ವಿಶ್ವಾಸದಿಂದ ಸಾಮಾಜಿಕ, ಆರ್ಥಿಕ, ವೈಜ್ಞಾನಿಕ, ತಾತ್ವಿಕ ಮೊದಲಾದ ವಿಷಯಗಳಲ್ಲಿ ಕೃಷಿ ಆಗಬೇಕು. ಯಾರು ಯಾರು ಏನೇನು ಮಾಡಬೇಕೆಂದರೆ –

ಅ) ಓದುಗರು - ಕನ್ನಡ ಪತ್ರಿಕೆಗಳಲ್ಲಿ ಇಂಗ್ಲಿಷ್ ಮಟ್ಟವನ್ನು ನಿರೀಕ್ಷಿಸಬೇಕು – ಅದಕ್ಕೆ ಒತ್ತಾಯ ತರಬೇಕು.

ಆ) ಲೇಖಕರು – ಅದೂ ಆಧುನಿಕ 'ವಿಚಾರ ಸಾಹಿತ್ಯ' ನಿರ್ಮಿತಿಯಲ್ಲಿ ಹೆಚ್ಚು ಆಸಕ್ತಿ ವಹಿಸಿ ತಾವು ಇಂಗ್ಲಿಷ್ ಲೇಖಕರಿಗೆ ಕಡಿಮೆಯಲ್ಲವೆಂದು ಸಿದ್ಧಪಡಿಸಬೇಕು.

ಇ) ಮಾಲಿಕರು – ಇದೂ ಒಂದು 'ಉದ್ಯಮ' ಅಥವಾ 'ಕೈಗಾರಿಕೆ'ಯೆಂದು ತಿಳಿದು ಅದನ್ನು ಲಾಭದಾಯಕ ಸ್ತರದಲ್ಲಿ ನಡೆಸಲು ಯತ್ನಿಸುವುದಕ್ಕೆ ಅಭ್ಯಂತರವಿಲ್ಲದಿದ್ದರೂ ಪತ್ರಿಕೋದ್ಯಮ ಒಂದು ಕೈಗಾರಿಕೆಗಿಂತ ಹೆಚ್ಚಿನ ಧ್ಯೇಯವುಳ್ಳದೆಂದು ಮನಗಂಡು ನಡೆಯಬೇಕು. ಆ ದೃಷ್ಟಿಯಿಂದಲೇ ಅವರು ನೇಮಕಗಳನ್ನು ಮಾಡಿಕೊಳ್ಳಬೇಕು. ರಾಜಕೀಯ ಮತ್ತು ಇತರ ಶಕ್ತಿಗಳ ಒತ್ತಡಕ್ಕೆ ಸಗ್ಗದೆ ಎದೆಕೊಟ್ಟು ನಿಲ್ಲುವ ಧೈರ್ಯ ತೋರಿಸಬೇಕು.

ಈ) ಪತ್ರಕರ್ತರು – ಇದೊಂದು ತಜ್ಞ ವೃತ್ತಿ (ಪ್ರೊಫೆಶನ್) ಎಂದೆಣಿಸಿ ತಮ್ಮ ಉಪಕರಣಗಳನ್ನು ಸಜ್ಜಿತವಾಗಿಟ್ಟಿರಬೇಕು. ಕನ್ನಡ ಓದುಗನಿಗೆ ಕನ್ನಡದಲ್ಲೇ ಇಂಗ್ಲಿಷಿನ ಮಟ್ಟದ ವಸ್ತುವನ್ನು ಒದಗಿಸಲು ಅವರು ದುಡಿಯಬೇಕು. ಅವರೇ ಪತ್ರಿಕಾರಂಗದ ನೆಲದ ಉಪ್ಪು.

ಉ) ಸರಕಾರ – ದಯವಿಟ್ಟು ಏನೂ ಮಾಡಬಾರದು. ಕಾಗದ ಪೂರೈಕೆ ನೀತಿಯನ್ನೂ ಜಾಹಿರಾತು ನೀತಿಯನ್ನೂ ಅದು ದಯವಿಟ್ಟು ಒಂದು ಅಂಕುಶವೆಂದು ಬಗೆಯಬಾರದು.

**ಪಾ. ವೆಂ :** ನನ್ನ ಕಾಲದವರಂತೆ ನಾನೂ ಬರೆಯುವ ಅಥವಾ ಸಾಹಿತ್ಯದ ಹುಚ್ಚಿನಿಂದಾಗಿ ಈ ರಂಗದಲ್ಲಿ ಬಂದು ಬಿದ್ದೆ. ಕಂಡುಕೊಂಡ ಅರ್ಥವೆಂದರೆ, ಇದು ಬರೇ ಉದರಂಭರಣ ವೃತ್ತಿಗಿಂತ ಹೆಚ್ಚಿನ ಅರ್ಥವನ್ನು ಬದುಕಿಗೆ ಕೊಡಬಲ್ಲದೆಂದು.

**ಪಾ. ವೆಂ :** ಸೃಜನಶೀಲ ಹೌದು. ಸೃಜನಶೀಲತೆ ಎಂದರೆ ಪ್ರತಿಭೆ. ಪ್ರತಿಭೆ ಎಂದರೆ ನವನವೋನ್ಮೇಷಕ ಬುದ್ಧಿ. ಆದರೆ ಈ ಸೃಜನಶೀಲತೆಯಲ್ಲಿ ಜನರನ್ನು ಲೆಕ್ಕಿಸದ ಆತ್ಮನಿಷ್ಠೆ ನಡೆಯುವುದಿಲ್ಲ.

**ಪಾ. ವೆಂ :** ಜಗತ್ತಿನಲ್ಲೆಲ್ಲ ಆಗುತ್ತಿರುವಂತೆ ಕನ್ನಡದಲ್ಲಿಯೂ ಪತ್ರಿಕೋದ್ಯಮ ದೊಡ್ಡ ಬಂಡವಾಳದ 'ಉದ್ಯಮ' ಆಗುತ್ತಿದೆ. ಪ್ರಧಾನವಾಗಿ 'ವೃತ್ತಿ'ಯಾಗಿರುವ ಒಂದು ಮಾನವ ಸಾಹಸ 'ಉದ್ಯಮ' ಅಥವಾ 'ಕೈಗಾರಿಕೆ'ಯಾದಾಗ ಆಗುವ ಎಲ್ಲ ಒಳಿತು ಕೆಡುಕುಗಳನ್ನು ನಾನು ನಿರೀಕ್ಷಿಸುತ್ತೇನೆ. ●

- **ಪತ್ರಿಕಾರಂಗದಲ್ಲಿ ನಿಮಗೆ ಆದ ಅತ್ಯಂತ ಸಾರ್ಥಕತೆಯ ಅನುಭವ ಕೊಟ್ಟ ಒಂದು ಘಟನೆ ಹೇಳುತ್ತೀರಾ?**
- **ಪತ್ರಿಕೆಗಳಲ್ಲಿ ರಾಜಕೀಯ ಸುದ್ದಿ, ವ್ಯಾಖ್ಯಾನಗಳಿಗೇ ಹೆಚ್ಚು ಪ್ರಾಮುಖ್ಯ ಕೊಡುತ್ತಿದ್ದಾರೆ; ರಾಜಕೀಯ ಮಂದಿಗಳನ್ನು ಬೇಕಾದಾಗ ಎತ್ತಿ ಕಟ್ಟುತ್ತಾರೆ ಇಲ್ಲವೆ ಕೆಳಗೆ ಎಸೆಯುತ್ತಾರೆ ಎಂಬ ಆರೋಪಗಳು (ಅಥವಾ ಜನಾಭಿಪ್ರಾಯಗಳು) ಎಷ್ಟು ಸರಿ? ಇದಕ್ಕೆ ಯಾರು ಕಾರಣ?**
- **"ಪತ್ರಕರ್ತರು ಸಮಾಜ ಬದಲಾವಣೆ, ಸುಧಾರಣೆ, ಬಂಡಾಯಗಳಿಗೆ ಹೋರಾಡುತ್ತಾರೆ. ಆದರೆ ಅವರು ತಮ್ಮ ಆತ್ಮ ವಿಮರ್ಶೆ ಮಾಡಿಕೊಳ್ಳಲು ಹಿಂಜರಿಯುತ್ತಾರೆ. ಅವರ ಕುರಿತ ಟೀಕೆ, ಟಿಪ್ಪಣಿಗಳಿಗೆ ಅವಕಾಶ ಕೊಡುವುದಿಲ್ಲ" ಇದು ಅನೇಕ ಓದುಗರ ಅಭಿಪ್ರಾಯ ಅಥವಾ ಅನುಮಾನ. ಇದಕ್ಕೆ ನಿಮ್ಮ ವ್ಯಾಖ್ಯಾನವೇನು?**
- **ಕನ್ನಡ ರಂಗಭೂಮಿ, ಸಿನೆಮಾ, ಕಲೆಗಳಿಗೆ ಕನ್ನಡ ಪತ್ರಿಕೋದ್ಯಮ ಹೇಗೆ ಮತ್ತು ಎಷ್ಟು ಪೂರಕವಾಗಿದೆ? ಈ ಕುರಿತು ಕೆಲವು ಗಮನಾರ್ಹ ಅಂಶಗಳನ್ನು ಉದಾಹರಣೆಯಾಗಿ ಕೊಡುವಿರಾ?**
- **ಕನ್ನಡ ಪತ್ರಿಕೋದ್ಯಮ ಇಂದು ಪ್ರಬುದ್ಧವಾಗಿದೆಯೆ? ಅದನ್ನು ಇನ್ನಷ್ಟು ಬೆಳೆಸಲು ಓದುಗರು, ಲೇಖಕರು, ಮಾಲಿಕರು, ಪತ್ರಕರ್ತರು, ಸರಕಾರ ಏನು ಮಾಡಬೇಕು?**
- **ನೀವು ಪತ್ರಿಕೋದ್ಯಮಕ್ಕೆ ಏಕೆ ಬಂದಿರಿ? ಹೇಗೆ ಬಂದಿರಿ? ಇದರಲ್ಲಿ ನೀವು ಕಂಡುಕೊಂಡ ಅರ್ಥವೇನು?**
- **ಪತ್ರಿಕೋದ್ಯಮ ಸೃಜನಶೀಲ ಎಂದು ನೀವು ಒಪ್ಪುತ್ತೀರಾ? ಏಕೆ?**
- **ಇಂದಿನ ಕನ್ನಡ ಪತ್ರಿಕೋದ್ಯಮದ ಬಗ್ಗೆ ನಿಮ್ಮ ಒಟ್ಟು ಅನಿಸಿಕೆಗಳೇನು?**

ಬ್ರಾಹ್ಮಣರ ಒಲವು ಕ್ಲಾಸಿಕಲ್ ಕಡೆಗೆ, ಇತರರ ಒಲವು ಐಡಿಯಲಿಸಂ, ಮಾರಲ್ ಕಡೆಗೆ. ಬ್ರಾಹ್ಮಣ ಶೂದ್ರ ದೃಷ್ಟಿ ಬೇರೆ ಬೇರೆ. ಕುವೆಂಪು 'ರಾಮಾಯಣ ದರ್ಶನಂ' ಬರೆದ್ರು. ಯಾಕಂದ್ರೆ ರಾಮಾಯಣದಲ್ಲಿ ಎಲ್ಲವೂ ಆದರ್ಶ, ಮಾರಲ್, ರೊಮ್ಯಾಂಟಿಕ್. ಮಹಾಭಾರತ ಕ್ಲಾಸಿಕಲ್, ರಿಯಲಿಸ್ಟಿಕ್. ಇಲ್ಲಿ ಎಲ್ಲವೂ ಮಿಕ್ಸ್ ಆಗಿದೆ. ಆದ್ರಿಂದ ಬ್ರಾಹ್ಮಣಸಾಹಿತಿಗಳು ಕ್ಲಾಸಿಕ್ ಸಾಹಿತ್ಯದ ಕಡೆಗೆ ಹೋಗೋದನ್ನ, ಮತ್ತು ಬ್ರಾಹ್ಮಣೇತರ ಸಾಹಿತಿಗಳು ರೊಮ್ಯಾಂಟಿಕ್ ಸಾಹಿತ್ಯದ ಕಡೆಗೆ ಹೋಗೋದನ್ನ ಈಗಲೂ ನಾವು ನೋಡ್‌ಬಹುದು. ಉದಾಹರಣೆ, ಗೋಪಾಲಕೃಷ್ಣ ಅಡಿಗರು. ಕ್ಲಾಸಿಸಂ ಕಡೆಗೆ ತಿರುಗಿದ್ರು ನ್ಯಾಚುರಲ್. ಯಾಕಂದ್ರೆ ಬ್ರಾಹ್ಮಣರನ್ನ ಮೋಟಿವೇಟ್ ಮಾಡೋದು ಬೇರೇನೇ, ಶೂದ್ರರನ್ನ ಮೋಟಿವೇಟ್ ಮಾಡೋದು ಬೇರೇನೆ. ಬ್ರಾಹ್ಮಣೇತರ ಸಾಹಿತಿಗಳಿಗೆ ತಮ್ಮ ಸಾಹಿತ್ಯವನ್ನು ಬ್ರಾಹ್ಮಣರು ಮೆಚ್ಚಿದರೇನೇ ತೃಪ್ತಿ! (ನಗು). ಬ್ರಾಹ್ಮಣರು ಅವ್ರು ಬರೆದ ಸಾಹಿತ್ರ ಚೆನ್ನಾಗಿದೆ ಅಂದ್ರೆ ಅದು ಅವ್ರಿಗೆ ಸರ್ಟಿಫಿಕೇಟ್. ಶಿವಾಜಿ ವೈದಿಕರಿಂದ ಪಟ್ಟಾಭಿಷೇಕ ಮಾಡ್ಸಿಕೊಂಡ ಹಾಗೇನೇ ಇದೂ ಒಂದು ಚಟ, ಇದೂ ಒಂದು ಚಪಲ; ಶೂದ್ರನಿಗೆ ಬ್ರಾಹ್ಮಣನಿಂದ ಸರ್ಟಿಫಿಕೇಟ್ ತಕೊಳ್ಳೊ ಚಪಲ; ವಿಶ್ವಾಮಿತ್ರನಿಗೆ ವಸಿಷ್ಠನಿಂದ ಬ್ರಾಹ್ಮಣ ಅನಿಸಿಕೊಳ್ಳುವ ಚಪಲದ ಹಾಗೆ.

**● ಈ ಬ್ರಾಹ್ಮಣ–ಶೂದ್ರ ಕಂದರವನ್ನು ತುಂಬುವುದು ಸಾಧ್ಯವೆ?**

**ಪಾವೆಂ–** ಇನ್ನು ಮುಂದಕ್ಕೆ ಸಾಧ್ಯ ಆಗತ್ತೆ. ಯಾಕಂದ್ರೆ ಈಗ ಬ್ರಾಹ್ಮಣ ಬ್ರಾಹ್ಮಣ ಆಗಿ ಉಳಿದಿಲ್ಲ. ಶೂದ್ರ ಮಾಡೋದನ್ನ ಬ್ರಾಹ್ಮಣ ಮಾಡ್ತಿದ್ದಾನೆ, ಬ್ರಾಹ್ಮಣ ಮಾಡೋದನ್ನ ಶೂದ್ರ ಮಾಡ್ತಿದ್ದಾನೆ. ಆದ್ರಿಂದ ಇಬ್ರ ನಡುವಣ ಕಂದರ ಮುಚ್ಚುತ್ತೆ ಅನ್ನುತ್ತೆ.

**● ನೀವು ಆಧುನಿಕ ಕನ್ನಡ ಸಾಹಿತ್ಯದ ಒಬ್ಬ ಪ್ರಮುಖ ಹರಟೆ ಲೇಖಕರು, ವಿಡಂಬನೆ ಲೇಖಕರು. ಸದ್ಯದ ವಿಡಂಬನಾ ಸಾಹಿತ್ಯದ ಬಗ್ಗೆ ನಿಮಗೆ ತೃಪ್ತಿ ಇದೆಯೆ?**

**ಪಾವೆಂ–** ಪೂರ್ತಿ ತೃಪ್ತಿ ಇಲ್ಲ– ನನ್ನ ಬರವಣಿಗೆ ಕೂಡಿ. ಇಂಗ್ಲಿಷ್ ಸಾಹಿತ್ಯದಲ್ಲಿ ಈ ಬಗೆಯ ಸಾಹಿತ್ಯದಲ್ಲಿ ವೈವಿಧ್ಯ ಇದೆ. ಇಲ್ಲಿ ಆ ಪ್ರಮಾಣದಲ್ಲಿ ವೈವಿಧ್ಯ ಸಿಗೋದಿಲ್ಲ. ವಿಡಂಬನೆ ಇರೋದು ಪಾಪ್ಯುಲರ್ ರೀಡಿಂಗ್‌ಗೋಸ್ಕರ. ಕನ್ನಡದಲ್ಲಿ ಪಾಪ್ಯುಲರ್ ರೀಡಿಂಗ್‌ಗಾಗಿ ವೈವಿಧ್ಯದಿಂದ ಕೂಡಿದ ಹರಟೆಸಾಹಿತ್ಯ ಸಾಕಷ್ಟು ಬಂದಿಲ್ಲ.

**● ಕನ್ನಡ ಸಾರಸ್ವತ ಲೋಕದ ಓರ್ವ ಶ್ರೇಷ್ಠ ಚಿಂತಕ ನೀವು. ಸದ್ಯದ ಕರ್ನಾಟಕದ ಬೌದ್ಧಿಕ ವಾತಾವರಣ ಹಾಗೂ ಧೀಮಂತ ಬರವಣಿಗೆ ಅಥವಾ ವೈಚಾರಿಕ ಸಾಹಿತ್ಯದ ವಿಷಯದಲ್ಲಿ ನಿಮ್ಮ ವೈಯಕ್ತಿಕ ಅಭಿಪ್ರಾಯವೇನು?**

**ಪಾವೆಂ–** ಭಾರತದಲ್ಲಿ, ಕರ್ನಾಟಕದಲ್ಲಿ ವೈಚಾರಿಕ ವಾತಾವರಣವೇ ಕಡಿಮೆಯಿದೆ. ನಾನು ಸಾಕಷ್ಟು ವೈಚಾರಿಕ ಸಾಹಿತ್ಯ ಓದಿದ್ದೇನೆ ಅಂತ ಹೇಳಿಕೊಳ್ಳೋದಿಲ್ಲ. ನಾವು ಮೂಲಭೂತವಾಗಿ ಹೊಸತಾಗಿ ಆಲೋಚನೆ ಮಾಡೋದಿಲ್ಲ. ಆದ್ರಿಂದ ತತ್ವಜ್ಞಾನದಲ್ಲಿ ಏನೂ ಹೊಸತು ಕಾಣಿಸೋದಿಲ್ಲ. ನಾವು ಉಪನಿಷತ್‌ಗಿಂತ ಈಚೆಗೆ ಬಂದೇ ಇಲ್ಲ. ಮಾರ್ಕ್ಸ್‌ನಂತಹ ಒಬ್ಬ ಚಿಂತಕ ನಮ್ಮಲ್ಲಿ ಹೊಸತಾಗಿ ಸಿಕ್ತಾ ಇಲ್ಲ. ಮಾರ್ಕ್ಸ್ ಈಗಾಗಲೆ ಔಟ್ ಆಫ್ ಡೇಟ್ ಆಗಿದ್ದಾನೆ. ಚೀನಾದಲ್ಲಿ ಅಲ್ಲಿಯ ಪರಿಸರಕ್ಕೆ ಹೊಂದಿ ಮಾವೋತ್ಸೆತುಂಗ್ ಹೊಸತಾಗಿ ಯೋಚಿಸಿದ. ಅವನ ಹಾಗೆ ಚಿಂತಿಸಿದ ಒಬ್ಬನೇ ಒಬ್ಬ ಚಿಂತಕ ನಮ್ಮಲ್ಲಿಲ್ಲ. ಲಿಂಗಾಯತರ ತತ್ವಜ್ಞಾನ ಕೂಡ ಮೂಲತಃ ಉಪನಿಷತ್ತಿನಿಂದ ಬಹಳ ಭಿನ್ನವೇನೂ ಅಲ್ಲ. ವಚನ ಸಾಹಿತ್ಯದಲ್ಲಿ ಹೊಸತೇನೂ ಇಲ್ಲ. ಪುರಾಣಗಳು ಕೂಡ ಉಪನಿಷತ್ತಿನ ವಿಚಾರಗಳನ್ನು ಸರಳವಾಗಿ ಹೇಳೋ ಪ್ರಯತ್ನ.

ನಾವು ಬೇರೆ ಓದದೆ ಎಲ್ಲ ನಮ್ಮಲ್ಲಿದೆ ಅಂತ ತಿಳಿದಿದ್ದೇವೆ.

**● ಬದುಕಿನ ವಿವಿಧ ಕ್ಷೇತ್ರಗಳಲ್ಲಿ ದುಡಿದವರು ನೀವು. ನಿಮ್ಮ ಬದುಕಿನ, ಸಾಹಿತ್ಯಿಕ ಬದುಕಿನ ಒಂದೊಂದು ಅವಿಸ್ಮರಣೀಯ ಘಟನೆ ಹೇಳ್ತೀರಾ?**

**ಪಾವೆಂ–** ಅಂಥಾದ್ದೇನಿಲ್ಲ. ನಗರದ ವರದಿಗಾರನಿಗೆ ಸಿಗುವ ಅವಕಾಶ ನನ್ಗೆ ಸಿಕ್ಕಿಲ್ಲ. ವರದಿಗಾರನಿಗೇ ವಿಚಿತ್ರ ಅನುಭವ ಸಿಗೋದು.

**● ನಿಮ್ಮ ಯೌವನದ ದಿನಗಳಲ್ಲಿ ನೀವು ಧರ್ಮ, ದೇವರು ಸಮಾಜದ ಕುರಿತು ವೈಚಾರಿಕವಾಗಿ, ಇತರರಿಗಿಂತ ಸಂಪೂರ್ಣ ಭಿನ್ನವಾಗಿ ಯೋಚಿಸುವಂತೆ ಮಾಡಿದ ಸನ್ನಿವೇಶ ಯಾವುದು?**



ಡಾ। ಶಿವರಾಮ ಕಾರಂತ , ನಿ. ವ್ಯಾಸರಾಯ ಬಲ್ಲಾಳರೊಡನೆ ಪಾ.ವೆಂ. (1987)

**ಪಾವೆಂ–** ಎಸ್. ಯು. ಪಣಿಯಾಡಿಯವರ ಸಂಪರ್ಕ. ಉಡ್ಪಿಯಲ್ಲಿದ್ದ ಪಣಿಯಾಡಿಯವರು ಓದಿದ್ದು ಸಂಸ್ಕೃತ. ಪೂರ್ವ ಮೀಮಾಂಸೆಯಲ್ಲಿ ಅವರು ಶಿರೋಮಣಿ. ಆದ್ರೆ ತೀರ ಹೊಸದಾಗಿ ಯೋಚಿಸುವ ಮನುಷ್ಯ. ಆರ್ಥಿಕವಾಗಿ ಅವ್ರಿಂದ ನನ್ಗೆ ತೊಂದರೆಯಾಯ್ತು. ಅವರ ಸಂಪರ್ಕವಿದ್ದ ಮನುಷ್ಯ ಅನ್ನೋ ಕಾರಣಕ್ಕೆ ಉಡ್ಪಿಯಲ್ಲಿ ನನ್ಗೆ ಕೆಲ್ಸ ಸಿಗೋದು ಕಷ್ಟ ಆಯ್ತು. ಆದ್ರೂ ನಾನು ಹೊಸತಾಗಿ ಯೋಚನೆ ಮಾಡುವಂತೆ ಅವರು ನನ್ಗೆ ಪ್ರೇರಣೆ ನೀಡಿದ್ರು. ನನ್ನ ಹೊಸ ಆಲೋಚನಾ ರೀತಿಗೆ ಅವ್ರೇ ಸ್ಫೂರ್ತಿ.

ಎರಡನೆಯದಾಗಿ ನಾನು ವೈದಿಕ ವೃತ್ತಿಯಲ್ಲಿ ಗಾಢವಾದ ಬೇರು ಬಿಡ್ಲಿಲ್ಲ. ಸೋ, ಈ ಹೊಸರೀತಿಯ ಯೋಚನೆ ನನ್ಗೆ ಸುಲಭ ಆಯ್ತು. ಉಡ್ಪಿಯ ಬೋರ್ಡ್ ಹೈಸ್ಕೂಲಿನಲ್ಲಿ ರಾಕಿ ಫೆರ್ನಾಂಡಿಸರು ಹಾಗೂ ಕೊರಡ್ಕಲ್ ಶ್ರೀನಿವಾಸ ರಾಯರು ನನ್ಗೆ ಮೇಷ್ಟರಾಗಿದ್ರು. ಕೊರಡ್ಕಲ್ ಶ್ರೀನಿವಾಸ ರಾಯರ ವಿಚಾರಗಳು ಆರೋಗ್ಯಕರವಾದ ಚಿಂತನೆಗೆ ಆಸ್ಪದ ನೀಡಿದವು. ಅವ್ರು ತರಗತಿಯಲ್ಲಿ ಆಗೊಮ್ಮೆ ಈಗೊಮ್ಮೆ ನಿರೀಶ್ವರವಾದದ ಬಗ್ಗೆ ಆಡುತ್ತಿದ್ದ ಮಾತುಗಳು ನಿರೀಶ್ವರವಾದದ ಚಿಂತನೆಗೆ ಆಸ್ಪದ ನೀಡಿದವು.

ಮೂರನೆಯದಾಗಿ, ನನ್ಗೆ ಮಠಗಳ ಜತೆ ಚಿಕ್ಕಂದಿನಲ್ಲಿ ಸಂಪರ್ಕ ಇತ್ತು. ಆಗ ಮಠಗಳು ಎಲ್ಲಾ ದೃಷ್ಟಿಯಿಂದ ವಿಘಟನೆಯ ಪರಮಾವಧಿ ಸ್ಥಿತಿಯಲ್ಲಿದ್ದವು. ಮಠಗಳಲ್ಲಿದ್ದ ವಿಲಾಸ ಜೀವನ, ಸೆಕ್ಸ್ ಬಗ್ಗೆ ಅವು ಕೊಳಕಾಗಿ ಮಾತಾಡೋದು ನಾನು ಯೋಚಿಸುವಂತೆ ಮಾಡಿತು. ಈಗಿನ ಮಠಾಧಿಪತಿಗಳು, ಆಗಿನ ಮಠಾಧಿಪತಿಗಳಿಗೆ ಹೋಲಿಸಿದ್ರೆ ಹೆಚ್ಚು ಸಿವಿಲೈಸ್ಡ್ ಆಗಿ ಮಾತಾಡ್ತಾರೆ. ನನ್ಗೆ ಆಗ ಒಂದು ಮಠದಿಂದ ತಿಂಗಳಿಗೆ ಒಂದು ರೂಪ್ಾಯಿ ಸ್ಕಾಲರ್‌ಶಿಪ್ ಸಿಕ್ತಿತ್ತು. ಆ ಒಂದು ರೂಪ್ಾಯಿ ವಸೂಲಿ ತುಂಬ ಕಷ್ಟ ಆಗ್ತಿತ್ತು. ನನಗ್ಯಾಕೋ ಒಳಗೊಳಗೇ ಒಂದು ರೀತಿಯ ಜುಗುಪ್ಸೆ ಆಗ್ತಿತ್ತು. ಮಠಗಳ ವ್ಯವಹಾರ

## ಪಾ. ವೆಂ. ಉವಾಚ

- ನಾವು ಉಪನಿಷತ್‌ಗಿಂತ ಈಚೆಗೆ ಬಂದೇ ಇಲ್ಲ.
- ನಾವು ಬೇರೆ ಓದದೆ ಎಲ್ಲ ನಮ್ಮಲ್ಲಿದೆ ಅಂತ ತಿಳಿದಿದ್ದೇವೆ.
- ಮಾರ್ಕ್ಸ್ ಈಗಾಗಲೆ ಔಟ್ ಆಫ್ ಡೇಟ್ ಆಗಿದ್ದಾನೆ.
- ಸತ್ಯ ಸುದ್ದಿ ಹಾಕೋದು ಅಪಾಯಕರ ಆದ್ರೆ ಹೇಗೆ? ಆಗ ಪತ್ರಿಕೋದ್ಯಮದ ಗತಿ ಏನಾಗ್ಬೇಕು?
- ಬ್ರಾಹ್ಮಣ ಸಾಹಿತಿಗಳು ಬೇರೆ ಜಾತಿಯ ಸಾಹಿತಿಗಳಿಗಿಂತ ಹೆಚ್ಚು ಸಂಭಾವಿತರು ಅಂತ ನಾನು ನಂಬೋದಿಲ್ಲ.
- ಬ್ರಾಹ್ಮಣ, ಶೂದ್ರರಿಗೆ ವಿದ್ಯೆ ಡಿನ್ಯಾ ಮಾಡ್ಲಿಲ್ಲ. ಮಾಡಿದ್ದಿದ್ರೆ ಶೂದ್ರನಾದ ಕನಕದಾಸನಿಗೆ ಮಹಾಕಾವ್ಯರಚನೆ ಸಾಧ್ಯವಾಗ್ತಿರ್ಲಿಲ್ಲ.
- ಬ್ರಾಹ್ಮಣೇತರ ಸಾಹಿತಿಗಳಿಗೆ ತಮ್ಮ ಸಾಹಿತ್ಯವನ್ನು ಬ್ರಾಹ್ಮಣರು ಮೆಚ್ಚಿದರೇನೇ ತೃಪ್ತಿ. ಶಿವಾಜಿ ವೈದಿಕರಿಂದ ಪಟ್ಟಾಭಿಷೇಕ ಮಾಡ್ಸಿಕೊಂಡ ಹಾಗೇನೇ ಇದೂ ಒಂದು ಚಟ; ಇದೂ ಒಂದು ಚಪಲ.
- ಈಗಿನ ಮಠಾಧಿಪತಿಗಳು ಆಗಿನ ಮಠಾಧಿಪತಿಗಳಿಗೆ ಹೋಲಿಸಿದ್ರೆ, ಹೆಚ್ಚು ಸಿವಿಲೈಸ್ಡ್ ಆಗಿ ಮಾತಾಡ್ತಾರೆ.
- ತತ್ವಜ್ಞಾನಿಗಳ ಜೀವನವೇ ಅವ್ರ ತತ್ವಜ್ಞಾನಕ್ಕೆ ವಿರೋಧವಾಗಿ ಕಾಣ್ತದೆ.
- ನೈತಿಕತೆ ಬಗ್ಗೆ ಮಾತಾಡೋ ಹಿರಿಯರಿಗೆ ಕಿರಿಯರ ಮೇಲೆ ಹೊಟ್ಟೆಕಿಚ್ಚು, ನಾವು ಸಣ್ಣವರಾಗಿದ್ದಾಗ ಇದನ್ನ ಮಾಡ್ಲಿಕ್ಕಾಗ್ಲಿಲ್ವಲ್ಲ ಅಂತ.
- ಪಾಂಡಿತ್ಯ ಅಲ್ಲ ನನ್ನದು, ಕುತೂಹಲ ಬುದ್ಧಿಯ ಹುಚ್ಚಾಟ ನನ್ನ ಜೀವನ.

ಸ್ವತಃ ಸ್ಥಳಕ್ಕೆ ಹೋಗಿ ತಪಾಸಣೆ ನಡೆಸಿ ಹದಿನೈದು ಸಾಲುಗಳ ಸುದ್ದಿ ಪ್ರಕಟಿಸಿದರು. ಆ ಸುದ್ದಿ ವೈಸರಾಯ್ ಕೌನ್ಸಿಲ್‌ನಲ್ಲಿ ಚರ್ಚೆ ಆಯ್ತು. ಸರಕಾರ ಮಹಾರಾಜನಿಗೆ ಹೇಳಿತು, ಒಂದೋ ಪದತ್ಯಾಗ ಮಾಡು ಅಥವಾ ವಿಚಾರಣೆ ಎದುರಿಸು ಅಂತ. ಮಹಾರಾಜ ಸಿಂಹಾಸನ ತ್ಯಾಗ ಮಾಡಿದ. ಅಂತಹ ನಿಷ್ಪಕ್ಷಪಾತ ಪತ್ರಿಕೆಗಳು, ಧೈರ್ಯವಾಗಿ ಸತ್ಯವನ್ನ ವರದಿ ಮಾಡುವ ಪತ್ರಿಕೆಗಳು ಈಗ ಅಪರೂಪ.

● 'ದಿ ಹಿಂದೂ' ದೈನಿಕ ?

ಪಾವೆಂ: ಅಂಟಿಲ್ ರೀಸೆಂಟ್ಲಿ 'ದ ಹಿಂದೂ' ವಾಸ್ ಆಲ್‌ವೇಸ್ ಪ್ಲೇಯಿಂಗ್ ಸೇಫ್. ನಮ್ಮ ರಾಷ್ಟ್ರೀಯ ಆಂದೋಲನ ಕೂಡ ಇವತ್ತಿನ ನಮ್ಮ ಪತ್ರಿಕೋದ್ಯಮದ ಸ್ಥಿತಿಗೆ ಕಾರಣವೆಂದ್ರೆ ನೀವು ನಂಬಲಿಕ್ಕಿಲ್ಲ. ಆಗ, ಸ್ವಾತಂತ್ರ್ಯಪೂರ್ವದಲ್ಲಿ ಪತ್ರಿಕೆಗಳು ಸ್ವಾತಂತ್ರ್ಯ ಹೋರಾಟ ನಡೆಸ್ತಿದ್ದ ನಾಯಕರನ್ನು ಹೊಗಳ್ತಾ ಇದ್ವು. ಸ್ವಾತಂತ್ರ್ಯ ಬಂದ ಮೇಲೆ ಕೂಡ ಅದೇ ಪ್ರವೃತ್ತಿ ಮುಂದುವರಿದು ನಮ್ಮ ನಾಯಕರನ್ನು ಪ್ರಶ್ನಿಸೋದು ತಪ್ಪು ಅನ್ನೋ ಭಾವನೆ ಬೆಳೀತು. ಇದು ತಪ್ಪು. ಓ. ಪಿ. ಮಥ್ಯಾ ತನ್ನ ಪುಸ್ತಕದಲ್ಲಿ ಪಂಡಿತ್ ನೆಹರೂರವರಿಗೆ ಒಂದು ಇಲ್ಲೆಜಿಟಿಮೇಟ್ ಮಗು ಇತ್ತು ಅಂತ ಬರ್ದಾಗ 'ದಿ ಟೈಮ್ಸ್ ಆಫ್ ಇಂಡಿಯಾ'ದಂತಹ ಪತ್ರಿಕೆ ಕೂಡ "ಇದು ಉಂಡ ಮನೆಗೆ ದ್ರೋಹ ಬಗೆದಂತೆ" ಎನ್ನುವ ಅರ್ಥ ಬರುವ ಮಾತುಗಳನ್ನು ಬರೆಯಿತು. ಮಥ್ಯಾ ಬರೆದದ್ದು ಫ್ಯಾಕ್ಟ್ ಅಲ್ಲ, ಸತ್ಯ ಅಲ್ಲ ಅಂತ ಸಕಾರಣವಾಗಿ ಪತ್ರಿಕೆ ವಿರೋಧಿಸಿದ್ದರೆ ಒಪ್ಪಬಹುದಾಗಿತ್ತು. ಆದ್ರೆ ಅದು ಹಾಗೆ ಮಾಡದೆ ನೆಹರೂ ಬಗ್ಗೆ ಮಥ್ಯಾ ಹಾಗೆ ಬರೆದದ್ದು ತಪ್ಪು ಅಂದಿತು. ಸತ್ಯ ಸುದ್ದಿ ಹಾಕೋದು ಅಪಾಯಕರ ಆದ್ರೆ ಹೇಗೆ ? ಆಗ ಪತ್ರಿಕೋದ್ಯಮದ ಗತಿ ಏನಾಗ್ಬೇಕು ?

**● ಈಗ ಕನ್ನಡ ಸಾಹಿತ್ಯ, ಕನ್ನಡ ವಿಮರ್ಶೆ ಕೂಡ ರಾಜಕೀಕರಣಗೊಂಡಿದೆ. ಸದ್ಯದ ಸಾಮಾಜಿಕ-ರಾಜಕೀಯ ಸಂದರ್ಭದಲ್ಲಿ, ಸಾಂಸ್ಕೃತಿಕ ವಾತಾವರಣದಲ್ಲಿ ಬ್ರಾಹ್ಮಣ-ಶೂದ್ರ ಪ್ರಜ್ಞೆಯ ಪರಿಭಾಷೆಯಲ್ಲಿ ವಸ್ತುನಿಷ್ಠ ವಿಮರ್ಶೆ ಅಸಾಧ್ಯವಾಗಿದೆ. ಈ ಬೆಳವಣಿಗೆಯನ್ನು ನೀವು ಕರ್ನಾಟಕದ ಸಾಹಿತ್ಯಿಕ-ಸಾಂಸ್ಕೃತಿಕ ಇತಿಹಾಸದ ಹಿನ್ನೆಲೆಯಲ್ಲಿ ಹೇಗೆ ಅರ್ಥೈಸುತ್ತೀರಿ ?**

ಪಾವೆಂ: ಬ್ರಾಹ್ಮಣ ಸಾಹಿತಿಗಳು ಬೇರೆ ಜಾತಿಯ ಸಾಹಿತಿಗಳಿಗಿಂತ ಹೆಚ್ಚು ಸಂಭಾವಿತರು ಅಂತ ನಾನು ನಂಬೋದಿಲ್ಲ. ಬ್ರಾಹ್ಮಣೇತರ ಸಾಹಿತಿಗಳಿಗೆ ಬ್ರಾಹ್ಮಣರು ತಮ್ಗೆ ಸಾಕಷ್ಟು ಮಹತ್ವ ಕೊಟ್ಟಿಲ್ಲ ಎಂಬ ಭಾವನೆ ಇದೆ.

ಲೋಹಿಯಾವಾದಿ ಸಾಹಿತಿಗಳಲ್ಲಿ ಒಡಕು ಉಂಟಾಗಿ ಶೂದ್ರ ಸಾಹಿತ್ಯ ಸಮ್ಮೇಳನ ನಡೆಯಿತು. ಆವತ್ತಿನಿಂದ ಈ ಒಡಕು ಬೆಳೆದುಬಂದಿದೆ. ಬ್ರಾಹ್ಮಣರು ಹೆಚ್ಚು ಹೆಚ್ಚು ಬರೀತಾ ಇದ್ದಿದ್ರಿಂದ ಅವ್ರ ಕೃತಿಗಳಿಗೆ ಬ್ರಾಹ್ಮಣ ಪ್ರಕಾಶಕರು ಒತ್ತುಕೊಡ್ತಿದ್ರು. ಕೃಷ್ಣ ಆಲನಹಳ್ಳಿಯವರ 'ಕಾಡು' ಮನೋಹರ ಗ್ರಂಥಮಾಲೆಯಿಂದ ಪ್ರಕಟವಾದಾಗ ನಾನು ಒಬ್ಬ ಶೂದ್ರ ಸಾಹಿತಿಯ ಹತ್ರ ಕೇಳಿದೆ: "ನೀವು ಜಿ.ಬಿ. ಜೋಷಿ ಬರೀ ಬ್ರಾಹ್ಮಣ ಸಾಹಿತಿಗಳ ಪುಸ್ತಕ ಪ್ರಕಟಿಸ್ತಾರೆ ಅಂತಿದ್ರಲ್ಲಾ. ಈಗ ಅವರು ಆಲನಹಳ್ಳಿಯ ಕಾದಂಬರಿ ಪ್ರಕಟಿಸಿದ್ದಾರೆ. ಏನಂತೀರಿ ನೀವಿದಕ್ಕೆ ?" ಆ ಸಾಹಿತಿ ಹೇಳಿದ್ರು: "ಆಲನಹಳ್ಳಿ ಬ್ರಾಹ್ಮಣ ಅಂತ ತಿಳ್ಕೊಂಡು ಜಿ. ಬಿ. ಜೋಷಿ ಅವ್ರ ಕಾದಂಬರಿ ಅಚ್ಚು ಹಾಕಿದ್ರು" ಅಂತ !

ಸಾಮಾಜಿಕ ಒಡನಾಟ ಸಾಕಷ್ಟು ಇಲ್ಲದ್ರಿಂದ ಇಂಥದ್ದೆಲ್ಲ ಉತ್ಪನ್ನ ಆಗ್ತದೆ. ನಾನು 'ಕಸ್ತೂರಿ'ಯ ಸಂಪಾದಕನಾಗಿದ್ದಾಗ ಎಂದೂ ನಾನು ಲೇಖಕರನ್ನು ಬ್ರಾಹ್ಮಣ, ಶೂದ್ರ ದೃಷ್ಟಿಯಿಂದ ನೋಡ್ಲಿಲ್ಲ. ಶೂದ್ರ ಸಾಹಿತಿಗಳು ಎಲ್ಲದಕ್ಕೂ ಬ್ರಾಹ್ಮಣರನ್ನು ದೂರ್ತಾರೆ. ನಮ್ಗೆ ವಿದ್ಯೆ ಕೊಡೋದಕ್ಕೆ ಬ್ರಾಹ್ಮಣರು ಅಡ್ಡ ಬಂದ್ರು ಅಂತಾರೆ. ಆದ್ರೆ ನಾನು ಕೇಳ್ತೇನೆ: ಬ್ರಾಹ್ಮಣರು ನಿಮ್ಗೆ ವಿದ್ಯೆ ಕೊಡ್ಲಿಲ್ಲ ಅಂತ ಯಾರ್ ಹೇಳಿದ್ರು ? ಬ್ರಾಹ್ಮಣರು ಶೂದ್ರರಿಗೆ, ಸ್ತ್ರೀಯರಿಗೆ ವೇದಗಳ ಅಧ್ಯಯನವನ್ನು ಮಾತ್ರ ಡಿನ್ಯಾ ಮಾಡಿದ್ರು. ಆದರೆ ದೇವ್ರನ್ನ ನಾನಾ ಹೆಸರುಗಳಿಂದ ಸ್ತುತಿಸುವ ವಿಷ್ಣು ಸಹಸ್ರನಾಮ ತೆಕೊಳ್ಳಿ. ಅದ್ರ ಫಲಶ್ರುತಿ ಬ್ರಾಹ್ಮಣರಿಗೆ ವಿದ್ಯೆ, ಕ್ಷತ್ರಿಯರಿಗೆ ರಾಜ್ಯ, ವೈಶ್ಯರಿಗೆ ಧನ ಮತ್ತು ಶೂದ್ರರಿಗೆ ಸುಖಪ್ರಾಪ್ತಿ ಅಂತ ಹೇಳ್ತದೆ. ಶೂದ್ರನಿಗೆ ಅದ್ರ ಅಧ್ಯಯನ ಅವಕಾಶ ನಿರಾಕರಿಸಿದ್ದಿದ್ರೆ ಅದು ಹೀಗೆ ಶೂದ್ರನಿಗೆ ಸುಖಪ್ರಾಪ್ತಿ ಅಂತ ಹೇಳೋಕೆ ಸಾಧ್ಯವೇ ಇಲ್ಲ. ಆದ್ರಿಂದ ನಾನು ಬ್ರಾಹ್ಮಣೇತರ ಸಾಹಿತಿಗಳಿಗೆ ಹೇಳ್ತೇನೆ: ಯಾರೇ ಆದ್ರೂ ಪ್ರಾಫಿಟೇಬಲ್ ಅಲ್ಲದ್ದನ್ನ ಬಹಳ ಸಮಯದವರೆಗೆ ಮಾಡೋದಿಲ್ಲ. ಬ್ರಾಹ್ಮಣರಿಗೆ ವಿದ್ಯೆ ಜೀವನೋಪಾಯಕ್ಕಾಗಿ ಇತ್ತು. ಆದ್ರಿಂದ ಬ್ರಾಹ್ಮಣರಿಗೆ ವಿದ್ಯೆ ಬಗ್ಗೆ ನಿಷ್ಠೆ ಇತ್ತು, ಈಗಲೂ ಇದೆ. ಮುಂದಕ್ಕೂ ಇರ್ತದೆ ಅಂತ ನಾನು ಹೇಳಲಾರೆ. "ಕನ್ಯಾ ವರಯತೇ ರೂಪಂ ಮಾತಾವಿತ್ತಂ ಪಿತಾಶ್ರುತಂ ಬಾಂಧವಾಃ ಕುಲಮಿಚ್ಛಂತೆ ಮೃಷ್ಟಾನ್ನೇತರೇ ಜನಾಃ" ಅಂತ ಒಂದು ಸುಭಾಷಿತ ಹೇಳ್ತದೆ. ಮದ್ವೆ ಆಗ್ತದೆ ಅಂದಾಗ ಹುಡುಗಿ ವರನ ರೂಪ ನೋಡ್ತಾಳೆ. ತಾಯಿ ಹುಡುಗನ ಹತ್ರ ಎಷ್ಟು ಸಂಪತ್ತಿದೆ ನೋಡ್ತಾಳೆ, ತಂದೆ ಹುಡುಗನ ಶ್ರುತಂ ಅಂದ್ರೆ ವಿದ್ಯೆ ನೋಡ್ತಾನೆ. ತಂದೆ ಅಂದ್ರೆ ಬ್ರಾಹ್ಮಣ ತಂದೆ ವಿದ್ಯೆ ಬಗ್ಗೆ ಕಾಳಜಿವಹಿಸ್ತಿದ್ದ. ಆದ್ರೆ ಅವ ಶೂದ್ರರಿಗೆ ವಿದ್ಯೆ ಡಿನ್ಯಾ ಮಾಡ್ಲಿಲ್ಲ. ಮಾಡಿದ್ದಿದ್ರೆ ಶೂದ್ರನಾದ ಕನಕದಾಸನಿಗೆ ಮಹಾಕಾವ್ಯ ರಚನೆ–'ಮೋಹನ ತರಂಗಿಣಿ'–ಸಾಧ್ಯವಾಗ್ತಿರ್ಲಿಲ್ಲ.

### ಕನ್ನಡ ಪತ್ರಿಕೋದ್ಯಮದಲ್ಲಿ 'ತರಂಗ'ದ ಯಶಸ್ಸಿನ ಗುಟ್ಟನ್ನು ಪಾ. ವೆಂ. ರಟ್ಟಾಗಿಸಿದ್ದು ಹೀಗೆ:

**'ತರಂಗ'ವನ್ನ ಚೆನ್ನಾಗಿ ಪ್ರೆಸೆಂಟ್ ಮಾಡಿದ್ರು. ಮುಖಪುಟ ಬದಲಾಯಿಸುವ ರೀತಿ ಓದುಗರನ್ನು ಆಕರ್ಷಿಸ್ತು. 'ತರಂಗ' ಕೊಡುವ ವಿಷಯಗಳಲ್ಲಿ ವೈವಿಧ್ಯ ಇದೆ. ಎಲ್ಲರಿಗೂ ತಿಳಿವ ಶೈಲಿ ಅವರದ್ದು. ಅದ್ರ ಸಂಪಾದಕರು ಮುಂಬೈಯಲ್ಲಿ ಪಬ್ಲಿಸಿಸ್ಟ್ ಆಗಿದ್ರಿಂದ ಯಾವ ರೀತಿ ಏನನ್ನ ಜನರಿಗೆ ಕೊಟ್ರೆ ಹಿಡಿಸೀತೆಂಬ ತಿಳಿವಳಿಕೆ ಅವ್ರಿಗಿತ್ತು.**

**ಅತಿ ಹೆಚ್ಚು ತರಹದ ಲೇಖನಗಳನ್ನು ಮತ್ತು ಅತಿಹೆಚ್ಚು ಲೇಖಕರನ್ನ ಬೆಳಕಿಗೆ ತಂದದ್ದು 'ತರಂಗ'ದ ಸಾಧನೆ. ಸಾಮರ್ಥ್ಯವನ್ನು ಗುರುತಿಸುವ, ಕೂಡ್ಲೆ ಉಪಯೋಗ ಮಾಡಿಕೊಳ್ಳುವ ಪ್ರವೃತ್ತಿ ಮತ್ತು ಇವೊತ್ತು ಕನ್ನಡ ಓದುವಂಥ ಅತಿ ದೊಡ್ಡ ಓದುಗರ ವರ್ಗ ಯಾರು ಅಂತ ಗುರ್ತಿಸಿ ಅವ್ರಿಗೆ ನಾಟುವ ಹಾಗೆ ಲೇಖನಗಳನ್ನು ನೀಡಿದ್ದು 'ತರಂಗ'ದ ಯಶಸ್ಸಿಗೆ ಕಾರಣ ಅಂತ ನನಗನ್ನಿಸ್ತದೆ.**

**'ತರಂಗ'ದ ವ್ಯವಸ್ಥಾಪಕರು ಹೊಸ ತರಹದ ವ್ಯವಸ್ಥಾಪಕರು. ಯಶಸ್ಸು ಮತ್ತು ಆರ್ಥಿಕ ಶಕ್ತಿಯನ್ನು ಸರಿದೂಗಿಸುವ ಸಾಮರ್ಥ್ಯ ಅವರಲ್ಲಿತ್ತು.**



### ಪಾ. ವೆಂ. ನಡೆದು ಬಂದ ದಾರಿ

**1915**ರ ಫೆಬ್ರವರಿ ಆರರಂದು ಉಡುಪಿಯಲ್ಲಿ ಜನನ. ತಂದೆ ಲಕ್ಷ್ಮೀನಾರಾಯಣಾಚಾರ್ಯ, ತಾಯಿ ಸೀತಮ್ಮ.

ಪಾಡಿಗಾರು ವೆಂಕಟರಮಣ ಆಚಾರ್ಯನಿಗೆ ಐದು ವರ್ಷವಾಗುವಷ್ಟರಲ್ಲೇ ತಂದೆಯ ಸಾವು. ಉಡುಪಿಯ ಅನಂತೇಶ್ವರ ಶಾಲೆ ಮತ್ತು ಬೋರ್ಡು ಹೈಸ್ಕೂಲ್‌ನಲ್ಲಿ ಶಿಕ್ಷಣ. ಐದನೆಯ ತರಗತಿಯಲ್ಲಿರುವಾಗಲೆ ಖಾಸಗಿಯಾಗಿ ಬಂಗಾಲಿ, ಹಿಂದಿ ಕಲಿಕೆ. *1932*ರಲ್ಲಿ ಎಸ್.ಎಸ್.ಎಲ್.ಸಿ. ತೇರ್ಗಡೆ. ಬಡತನದಿಂದಾಗಿ ಶಿಕ್ಷಣಕ್ಕೆ ವಿದಾಯ.

*1932-33*ರಲ್ಲಿ ಉಡುಪಿಯ ಕಡಿಯಾಳಿ ಶಾಲೆಯಲ್ಲಿ ಶಿಕ್ಷಕ. 'ಇಷ್ಟೊಂದು ಸರಳ ವಿಷಯವೂ ಅರ್ಥವಾಗುವುದಿಲ್ಲವೆ?' ಎಂಬ ಅಸಹನೆಯಿಂದಾಗಿ ಶಿಕ್ಷಕ ವೃತ್ತಿಗೆ ವಿದಾಯ.

*1933-40*ರ ಮಧ್ಯೆ ಅಂಗಡಿ ಕಾರಕೂನ. ಎಸ್. ಯು. ಪಣಿಯಾಡಿಯವರ ತುಳುನಾಡು ಪ್ರೆಸ್ ಮತ್ತು ಮಣಿಪಾಲ ಪ್ರೆಸ್‌ನಲ್ಲಿ ಮೆನೇಜರ್. ಪಣಿಯಾಡಿಯವರು ಆರ್ಥಿಕ ಹೊಡೆತಕ್ಕೆ ಗುರಿಯಾದಾಗ ಮದರಾಸಿಗೆ ಪ್ರಯಾಣ. ಅಲ್ಲಿ ಹೋಟೇಲ್ ಒಂದರಲ್ಲಿ ಪುನಃ ಕಾರಕೂನ.

*1942*ರಿಂದ *1975*ರ ದೀರ್ಘ ಅವಧಿಯಲ್ಲಿ ಹುಬ್ಬಳ್ಳಿಯ 'ಸಂಯುಕ್ತ ಕರ್ನಾಟಕ'ದಲ್ಲಿ ಮುದ್ರಣ ತಜ್ಞ. ಬಳಿಕ 'ಕರ್ಮವೀರ' ವಾರಪತ್ರಿಕೆಯ ಉಪಸಂಪಾದಕ. ತರುವಾಯ 'ಕಸ್ತೂರಿ'ಯ ಪ್ರಥಮ ಸಂಪಾದಕ. ನಿವೃತ್ತಿಯ ಬಳಿಕ ಹುಬ್ಬಳ್ಳಿಯಲ್ಲಿ ವಾಸ್ತವ್ಯ.

ಲಾಂಗೂಲಾಚಾರ್ಯ ಎಂಬ ಗುಪ್ತನಾಮದಿಂದ ಹಲವಾರು ಹರಟೆಗಳನ್ನು ಬರೆದಿರುವ ಪಾ. ವೆಂ. ಆಚಾರ್ಯರವರನ್ನು ಹುಡುಕಿಕೊಂಡು ಬಂದ ಪ್ರಶಸ್ತಿಗಳು ಅನೇಕ: "ನವನೀರದ" (ಕವನಸಂಗ್ರಹ)ಕ್ಕೆ ಮುಂಬಯಿ ಸರಕಾರದ ಬಹುಮಾನ. ಪತ್ರಿಕೋದ್ಯಮಕ್ಕಾಗಿರುವ ಪಿ. ಆರ್. ರಾಮಯ್ಯ ಪ್ರಶಸ್ತಿ. ಸಾಹಿತ್ಯ ಅಕಾಡೆಮಿ ಪ್ರಶಸ್ತಿ. ವರ್ಧಮಾನ ಪ್ರಶಸ್ತಿ. *1989*ರ ಕರ್ನಾಟಕ ಸರಕಾರ ರಾಜ್ಯೋತ್ಸವ ಪ್ರಶಸ್ತಿ. ಅಲ್ಲದೆ ಪತ್ರಿಕೋದ್ಯಮಕ್ಕೆ ಸಲ್ಲಿಸಿದ ಸೇವೆಗಾಗಿ ಕನ್ನಡ ಸಾಹಿತ್ಯ ಪರಿಷತ್ತಿನಿಂದ ಸನ್ಮಾನ. *1987*ರಲ್ಲಿ ಮುಲ್ಕಿಯಲ್ಲಿ ನಡೆದ ದಕ್ಷಿಣ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ.

ಪಾ.ವೆಂ. ಪತ್ರಿಕೋದ್ಯಮಿಯಷ್ಟೆ ಅಲ್ಲ. ಅವರು ಕರ್ನಾಟಕದ ಹಿರಿಯ ಚಿಂತಕ, 'ಹರಟೆ' ಸಾಹಿತ್ಯದಲ್ಲಿ ದೊಡ್ಡ ಲೇಖಕ, ಕವಿ, ಉದ್ದಾಮ ವಿಚಾರವಂತ, ಭಾಷಾಭ್ಯಾಸಿ. ಎಲ್ಲಕ್ಕೂ ಮಿಗಿಲಾಗಿ ಹತ್ತಾರು ಕಿರಿಯ ಲೇಖಕರ ಬೆನ್ನುತಟ್ಟಿದ ಸಹೃದಯಿ ಸಂಪಾದಕ.

ಸಂದರ್ಶಕರು: ಬಿ. ಭಾಸ್ಕರ ರಾವ್

● ಶಾಂತಾರಾವ್

ಲಾಂಗೂಲಾಚಾರ್ಯ, ಪಾವೆಂ ಮುಂತಾದ ಹೆಸರುಗಳಿಂದ ಪ್ರಸಿದ್ಧರಾದ ಪಾಡಿಗಾರು ವೆಂಕಟರಮಣ ಆಚಾರ್ಯರು ಬರಿಯ ಪತ್ರಿಕೋದ್ಯಮಿಯಷ್ಟೇ ಅಲ್ಲ, ಕರ್ನಾಟಕದ ಹಿರಿಯ ಚಿಂತಕ, ಹರಟೆಮಲ್ಲ, ಲೇಖಕ, ಕವಿ ಕೂಡ ಹೌದು. ಕಸ್ತೂರಿಯ ಸಂಪಾದಕರಾಗಿ ಇವರು ಏರಿದ ಎತ್ತರಕ್ಕೆ, ಬಿತ್ತರಕ್ಕೆ ಎಣೆಯಿಲ್ಲ. ಎಳೆಯರಿಗೆ ಸ್ಫೂರ್ತಿಯ ಚಿಲುಮೆಯಾಗಿ ಬೆಳೆದವರಿಗೆ ವಿಸ್ಮಯದ ಮೂರ್ತಿಯಾಗಿ ಕಂಡವರು. ಗಂಭೀರ ವ್ಯಂಗ್ಯಕ್ಕೆ ಇವರದು ಪರ್ಯಾಯ ಹೆಸರು. ಪ್ರಚಾರದಿಂದ ಬಲುದೂರ ನಿಲ್ಲುವ ಪಾವೆಂ ಆಬಾಲವೃದ್ಧರಿಗೆ ಪ್ರಿಯವಾಗುವಂತಹ ವ್ಯಕ್ತಿ.

● **ಆಚಾರ್ಯರೇ, ನೀವು ಕನ್ನಡ ಪತ್ರಿಕೋದ್ಯಮದಲ್ಲಿ ಗಣನೀಯ ಕೃಷಿ ಮಾಡಿದವರು. ಸದ್ಯದ ಪತ್ರಿಕೋದ್ಯಮ ಮತ್ತು ರಾಜಕೀಯ ಸಂಬಂಧದ ಬಗ್ಗೆ, ಕನ್ನಡ ಪತ್ರಿಕೋದ್ಯಮ ಸಾಗುತ್ತಿರುವ ದಿಕ್ಕಿನ ಬಗ್ಗೆ ನಿಮ್ಮ ಅನಿಸಿಕೆಗಳೇನು ?**

**ಪಾವೆಂ:** ಪರದೇಶಗಳ ಪತ್ರಿಕೋದ್ಯಮಕ್ಕೆ ಹೋಲಿಸಿದ್ರೆ ಭಾರತೀಯ ಪತ್ರಿಕೋದ್ಯಮ—ಇಂಗ್ಲಿಷ್ ಪತ್ರಿಕೋದ್ಯಮ ಕೂಡ—ಸಾಕಷ್ಟು ಮುಂದೆ ಬಂದಿದೆ ಅನ್ನೋದಿಲ್ಲ. ಭಾರತೀಯ ಪತ್ರಿಕೋದ್ಯಮ ನಿಷ್ಪಕ್ಷಪಾತ ಅನ್ನೋದಿಲ್ಲ. ಒಂದಲ್ಲ ಒಂದು ರೀತಿಯಿಂದ ಪ್ರೊಫೆಶನಲಿಸಂ ಅಲ್ಲಿ ಆದಷ್ಟು ಇಲ್ಲಿ ಆಗಿಲ್ಲ. ಇಂಗ್ಲೆಂಡಿನ ಕೆಲವು ಪತ್ರಿಕಾ ಬಂಡವಾಳಗಾರರು ಯಾವ ರಾಜಕೀಯ ಪಕ್ಷಕ್ಕೆ ತಮ್ಮ ಬೆಂಬಲವೋ ಆ ರಾಜಕೀಯ ಪಕ್ಷಕ್ಕೆ ತಮ್ಮ ಎಲ್ಲಾ ಪತ್ರಿಕೆಗಳು ಬೆಂಬಲ ಕೊಡ್ಬೇಕು ಅಂತ ತಿಳಿಯೋದಿಲ್ಲ. ಅಂದ್ರೆ ಅಲ್ಲಿಯ ಸಂಪಾದಕರಿಗೆ ಇಲ್ಲಿಯ ಸಂಪಾದಕರಿಗಿರೋದಕ್ಕಿಂತ ಹೆಚ್ಚು ಸ್ವಾತಂತ್ರ್ಯವಿದೆ. ಇಲ್ಲಿ ನಮ್ಮ ಪತ್ರಿಕೆಗಳು ಕೆಲವು ಜನರ ಹಿತಾಸಕ್ತಿಗಾಗಿ ಸುದ್ದಿಯನ್ನು ಹತ್ತಿಕ್ಕುತ್ತವೆ. ಸಂಪಾದಕರುಗಳ ನಿಲುವುಗಳೂ ಬದಲಾಗುತ್ತವೆ. ಉದಾಹರಣೆಗೆ ಎಂ. ಜೆ. ಅಕ್ಬರ್. ಇಂದಿರಾಗಾಂಧಿಯವರ ಕಟು ಟೀಕಾಕಾರರಾಗಿದ್ದ ಅಕ್ಬರ್ ಬಳಿಕ ಕಾಂಗ್ರೆ ಬೆಂಬಲಿಗರಾದ್ರು. ಹೀಗೆ ನಮ್ಮ ಉನ್ನತ ಶ್ರೇಣಿಯ ಪತ್ರಕರ್ತರು ಬಣ್ಣ ಬದಲಾಯಿಸುತ್ತಾರೆ. ಸಣ್ಣ ಸಣ್ಣ ಸ್ಥಳಗಳಲ್ಲಿ, ಸಣ್ಣ ಸಣ್ಣ ಪತ್ರಿಕೆಗಳಲ್ಲಿ ಕೂಡ ಇಲ್ಲಿ ಇದು ತುಂಬ ನಡೀತಿದೆ. ಮಾಜಿ ಮುಖ್ಯಮಂತ್ರಿ ಗುಂಡೂರಾವ್ ಉಡುಪಿಗೆ ಬಂದಾಗ ಬೆಂಗಳೂರಲ್ಲಿ 'ಪ್ರಜಾವಾಣಿ'ಗೆ ಅಟ್ಯಾಕ್ ಆಯ್ತು. ರಾಜಕೀಯ ಒತ್ತಡದಿಂದ ಸಂಪಾದಕರ ವಜಾ ಆಗುವ ಪ್ರಕರಣಗಳೂ ಇಲ್ಲಿ ನಡೀತವೆ.

● **ಸ್ವಾತಂತ್ರ್ಯಪೂರ್ವದಲ್ಲಿ ಕನ್ನಡ ಪತ್ರಿಕೋದ್ಯಮ ಈಗಿರುವುದಕ್ಕಿಂತ ಚೆನ್ನಾಗಿತ್ತೆ ?**

**ಪಾವೆಂ:** ಇಲ್ಲ. ಆದ್ರೆ ಇಂಗ್ಲಿಷ್ ಪತ್ರಿಕೋದ್ಯಮದಲ್ಲಿ ಏನೇ ಆದರೂ ಸತ್ಯವನ್ನೇ ವರದಿ ಮಾಡುವ ಪತ್ರಿಕೆಗಳಿದ್ದವು. ಉದಾಹರಣೆಗೆ, ಮುಂಬಯಿಯಲ್ಲಿ 'ದಿ ಇಂಡಿಯನ್ ಸೋಶಿಯಲ್ ರಿಫಾರ್ಮರ್' ಅಂತ ಒಂದು ಪತ್ರಿಕೆ ಇತ್ತು. ಅದಕ್ಕೆ ಹೆಚ್ಚೆಂದರೆ ಎರಡು ಸಾವಿರ ಪ್ರಸಾರ ಇದ್ದಿರಬಹುದು. ಇಂದೋರಿನ ಮಹಾರಾಜ ಹೆಣ್ಣೊಬ್ಬಳಿಗೆ ಸಂಬಂಧಿಸಿ ಒಂದು ಕೊಲೆ ಮಾಡಿಸಿದ. ಆ ಸುದ್ದಿಯನ್ನು ಬೇರೆ ಪತ್ರಿಕೆಗಳು ವರದಿ ಮಾಡ್ಲಿಲ್ಲ. 'ದಿ ಇಂಡಿಯನ್ ಸೋಶಿಯಲ್ ರಿಫಾರ್ಮರ್' ಸಂಪಾದಕ ನಟರಾಜನ್

# "ಬ್ರಾಹ್ಮಣ ಸಾಹಿತಿಗಳು ಬೇರೆ ಜಾತಿಯ ಸಾಹಿತಿಗಳಿಗಿಂತ ಹೆಚ್ಚು ಸಂಭಾವಿತರು ಅಂತ ನಾನು ನಂಬೋದಿಲ್ಲ"

## — ಪಾ. ವೆಂ. ಆಚಾರ್ಯ



ವಿಳಾಸ: _82, ಕೆ.ಎಚ್.ಬಿ. ಕಾಲೋನಿ,
ಹುಬ್ಬಳ್ಳಿ—580 032.



## ಸ್ವಗತ

● ಡಾ| ಹಾ. ಮಾ. ನಾಯಕ
ವಿಳಾಸ: 'ಗೋಧೂಳಿ',
ಜಯಲಕ್ಷ್ಮೀಪುರಂ, ಮೈಸೂರು – 570 012.

# ಅಗಲಿದ ಆಚಾರ್ಯರು

ಕನ್ನಡ ಕಂಡ ಅಪರೂಪದ ಪತ್ರಕರ್ತರಾದ ಸಾಹಿತಿ ಪಾ. ವೆಂ. ತೀರಿಕೊಂಡ ವಾರ್ತೆಯನ್ನು ಕೇಳುತ್ತ, ಅದನ್ನು ನಂಬಬೇಕೆ ಎನ್ನಿಸಿತು. ಹುಬ್ಬಳ್ಳಿಯ ಏಳು ಸಂಸ್ಥೆಗಳು ಸೇರಿಕೊಂಡು, ಮೇ ಒಂದರಂದು ಅವರಿಗೆ ಒಂದು ಸನ್ಮಾನ ಸಮಾರಂಭವನ್ನು , ವ್ಯವಸ್ಥೆಗೊಳಿಸಿದ್ದವು. ಅದರಲ್ಲಿ ಭಾಗವಹಿಸಿ ಹಿಂದಿನ ದಿನವಷ್ಟೇ ಮೈಸೂರಿಗೆ ಬಂದಿದ್ದೆ. ಮೇ ನಾಲ್ಕರಂದು ಆಚಾರ್ಯರು ತೀರಿಕೊಂಡರು. ಜೀವ ಸಾವುಗಳ ನಡುವಿನ ಅಂತರ ಎಷ್ಟು ಸೂಕ್ಷ್ಮವಾದುದೆಂಬುದನ್ನು ಈ ಸಂದರ್ಭ ಮತ್ತೊಮ್ಮೆ ದೃಢಪಡಿಸಿತು. ಹುಬ್ಬಳ್ಳಿಯ ಕಾಳಮ್ಮನ ಅಗಸಿಯ ಆರ್.ಎಂ. ಜೋಶಿ ಕಲ್ಯಾಣ ಮಂಟಪದಲ್ಲಿ, ಆ ಸನ್ಮಾನ ಸಮಾರಂಭದಲ್ಲಿ, ಅವರನ್ನು ನೋಡಿದ್ದೇ ಕೊನೆಯದಾಯಿತು. ಬೀಳ್ಕೊಡುವ ಮೊದಲು ಅವರು ನನ್ನನ್ನು ಕೇಳಿದ ಪ್ರಶ್ನೆ, "ಈ ಕಡೆ ಮತ್ತೆ ಯಾವಾಗ?" ನಾನು ನಗುತ್ತ ಹೇಳಿದೆ "ಬರೋಣ" ನಾನು ಮತ್ತೆ ಹೋಗಬಹುದು. ಆದರೆ ಆಚಾರ್ಯರು ಇರುವುದಿಲ್ಲ; ಅವರನ್ನು ನಾನು ನೋಡುವುದಿಲ್ಲ. ಇದೀಗ ದುಃಖದ ಸಂಗತಿ.

ಪಾವೆಂ ಆಚಾರ್ಯರಿಗೆ ಪತ್ರಿಕೋದ್ಯಮದಲ್ಲಿ ಸಲ್ಲಿಸಿದ ಶ್ರೇಷ್ಠ ಸೇವೆಗಾಗಿ ಗೊಯೆಂಕಾ ಪ್ರಶಸ್ತಿ ಬಂದಾಗ ಅವರನ್ನು ಅಭಿನಂದಿಸಿ ಈ ಅಂಕಣದಲ್ಲಿ ಬರೆದು ಬಹಳ ದಿನ ಆಗಿಲ್ಲ; ಬರೆದ ಮಸಿ ಆರಿಲ್ಲ. ಅವರಿನ್ನೂ ಆ ಪ್ರಶಸ್ತಿಯನ್ನೂ ಸ್ವೀಕರಿಸಿರಲಿಲ್ಲ. ಆದರೂ ಅವರು ಹೊರಟೇ ಹೋದರು. ಒಂದು ಕೌಟುಂಬಿಕ ಕೆಲಸಕ್ಕಾಗಿ ಅವರು ದಕ್ಷಿಣ ಕನ್ನಡ ಜಿಲ್ಲೆಗೆ ಹೋಗಿ ಬಂದಿದ್ದರು; ಮುಗಿಲು ಮಳೆಗಳ ವಾತಾವರಣ ಅವರ ಆರೋಗ್ಯವನ್ನು ಎಂದಿನಂತೆ ಕೆಡಿಸಿತ್ತು; ಗೋಕಾಕರ ಸಾವಿನ ಸುದ್ದಿ ಮನಸ್ಸಿನ ಮೇಲೆ ಬಹಳ ಪರಿಣಾಮವನ್ನುಂಟು ಮಾಡಿತ್ತು. ಇದೆಲ್ಲದರಿಂದ ಅವರು ಬಳಲಿದ್ದರು ವಾಸ್ತವವಾಗಿ ಹುಬ್ಬಳ್ಳಿಯ ಆತಿಥೇಯ ಬಳಗದವರು ಸಮಾರಂಭಕ್ಕೆ ಆಚಾರ್ಯರನ್ನು ಕರೆತರಬೇಕೆ ಎಂಬುದನ್ನು ತೀವ್ರವಾಗಿ ಆಲೋಚಿಸುತ್ತಿದ್ದರು. ವೈದ್ಯರು, ಸಮಾರಂಭದಲ್ಲಿ ಭಾಗವಹಿಸಬಹುದೆಂದೂ, ಆದರೆ ಅದು ದೀರ್ಘಕಾಲದ್ದಾಗಿರಬಾರದೆಂದೂ ಸೂಚಿಸಿದ್ದರು. ಆದ್ದರಿಂದ ನಾವು ಸಮಾರಂಭವನ್ನು ಅರ್ಧ ಗಂಟೆಗಿಂತ ಹೆಚ್ಚು ಹೊತ್ತು ನಡೆಸಬಾರದೆಂದು ತೀರ್ಮಾನಿಸಿದೆವು. ಸಮಾರಂಭ ನಲುವತ್ತು ನಿಮಿಷ ನಡೆಯಿತು. ಆಚಾರ್ಯರು ಮಹಡಿ ಹತ್ತಿ ಸಭಾಂಗಣಕ್ಕ ಬಂದಿದ್ದರು. ಈ ಬಳಲಿಕೆಯೂ ಅವರ ಸಾವಿಗೆ ಕಾರಣವಾಗಿದ್ದಿರಬಹುದು.

ಆ ಕೊನೆಯ ಸಮಾರಂಭದಲ್ಲಿ ಆಚಾರ್ಯರು ಉತ್ಸಾಹದಿಂದಲೇ ಮಾತನಾಡಿದರು. ಅವರು ಮಾತು ನಿಲ್ಲಿಸುವ ಸೂಚನೆ ಕಂಡು ಬರದಿದ್ದಾಗ ಅವರ ವೈದ್ಯರೇ ಅವರಿಗೆ ಸಾಕು ಮಾಡುವಂತೆ ಸೂಚಿಸಿದರು. ಆಚಾರ್ಯರು ತಮ್ಮ ಕೊನೆಯ ಭಾಷಣದಲ್ಲಿ ಹೇಳಿದ್ದರು: "ನನ್ನ ಪಾಲಿಗೆ ಬಂದ ಕೆಲಸವನ್ನು ನಾನು ಪ್ರಾಮಾಣಿಕತೆಯಿಂದ ಮಾಡಿದ್ದೇನೆ. ನನ್ನ ಬರಹಗಳನ್ನು ಓದುಗರು ನನ್ನ ನಿರೀಕ್ಷೆಗೂ ಮೀರಿ ಮೆಚ್ಚಿಕೊಂಡಿದ್ದಾರೆ. ಈ ಹೊತ್ತಿನ ಸಮಾರಂಭವಾದರೂ ಇದಕ್ಕೊಂದು ಸಾಕ್ಷಿ. ನನ್ನ ಕೆಲಸ ಸಾರ್ಥಕವಾಯಿತೆಂದು ನಂಬಿದ್ದೇನೆ. ಇದಕ್ಕಿಂತ ದೊಡ್ಡ ಪ್ರಶಸ್ತಿ ಬೇಕಾಗಿಲ್ಲ." ಅದೇ ಸಂದರ್ಭದಲ್ಲಿ ಅವರ ಕೊನೆಯ ಪುಸ್ತಕ 'ಮಂಜೂಷಾ'ವನ್ನು ಬಿಡುಗಡೆ ಮಾಡುವ ಅದೃಷ್ಟವೂ ನನ್ನದಾಗಿತ್ತು. ಪುಸ್ತಕವನ್ನು ಬಿಡುಗಡೆ ಮಾಡಿ ಅದರ ಒಂದು ಪ್ರತಿಯನ್ನು ಅವರಿಗೆ ಕೊಟ್ಟೆ. ತಮ್ಮ ವಿಶಿಷ್ಟವಾದ ನಗೆಯನ್ನು ಚೆಲ್ಲುತ್ತ ಅವರು ಅದನ್ನು ಸ್ವೀಕರಿಸಿದರು. ಆ ಪುಸ್ತಕದ ಹಾಳೆಗಳನ್ನು ತಿರುವಿಹಾಕುತ್ತ ಕುಳಿತ ಆಚಾರ್ಯರ ಚಿತ್ರ ನನ್ನ ಮನಸ್ಸಿನಲ್ಲಿ ಊರಿ ನಿಂತಿದೆ. ಅದು ಸುಲಭವಾಗಿ ಮಾಸುವಂಥದ್ದಲ್ಲ.

ಪತ್ರಿಕೋದ್ಯಮ ಎಂದರೆ ನಮ್ಮಲ್ಲಿನ ಒಂದು ಸಾಮಾನ್ಯ ಕಲ್ಪನೆ ದಿನ ಪತ್ರಿಕೆಗಳಿಗೆ ಮತ್ತು ವಾರಪತ್ರಿಕೆಗಳಿಗೆ ಮತ್ತು ಸಂಬಂಧಪಟ್ಟದ್ದು. 'ಕಸ್ತೂರಿ'ಯಂಥ ಪತ್ರಿಕೆ ಗಮನಕ್ಕೇ ಬರುವುದಿಲ್ಲ! ಆದರೆ 'ಕಸ್ತೂರಿ'ಯಂಥ ಪತ್ರಿಕೆಯೇ ಆಚಾರ್ಯರಿಗೆ ಈ ರಾಜ್ಯ ಪ್ರಶಸ್ತಿಯನ್ನು ಗಳಿಸಿಕೊಟ್ಟಿತು ಎನ್ನುವುದು ಒಂದು ವಿಶೇಷ. ಗೊಯೆಂಕಾ ಪ್ರಶಸ್ತಿಯನ್ನು ಇದುವರೆಗೆ ಪಡೆದವರೆಲ್ಲ ಕೇವಲ ಪತ್ರಕರ್ತರು; ದೈನಂದಿನ ಪತ್ರಿಕೆಗಳಿಗೇ ಸಂಬಂಧಿಸಿದವರು, ಆಚಾರ್ಯರೂ ಪತ್ರಕರ್ತರು ಜೊತೆಗೆ ಸಾಹಿತಿ ಕೂಡ. 'ಕಸ್ತೂರಿ'ಯ ಸ್ಥಾಪಕ ಸಂಪಾದಕರಾಗಿ, ಅದಕ್ಕೊಂದು ವಿಶಿಷ್ಟ ವ್ಯಕ್ತಿತ್ವವನ್ನೇ ದೊರಕಿಸಿಕೊಟ್ಟು ಅವರು ಗೊಯೆಂಕಾ ಪ್ರಶಸ್ತಿ ಪಡೆದರು. ಈ ಪ್ರಶಸ್ತಿ ಪಡೆದ ಈ ಬಗೆಯ ಪತ್ರಕರ್ತರಲ್ಲಿ ಆಚಾರ್ಯರೇ ಮೊದಲಿಗರು! ಇದು ಅಭಿಮಾನದ ಮಾತು.



ಕನ್ನಡ ಲೇಖಕರಾಗಿ ಪಾವೆಂ ಹದಿನೈದು ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಎರಡು ಕಿರುಹೊತ್ತಗೆಗಳು. ಮಿಕ್ಕ ಹದಿಮೂರು ಪುಸ್ತಕಗಳಲ್ಲಿ ಎರಡು ಅನುವಾದಗಳು. ಅನುವಾದಗಳಲ್ಲಿ ಒಂದು ಬಂಗಾಳಿ ಕಾದಂಬರಿ, ಇನ್ನೊಂದು ಸಂಸ್ಕೃತ ಸುಭಾಷಿತಗಳ ಸಂಕಲನ. ಅವರ ಮೂರು ಪದ್ಯ ಪುಸ್ತಕಗಳಲ್ಲಿ ಒಂದು ತುಳು ಪದ್ಯಗಳ ಸಂಕಲನ. ಅವರು ಎರಡು ರಾಜಕೀಯ ಮೀಮಾಂಸೆಗಳನ್ನೂ, ಒಂದು ಭಾಷಾಶಾಸ್ತ್ರಕ್ಕೆ ಸಂಬಂಧವಾದ ಪುಸ್ತಕವನ್ನೂ ಪ್ರಕಟಿಸಿರುವುದಲ್ಲದೆ ಐದು ಪ್ರಬಂಧ ಸಂಕಲನಗಳನ್ನು ಕೊಟ್ಟಿದ್ದಾರೆ. ಇವುಗಳಲ್ಲಿ ನಾಲ್ಕು ಹಾಸ್ಯ ವಿಡಂಬನೆಗೆ ಸಂಬಂಧಿಸಿವೆ; ಇನ್ನೊಂದು ಶುದ್ಧ ವೈಚಾರಿಕವಾದುದಾಗಿದೆ. ಕನ್ನಡದ ಹಾಸ್ಯ ಸಾಹಿತ್ಯಕ್ಕೆ ವೈಚಾರಿಕ ನೆಲೆಯನ್ನು ತಂದುಕೊಟ್ಟವರು ಪಾವೆಂ ಒಬ್ಬರೇ ಎಂದರೆ ಉತ್ಪ್ರೇಕ್ಷೆಯ ಮಾತಾಗುವುದಿಲ್ಲ. ಅವರನ್ನು ಓದಿದವರಿಗೆ ಮಾತ್ರ ಅರ್ಥವಾಗುವಂಥದು.

ಅನೇಕ 'ಲೇಖಣಿನಾಮ'ಗಳನ್ನು ಹೊಂದಿದ್ದ ಪಾ.ವೆಂ. ಆಚಾರ್ಯರು 'ಲಾಂಗೂಲಾಚಾರ್ಯ'ರೆಂದೇ ಪ್ರಸಿದ್ಧರು. ಲಾಂಗೂಲಾಚಾರ್ಯರು ಯಾರು? ಅವರ ಪೂರ್ವಾಪರವೇನು? ಎಂಬುದನ್ನು ಕೇಳುವವರಿಗೆ ಅವರೇ ಕೊಟ್ಟ ಉತ್ತರ: "ಋಷೀಮೂಲ, ನದೀಮೂಲ, ಸ್ತ್ರೀಮೂಲ ಮತ್ತು ನಿಮ್ಮ ನೆರೆಮನೆಯ ಸಾಹುಕಾರರ ಸಂಪತ್ತಿನ ಅಥವಾ ನಿಮ್ಮ ಮಾವನು ಕೊಡುವ ವರದಕ್ಷಿಣೆಯ ಮೂಲ ಇವನ್ನು ವಿಚಾರಿಸಬಾರದೆಂಬ ಧರ್ಮಸೂತ್ರ ಅವರಿಗೆ ಗೊತ್ತಿಲ್ಲವೇನೊ! (ಲಾಂಗೂಲಾಚಾರ್ಯರು ಈ ಅಜ್ಞಾತ ಮೂಲಗಳ ಮೊದಲನೇ ಗಣದಲ್ಲಿ ಬರುತ್ತಾರೆ)." ಲಾಂಗೂಲಾಚಾರ್ಯರಿಗೆ ಸಂಬಂಧಿಸಿದ ಎಲ್ಲ ಸಮಸ್ಯೆಗಳನ್ನೂ ಭಾವೀ ಸಂಶೋಧಕರಿಗೆ ಬಿಟ್ಟು ಹೋಗಬೇಕೆಂಬುದು ಅವರ ಅಪೇಕ್ಷೆ. "ಲಾಂಗೂಲಾಚಾರ್ಯರು ಯಾರು? ಅವರ ಲಾಂಗೂಲದ ಅಳತೆಯೇನು? ಅವರು ನರರೇ? ಪಶುವೇ? ಅಥವಾ ನರಪಶುವೇ? ಇತ್ಯಾದಿ ಪ್ರಶ್ನೆಗಳ ಚರ್ಚೆಗೆ ಸಾಕಷ್ಟು ಅವಕಾಶವಿಟ್ಟು ಹೋಗಬೇಕೆಂಬುದು" ಅವರ ಬಯಕೆ.

ಕೆಲವರು ಅವರನ್ನು 'ಸರ್ವಜ್ಞಾಚಾರ್ಯ'ರೆಂದೂ ಕರೆಯುತ್ತಿದ್ದರು! ಪಾವೆಂ ಒಬ್ಬ ಸರ್ವ ಕುತೂಹಲಿಯಾಗಿದ್ದರು. ಅವರ ಆಸಕ್ತಿಗೆ ಬರದ ವಿಷಯವೇ ಇರಲಿಲ್ಲ ಎನ್ನಬಹುದು. ಅವರು ಏನು ಹೇಳಿದರೂ, ಯಾವ ಪ್ರಶ್ನೆ ಎತ್ತಿದರೂ ನಮ್ಮನ್ನು ಆಲೋಚಿಸುವಂತೆ ಮಾಡುವುದು ಅವರ ಬರವಣಿಗೆಯ ಸ್ವಭಾವ. ಸೀರೆಯಿಂದಲೇ ಮಹಾಭಾರತವಾಯಿತೆಂಬುದು ಅವರ ಮಾತು. ದ್ರೌಪದಿ ಫ್ರಾಕ್ ತೊಟ್ಟಿದ್ದಿದ್ದರೆ ಅಥವಾ ತಮಿಳುರೀತಿಯಲ್ಲಿ ಸೀರೆ ಉಟ್ಟಿದ್ದಿದ್ದರೆ ವಸ್ತ್ರಾಪಹರಣಕ್ಕೆ ಅವಕಾಶವಿರುತ್ತಿರಲಿಲ್ಲವೆಂಬುದು ಅವರ ಸಂಶೋಧನೆ. ದಶರಥನಿಗೆ "ಒಂದು ಹೆಂಡತಿ ಕಡಿಮೆ ಇದ್ದಿದ್ದರೆ, ಅಥವಾ ಆ ಹೆಂಡತಿಯ ಮನಸ್ಸು ಸ್ವಲ್ಪ ಕಡಿಮೆ ಗಟ್ಟಿಯಾಗಿದ್ದಿದ್ದರೆ ಅಥವಾ ಅವನ ರಥದ ಗಾಲಿಯ ಕೀಲು ಸ್ವಲ್ಪ ಹೆಚ್ಚು ಗಟ್ಟಿಯಾಗಿದ್ದಿದ್ದರೆ– ರಾಮಾಯಣವೇ ಆಗುತ್ತಿದ್ದಿಲ್ಲ" ಎಂಬುದು ಅವರದೇ ಮಾತು.

ಆಚಾರ್ಯರು ಎತ್ತುವ ಪ್ರಶ್ನೆಗಳು ಮೂಲಭೂತವಾದವು. ಅವರ ಈಚಿನ ಪುಸ್ತಕ 'ಮಂಜೂಷಾ'ದ ಲೇಖನಗಳಲ್ಲಿ ಅವರು ಗಂಭೀರವಾದ ಸಮಸ್ಯೆಗಳನ್ನೆಷ್ಟನ್ನೋ ಎತ್ತಿದ್ದಾರೆ. ಜಾತಿ ಪದ್ಧತಿಯ ವಿಶ್ಲೇಷಣೆ, ಹರಿಜನರ ಸಮಸ್ಯೆಯ ಕೆಲವು ಅನಿಷ್ಟ ಲಕ್ಷಣಗಳು, ಬ್ರಾಹ್ಮಣರೇನು ಮಾಡಬೇಕು, ಬತ್ತಲೆ ಸೇವೆಯ ಸಮಸ್ಯೆಗಳು– ಇಲ್ಲೆಲ್ಲ ಅವರ ಸೂಕ್ಷ್ಮ ಬುದ್ಧಿ ಮನಸ್ಸುಗಳು ಎದ್ದು ತೋರುತ್ತವೆ, "ಈ ದೇಶದ ಅತಿ ದೊಡ್ಡ ವೈಫಲ್ಯ, ಹಿಂದೆ ಮತ್ತು ಇಂದು ಕೂಡ, 'ಬುದ್ಧಿಜೀವಿ' ಜನರ ವೈಫಲ್ಯ" ಎಂದು ಹೇಳುವ ಆಚಾರ್ಯರು ಸ್ವತಃ ಬುದ್ಧಿವಂತರು ಹಾಗೂ ಬುದ್ಧಿ ಜೀವಿ ಆಗಿದ್ದರು. ಆದರೆ ಅವರು ನಮ್ಮ ಇಂದಿನ ಎಷ್ಟೋ ಜನ 'ಬುದ್ಧಿಜೀವಿ'ಗಳೆನ್ನಿಸಿಕೊಂಡವರಂತೆ 'ಬುದ್ಧಿವಂತಿಕೆ'ಯಿಂದಲೇ ಬಾಳುವವರಾಗಿರಲಿಲ್ಲ! ಅವರ ಬದುಕಿನಲ್ಲಿ ದ್ವಂದ್ವವೆಂಬುದು ಇರಲಿಲ್ಲ. ಅವರಲ್ಲಿ ಬೌದ್ಧಿಕ ಪ್ರಾಮಾಣಿಕತೆ ತುಂಬಿತ್ತು. ಶಾಲೆ ಕಾಲೇಜುಗಳಲ್ಲಿ ವ್ಯಾಸಂಗ ಮಾಡದೆ, ನೇರವಾಗಿ ಬದುಕಿನಿಂದಲೇ ಕಲಿತ ಪಾವೆಂ ಸಹಜವಾಗಿಯೇ ಸುಸಂಸ್ಕೃತರಾಗಿದ್ದರು. ತೋರಿಕೆ, ಕೃತಕತೆ ಅವರಲ್ಲಿ ಸುಳಿಯುತ್ತಿರಲಿಲ್ಲ. ತಮಗೆ ತೋರಿದುದನ್ನು, ಅಧ್ಯಯನ ಬಲದಿಂದ ನಂಬಿದುದನ್ನು, ಹೇಳಲು ಅವರೆಂದೂ ಹಿಂತೆಗೆದವರಲ್ಲ. ಅವರ ಈ ಗುಣಗಳೇ ಅವರನ್ನು ನಮ್ಮ ಪ್ರಥಮ ದರ್ಜೆಯ ಚಿಂತಕರಲ್ಲಿ ಒಬ್ಬರನ್ನಾಗಿಸಿದ್ದವು.

ತಮ್ಮ ಪ್ರಬಂಧಗಳಲ್ಲಿ ಅವರು 'ಲೋಕದ ಡೊಂಕ'ನ್ನು ಕಂಡರು; ಮನುಷ್ಯನ 'ವಿಪರೀತ'ಗಳನ್ನು ನೋಡಿದರು; ಜಗತ್ತನ್ನು 'ವಕ್ರದೃಷ್ಟಿ'ಯಿಂದಲೇ ವೀಕ್ಷಿಸಿದರು; ಅಗತ್ಯಬಿದ್ದಾಗ 'ಪ್ರಹಾರ'ಕ್ಕೂ ಅವರು ಹಿಂದೆ ಮುಂದೆ ನೋಡಲಿಲ್ಲ. ಇಂಥ ಆಚಾರ್ಯರು ತಮ್ಮ ನೈಜವಾದ ವೈಚಾರಿಕತೆಯನ್ನು ಸಂದೂಕ ('ಮಂಜೂಷಾ')ದಲ್ಲಿ ಸೇರಿಸಿಟ್ಟರು.! ಅವರು ತಮ್ಮ ಬಗೆಗೇ ಗೇಲಿ ಮಾಡಿಕೊಳ್ಳಲು ಮುಜುಗರ ಪಟ್ಟವರಲ್ಲ. ತನ್ನನ್ನು ಕಂಡು ತಾನೇ ನಗದವನು ಒಳ್ಳೆಯ ಹಾಸ್ಯವನ್ನು ಸೃಷ್ಟಿಸಲಾರ. ಆಚಾರ್ಯರು ತಮ್ಮ ಬಗೆಗೆ ಬೇಕಾದಷ್ಟು ಬರೆದುಕೊಂಡಿದ್ದಾರೆ. ತಾವು ಆರಂಭದಿಂದಲೂ ಸಹ ಬಾಳುವೆ ನಡೆಸಿದ 'ಅಲರ್ಜಿ'ಯ ಬಗೆಗೆ ಸಾಕಷ್ಟು ಬರೆದಿದ್ದಾರೆ.

(67ನೇ ಪುಟಕ್ಕೆ)

# ಟಾಸ್ಮೇನಿಯಾದ ಶಿಕ್ಷಣ ಪದ್ಧತಿ; ಭಾರತಕ್ಕೇ ಒಂದು ಮಾದರಿ



● ಡಾ। ರಾಮಮೋಹನ
ವಿಳಾಸ. 'ಪ್ರೇಮಾ ಕ್ಲಿನಿಕ್',
ಕುಂದಾಪುರ.

**ಆಸ್ಟ್ರೇಲಿಯಾದ ಕೆಳಗಡೆ ಇರುವ ಟಾಸ್ಮೇನಿಯಾ ವೃತ್ತಿಪರ ಶಿಕ್ಷಣವನ್ನು ಪೂರ್ಣವಾಗಿ ಅಳವಡಿಸಿಕೊಂಡಿದೆ. ಟಾಸ್ಮೇನಿಯಾ ಸರಕಾರ ತನ್ನ ಬಜೆಟ್ಟಿನಲ್ಲಿ ರಕ್ಷಣಾಖಾತೆಗೆ ನೀಡುವ ಆದ್ಯತೆಯನ್ನೇ ಶಿಕ್ಷಣಕ್ಕೂ ನೀಡುತ್ತಿದೆ. ಅದು ಕೂಡಾ ಪ್ರಾಥಮಿಕ ಶಿಕ್ಷಣಕ್ಕೆ! ಕಂಪ್ಯೂಟರ್, ಟೈಪ್‌ರೈಟಿಂಗ್ ಮೆಶಿನ್ ಮುಂತಾದ ಆಧುನಿಕ ಸಲಕರಣೆಗಳಿಂದ ಕೂಡಿದ ಇಲ್ಲಿನ ಪ್ರಾಥಮಿಕ ಕಲಿಕೆ 'ಪರೀಕ್ಷೆಯ ಭೂತ'ದಿಂದ ಮುಕ್ತಗೊಂಡಿದೆ. ಮಕ್ಕಳ ಆಸಕ್ತಿ–ಅಭಿರುಚಿಗನುಗುಣವಾಗಿ ಶಿಕ್ಷಕನೇ ಪಾಠ್ಯಕ್ರಮ ರೂಪಿಸಿ, ಬೋಧಿಸುತ್ತಾನೆ. ಇತ್ತೀಚೆಗೆ ಟಾಸ್ಮೇನಿಯಾಗೆ ಭೇಟಿ ನೀಡಿದ ಲೇಖಕರು ಬರೆದಿರುವ ವಿಚಾರಗಳನ್ನು ನಮ್ಮ ಶಿಕ್ಷಣ ವಿಭಾಗ, ಹೆತ್ತವರು ಮತ್ತು ಶಿಕ್ಷಕರು ತಿಳಿದರೆ ಮುಂದಿನ ಬದಲಾವಣೆಗೆ ಅನುಕೂಲವಾದೀತು.**

**ರೋ**ಟರಿ ಸಮೂಹ ಅಧ್ಯಯನ ಗುಂಪಿನ ನಾಯಕತ್ವವನ್ನು ವಹಿಸಿ ನಾನು ಆಸ್ಟ್ರೇಲಿಯಾಕ್ಕೆ ಭೇಟಿ ನೀಡಿದ್ದೆ. ಅಲ್ಲಿನ ಶಿಕ್ಷಣ ವ್ಯವಸ್ಥೆಯನ್ನು ನೋಡಿ ದಂಗು ಬಡಿದು ಹೋದೆ.

### ಪ್ರಾಥಮಿಕ ಶಿಕ್ಷಣಕ್ಕೆ ಪ್ರಥಮ ಆದ್ಯತೆ

ಟಾಸ್ಮೇನಿಯಾದಲ್ಲಿ ವಿದ್ಯಾವಂತರ ಸರಾಸರಿ ಶೇ. 92. ಇಲ್ಲಿ 85,000 ವಿದ್ಯಾರ್ಥಿಗಳಿರುವ 321 ಶಾಲೆಗಳಿವೆ. 8,500 ವಿದ್ಯಾರ್ಥಿಗಳು ವಿಶ್ವವಿದ್ಯಾನಿಲಯ ಮತ್ತು ಮುಂದುವರಿದ ಕಲಿಕೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಪ್ರಾಥಮಿಕ ಶಿಕ್ಷಣಕ್ಕೆ ನೋಂದಣಿ ಮಾಡಲ್ಪಟ್ಟ ವಿದ್ಯಾರ್ಥಿಗಳಲ್ಲಿ ನೂರಕ್ಕೆ ಹತ್ತರಷ್ಟು ಮಾತ್ರ ಕಾಲೇಜಿಗೆ ಹೋಗುತ್ತಾರೆ. ವಿದ್ಯಾಭ್ಯಾಸಕ್ಕೆ ಬಹಳಷ್ಟು ಆದ್ಯತೆಯನ್ನು ನೀಡಲಾಗಿದೆ. ಕುತೂಹಲದ ವಿಷಯವೆಂದರೆ ಸರಕಾರ ರಕ್ಷಣಾಖಾತೆಗೆ ಎಷ್ಟು ನಿಧಿಯನ್ನು ವಿನಿಯೋಗಿಸುವುದೋ ಅಷ್ಟೇ ವಿದ್ಯಾಭ್ಯಾಸಕ್ಕೂ ತೊಡಗಿಸುವುದು ! ಟಾಸ್ಮೇನಿಯಾದಲ್ಲಿ ಪ್ರಾಥಮಿಕ ಶಿಕ್ಷಣ ಕಡ್ಡಾಯ. ಪ್ರಾಥಮಿಕ ಶಿಕ್ಷಣಕ್ಕೆ ಪ್ರಥಮ ಆದ್ಯತೆ. ಟ.ಸಿ.ಎಚ್. ಆದವರು ಪ್ರಾಥಮಿಕ ಶಾಲೆಗೆ ಉಪಾಧ್ಯಾಯರಾದರೆ ಪ್ರೌಢ ಶಾಲೆಯಲ್ಲಿ ಕಲಿಸಲು ಬಿ.ಎಡ್. ಆದವರೇ ಆಗಬೇಕು. ಲಾಂಗ್‌ಫೋರ್ಡ್, ವಿನಿಯಾರ್ಡ್, ಸೊರೆಲ್, ಡೆವನ್ ಪೋರ್ಟ್, ಹೊಬರ್ಟ್, ಲಾನ್‌ಸೆಸ್ಟನ್‌ಗಳಲ್ಲಿರುವ ಪ್ರಾಥಮಿಕ ಶಾಲೆಗಳಿಗೆ ಮತ್ತು ವಿನಿಯಾರ್ಡ್, ಸೊರೆಲ್, ಬರ್ನಿ, ಹೋಬರ್ಟ್ ಮತ್ತು ಲಾನ್‌ಸೆಸ್ಟನ್‌ಗಳಲ್ಲಿ ಪ್ರೌಢ ಶಾಲೆಗಳಿಗೆ ಹೋಗುವ ಸಂದರ್ಭ ನಮ್ಮ ಪಾಲಿಗೆ ಒದಗಿ ಬಂತು.

ಇನ್ನೂ ಒಂದು ಆಸಕ್ತಿ ಕೆರಳಿಸುವ ವಿಷಯವೆಂದರೆ ಹತ್ತನೇ ತರಗತಿಯವರೆಗೆ ಯಾವ ವಾರ್ಷಿಕ ಪರೀಕ್ಷೆಗಳೂ ಇಲ್ಲದಿರುವುದು. ವಿದ್ಯಾರ್ಥಿಗಳು ಆಂತರಿಕ ಮೌಲ್ಯ ಮಾಪನಕ್ಕೆ ಒಳಗಾಗುತ್ತಾರೆ. ಹೀಗೆ ಮಾಡಲು ಕಾರಣ, ಪರೀಕ್ಷೆಗಾಗಿ ತಯಾರಿ ನಡೆಸುವ ವಿದ್ಯಾರ್ಥಿಗಳ ಮೇಲಿನ ಅನಾವಶ್ಯಕ ಹೊರೆ ಮತ್ತು ಮಾನಸಿಕ ಒತ್ತಡವನ್ನು ನಿವಾರಿಸುವುದೇ ಆಗಿದೆ. ಒಂದರಿಂದ ಐದನೇ ತರಗತಿಯವರೆಗೆ ಪಠ್ಯಪುಸ್ತಕಗಳೇ ಇಲ್ಲ! ಸಿಲೆಬಸ್‌ನ ಪ್ರಕಾರ ಅಧ್ಯಾಪಕರೇ ವಿಷಯಗಳನ್ನು ಕಲಿಸುತ್ತಾರೆ. ಹಾಗಾಗಿ ಸಣ್ಣ ಮಕ್ಕಳಿಗೆ ಪುಸ್ತಕದ ಹೊರೆಯನ್ನು ಹೊತ್ತುಕೊಂಡು ಶಾಲೆಗೆ ಹೋಗುವ ಅಗತ್ಯ (ಶಿಕ್ಷೆ)ವೇ ಇಲ್ಲ. 5ನೇ ತರಗತಿಯವರೆಗೆ, ಪ್ರತಿಯೊಂದು ವರ್ಗವೂ ಏಕೋಪಾಧ್ಯಾಯನಿಂದ ಕಲಿಸಲ್ಪಡುವುದು. ಅನಂತರ ಬೇರೆ ಬೇರೆ ವಿಷಯಗಳಿಗೆ, ತತ್‌ಸಂಬಂಧಿತ ಅಧ್ಯಾಪಕರು ಕಲಿಸುತ್ತಾರೆ. ಸಣ್ಣ ತರಗತಿಯವರಿಗೆ ದೊಡ್ಡ ಕೋಣೆಗಳು. ಚಿಕ್ಕ ಮಕ್ಕಳಿಗೆ ಅತ್ತಿಂದಿತ್ತ ತಿರುಗಲು ಹೆಚ್ಚಿನ ಜಾಗದ ಆವಶ್ಯಕತೆ ಇರುತ್ತದೆ. ಕಲಿಕೆಯಲ್ಲಿ ಕೇಳಿ ಕಲಿಯುವುದಕ್ಕಿಂತ ನೋಡಿ ಕಲಿಯುವುದಕ್ಕೇ ಹೆಚ್ಚಿನ ಮಹತ್ತ್ವ. ಉಪಾಧ್ಯಾಯರಿಂದಲೇ ತಯಾರಿಸಲ್ಪಟ್ಟ ಕಾಗದ ರಚನೆಗಳು ಮತ್ತು ಬೇರೆ ವಸ್ತುಗಳ ಮಾದರಿಗಳು ತರಗತಿಗಳಲ್ಲಿ ಉಪಯೋಗಿಸಲ್ಪಡುತ್ತವೆ. ಡೆಸ್ಕ್‌ಗಳನ್ನಾಗಲೀ, ಬೆಂಚುಗಳನ್ನಾಗಲೀ ಅಲ್ಲಿನ ತರಗತಿಗಳಲ್ಲಿ ಕಾಣಲಾಗುವುದಿಲ್ಲ. ಬದಲಾಗಿ ಆರೆಂಟು ಕುರ್ಚಿಗಳಿಂದ ಸುತ್ತುವರಿಯಲ್ಪಟ್ಟ ಮೇಜುಗಳು ವಿದ್ಯಾರ್ಥಿಗಳಿಗಾಗಿ ಇರುತ್ತವೆ. ಅಧ್ಯಾಪಕರು ಮೇಜಿನ ಸುತ್ತ ಗಸ್ತು ಹೊಡೆಯುತ್ತ ಪ್ರತಿಯೊಬ್ಬ ವಿದ್ಯಾರ್ಥಿಯತ್ತ ಗಮನ ಕೊಡುತ್ತಾರೆ.

ಕಂಪ್ಯೂಟರ್ ಮತ್ತು ಟೈಪ್‌ರೈಟರ್‌ಗಳನ್ನು ಪ್ರಾಥಮಿಕ ಶಿಕ್ಷಣದಲ್ಲಿಯೇ ಪರಿಚಯಿಸಲಾಗುತ್ತದೆ. ತರಗತಿಯ ಕೋಣೆಗಳು ಭೂಪಟಗಳು, ಚಾರ್ಟ್‌ಗಳು ಮತ್ತು ಮಾದರಿ ವಸ್ತುಗಳಿಂದ ಅಲಂಕರಿಸಲ್ಪಟ್ಟಿರುತ್ತವೆ. ನಮ್ಮ ದೇಶದಲ್ಲಿನ ತರಗತಿಯ ಕೋಣೆಗಳ ನೆನಪಾದುವು ನಮಗೆ. ಈಗ ಎಲ್ಲ ಬೋಳುಬೋಳು !

### ಆಸಕ್ತಿಗನುಗುಣವಾದ ಮಾರ್ಗದರ್ಶನ

ಪಾಠಕ್ಕೆ ಅನುಗುಣವಾಗಿ ಪಾಠೇತರ ಚಟುವಟಿಕೆಗ[illegible] ಪ್ರಾಮುಖ್ಯವನ್ನು ನೀಡಲಾಗುತ್ತಿದೆ ಇಲ್ಲಿ. ಆಟೋಟಗಳಿಗೆ ನೀಡುವ ಪ್ರೋತ್ಸಾಹ ಮತ್ತು ಸೌಲಭ್ಯ ನಿಜಕ್ಕೂ ಪ್ರಶಂಸನೀಯ. ಪ್ರತಿ ಪ್ರಾಥಮಿಕ ಶಾಲೆಯಲ್ಲಿ ವಿದ್ಯಾರ್ಥಿಗಳಲ್ಲಿ ಮಾತನಾಡುವುದು ಮತ್ತು ಆಲಿಸುವುದರಲ್ಲಿ



ವಾರದ ವ್ಯಕ್ತಿ

# ಪಾ ವೆಂ ಆಚಾರ್ಯ



ಸಾಹಿತಿ, ಪತ್ರಿಕೋದ್ಯಮಿ, ಸಾಹಸಿ, ಪ್ರತಿಭಾಶಾಲಿ.

ಲಾಂಗೂಲಾಚಾರ್ಯ, ಪಾವೆಂ, ರಾಧಾಕೃಷ್ಣರಾವ್, ಮುರಳೀಧರ.

ಹೆಸರು, ಆಸಕ್ತಿ, ಬದುಕು, ಬರಹ ಹಲವು ತೆರ.

ಪಾಡಿಗಾರು ವೆಂಕಟ ರಮಣಾಚಾರ್ಯರು (1915) ಯಾವುದೇ ಹಿಡಿತಕ್ಕೆ ಸಿಕ್ಕುವವರಲ್ಲ. ನಿಜವಾದ ಹೆಸರು ನೋಡಿದರೆ ಸಾಕ್ಷಾತ್ ವೈದಿಕಶಿಖಾಮಣಿ. ಆದರೆ ಇವರಿಗೆ 'ಸಂಧ್ಯಾವಂದನೆ, ಅಗ್ನಿಕಾರ್ಯ ಹೊರತು ಹೆಚ್ಚಿನ ವೈದಿಕ ಶಿಕ್ಷಣ ಸಿಕ್ಕಲಿಲ್ಲ.' 'ಆ ಕಡೆಗೆ ನನಗೆ ಒಲವೂ ಇರಲಿಲ್ಲ. ನಾನೆಂದೂ ದೈವಭಕ್ತನಾಗಿರಲಿಲ್ಲ; ಮುಂದೆಯೂ ಆಗಲಿಲ್ಲ.'

ಇವರದೇ ಮಾತಿನಲ್ಲಿ ಹೇಳುವುದಾದರೆ, ಆಚಾರ್ಯರದು ತರ್ಕಬುದ್ಧಿ. 'ದೇವರೋ ತರ್ಕಬದ್ಧನಲ್ಲ. ಪರಿಣಾಮವಾಗಿ, ರವೀಂದ್ರರು ಹೇಳುವ ಹಾಗೆ, ನನ್ನನ್ನು ನನ್ನ ತಲೆಯ ಮೇಲೆ ನಾನೇ ಹೊತ್ತು' ತಿರುಗಾಡಬೇಕಾದ ಪರಿಸ್ಥಿತಿ.

## ಸ್ವಂತ ವ್ಯಾಸಂಗ

ಪಾವೆಂ ಆಚಾರ್ಯರು ಉದ್ದಕ್ಕೂ ತಮ್ಮ ಭಾರವನ್ನು ತಾವೇ ಹೊತ್ತು ಬೆಳೆದವರು. ಉಡುಪಿಯ ಬಳಿಯ ಕುಂಜಿಬೆಟ್ಟಿನಲ್ಲಿ ಹುಟ್ಟಿದ ಆಚಾರ್ಯರಿಗೆ ಐದನೆಯ ವಯಸ್ಸಿನಲ್ಲೇ ಪಿತೃವಿಯೋಗ. ಎಸ್.ಎಸ್.ಎಲ್.ಸಿ.ಯ ವರೆಗೆ ಶಿಕ್ಷಣ. ಶಾಲೆಗೆ ಪ್ರಥಮರಾದರೂ ಬಡತನದ ಅಡ್ಡಿಯಿಂದಾಗಿ ಇವರು ಕಾಲೇಜು ಮೆಟ್ಟಿಲು ಹತ್ತಲಾಗಲಿಲ್ಲ.

ವಿಧಿಬದ್ಧ ಶಿಕ್ಷಣ ಅಷ್ಟಕ್ಕೇ ಮುಗಿಯಿತಾದರೂ ಸ್ವಂತೇಚ್ಛೆಯ ವ್ಯಾಸಂಗ ನಿಲ್ಲಲಿಲ್ಲ. ಅದರೊಂದಿಗೇ ಅಂಟಿಕೊಂಡ ಬರೆಯುವ ಚಟ. ಪ್ರಾಥಮಿಕ ಶಾಲೆಯಲ್ಲೇ ಪದ್ಯದ ತಮಟೆಯ ಬಡಿತ ಇವರ ಮನಸ್ಸಿನ ಆಳದಲ್ಲಿ ಬಹಳ ಸದ್ದುಮಾಡುತ್ತಿತ್ತು. ನೆರೆಮನೆಯ ಕೋಳಿಯೊಂದು ಆಚಾರ್ಯರ ಮನೆಯಂಗಳಕ್ಕೆ ಹಾರಿ ಬಂದು ಬ್ರಾಹ್ಮಣ್ಯಕ್ಕೆ ಸವಾಲೊಡ್ಡಿದಾಗ ಇವರು ಭಾಮಿನೀ ಷಟ್ಪದಿಯಲ್ಲೇ ಅದನ್ನು ಪ್ರಹರಿಸಿದರು:

ಬಂದಿತಾದರೆ ಕೋಳಿ ಇಲ್ಲಿಗೆ<br>
ಕೊಂದು ಬಿಸುಡುವೆನದನು ಜಾಗ್ರತೆ<br>
ಯಿಂದ ಇರಿದೈ ಕೋಳಿ ಸಾಕುವರೆಲ್ಲರ<br>
ವನಿಯಲಿ॥

–ಎಂದು ಇವರು ಆರ್ಭಟಿಸಿ ಕಲ್ಲು ಬೀರಿದಾಗ ಕೋಳಿ ಹೆದರಿ ಪುರ್ರನೆ ಹಾರಿ ಹೋಗದೆ ಇದ್ದೀತೆ?

ಇಂಥ ಪದ್ಯ ಬರೆಯುವ ಭಯಂಕರ ಚಟಕ್ಕೆ ಕನ್ನಡದ ದ್ವಿಪದಿ ಚೌಪದಿ ಷಟ್ಪದಿಗಳೇ ಅಲ್ಲದೆ ಕಂದ ವೃತ್ತಗಳೂ ಸಿಕ್ಕಿ ಪೇಚಾಡಿದವು. ರವೀಂದ್ರರ ಗೀತಾಂಜಲಿಯ ಛಂದಸ್ಸುಗಳನ್ನೂ ಬಿಡಲಿಲ್ಲ ಇವರು. ಔಷಧಿಯೊಂದರ ಕ್ಯಾಟಲಾಗಿನ ಬಂಗಾಲಿ ಜಾಹಿರಾತಿನ ಅಕ್ಷರಗಳ ನೆರವಿನಿಂದ ಬಂಗಾಲಿ ಲಿಪಿ ಕಲಿತು ದಾಳಿ ಮಾಡಿದರು.

## ಪದ್ಯದ ಚಟ

ಆರಂಭದ ಈ ಆಚಾರ್ಯಕವಿತೋನ್ಮಾದ ಕ್ರಮೇಣ ದೃಢವಾಗಿ ಬೆಳೆದಿತ್ತು. 'ನವನೀರದ'ವಾಗಿ ದಟ್ಟಗೊಂಡು ಹನಿಗರೆಯಿತು. ಇಪ್ಪತ್ತನೆಯ ವಯಸ್ಸಿಗೆ ಆಚಾರ್ಯರು ತಕ್ಕಮಟ್ಟಿಗೆ ಪ್ರಸಿದ್ಧರಾದರು. ರಾಷ್ಟ್ರಬಂಧು, ಜಯಕರ್ನಾಟಕ, ಪ್ರಬುದ್ಧ ಕರ್ನಾಟಕ ಮುಂತಾದ ಪತ್ರಿಗಳಲ್ಲಿ ಆಚಾರ್ಯರ ಕವಿತೆಗಳು ಬೆಳಕು ಕಂಡಿದ್ದವು. ಆದರ್ಶದ ಕನಸು ಕಾಣುತ್ತ ಆಡೊಲೆಸೆಂಟ್ ಆಗಿರಬೇಕಾದ ವಯಸ್ಸಿನಲ್ಲೇ ಆಚಾರ್ಯರಿಗೆ ಪ್ರಾಪ್ತವಯಸ್ಕನ ಪ್ರೌಢ ಚಿಂತನೆ ಬಂದಿತ್ತು. ಇಪ್ಪತ್ತನೆಯ ಹುಟ್ಟುಹಬ್ಬದಂದು ಇವರು ಬರೆದ ಕವಿತೆಯೊಂದು ಇದಕ್ಕೆ ನಿದರ್ಶನ:

ದಿನ ಮುದುರಿ ಇರುಳಾಗಿ<br>
ಇರುಳಳರಿ ಹಗಲಾಗಿ<br>
ಇನಿತು ದಿನ ಕಳೆದುವಿಂತು–ಇದೀಗ<br>
ವರುಷವಿಪ್ಪತ್ತನೆಯದೊದವಿ ಬಂತು.<br>
ಆವ ಸಾರ್ಥಕವಾಯ್ತು<br>
ಜೀವಿತದ ಕಳೆದಿನಿತು<br>
ದಿವಸವೆನ್ನದು ಧರೆಯಲಿ?–ಕೈದುವಿದು<br>
ಬರಿದೆ ಹೊತ್ತನು ಕಳೆದು ದೊರೆಮರೆಯಲಿ.

## ವಿವಿಧ ಉದ್ಯೋಗ

ಕಾವ್ಯ ಲೇಖನದೊಂದಿಗೆ ಜೀವನದ ಹೋರಾಟವೂ ಸಾಗಿತ್ತು. ಸ್ವಲ್ಪಕಾಲ ಇವರು ಉಪಾಧ್ಯಾಯ. ಆ ಕಸಬು ತಮಗೆ ದಕ್ಕುವುದಿಲ್ಲವೆಂದು ತೋರಿದ ಮೇಲೆ ಅದರ ತ್ಯಾಗ. ಮಣಿಪಾಲದಲ್ಲಿ ಪ್ರೆಸ್ಸು, ಬ್ಯಾಂಕು ಮುಂತಾದ ನಾನಾ ಉದ್ಯಮಗಳನ್ನು ತೆರೆದ ಸಾಹಸಿಯೊಬ್ಬರಲ್ಲಿ ಉದ್ಯೋಗ. ಅವರ ಕಂಪೆನಿಗಳು ದಿವಾಳಿಯಾದಾಗ ಆಚಾರ್ಯರ ನಾವೆ ನಡುನೀರಿನಲ್ಲಿ ಮುರಿದುಬಿತ್ತು.

ಈಸಿ ಮದರಾಸಿನ ದಡ ಸೇರಿದ ಆಚಾರ್ಯರು ಅಲ್ಲೂ ಬಲುಕಾಲ ನೆಲೆನಿಲ್ಲಲಾಗಲಿಲ್ಲ. ಮಹಾಯುದ್ಧದ ಬೆದರಿಕೆ. ಬಾಂಬುದಾಳಿಯ ಭೀತಿ.

ಅಲ್ಲಿಂದ ಧಾರವಾಡ, ಸಂಯುಕ್ತ ಕರ್ನಾಟಕದ ಸಂಪರ್ಕ. ಆ ಸಂಸ್ಥೆಯ ಮುದ್ರಣಾಲಯದ ಮೇಲ್ವಿಚಾರಕರಾಗಿ ಸೇರಿ ಬರವಣಿಗೆಗೆ ಜಾರಿಕೊಂಡ ಆಚಾರ್ಯರಿಗೆ 'ಕರ್ಮವೀರ'ದ ಬಳಗ. ಮುಂದೆ 'ಕಸ್ತೂರಿ'ಯ ಆರಂಭ.

ಆಗಲೇ ಆಚಾರ್ಯರಿಗೆ ಹಲವಾರು ಕಾವ್ಯನಾಮ. ಬುದ್ಧಿವಂತ ಓದುಗರಿಗಾಗಿ ಹಲವಾರು ವಿಚಾರಗಳ ಸಂಗ್ರಹ. ಆಚಾರ್ಯರ ಬರವಣಿಗೆಗೆ ನಾನಾ ತೆರ. ಅದೊಂದು ಗಂಭೀರ ಪಂಚಾಮೃತ.

## ಬಾಲದ ಬೆಡಗು

ಬರವಣಿಗೆಯ ಉದ್ದೇಶದಿಂದ ಮಾಡಲೇಬೇಕಾಗಿದ್ದ 'ಪುಡಿ ಓದು'ಗಳ ಪರಿಣಾಮವಾಗಿ ಆಚಾರ್ಯರ ಮನಸ್ಸು ಬಹುಮುಖವಾಗಿ ಹರಿಯುತ್ತಿತ್ತು. ಹನುಮಂತನ ಬಾಲದಂತೆ ನಾನಾ ದಿಕ್ಕುಗಳಲ್ಲಿ ಬೆದಕುತ್ತಿತ್ತು. 'ಕರ್ಮವೀರ'ಕ್ಕಾಗಿಯೇ ಉದ್ಭವವಾದ ಮೂರ್ತಿ 'ಲಾಂಗೂಲಾಚಾರ್ಯ'. ವಾರವಾರವೂ ಓದುಗರೊಡನೆ ಆಚಾರ್ಯರ ಹರಟೆ. 'ಶ್ರೀರಂಗ'ರದಿರಬೇಕೆಂದು ಗುಮಾನಿ ಎಬ್ಬಿಸಿ, ಆಚಾರ್ಯರದೇ ಎಂದು ಸಿದ್ಧವಾಗುವವರೆಗೂ, ಅನಂತರವೂ ಅವ್ಯಾಹತವಾಗಿ ಹರಿದ ಈ ಬಾಲದ ಬೆಡಗು ನಾನಾ ಬಗೆ. ಒಮ್ಮೆ ಅದು ಚಾಮರ, ಇನ್ನೊಮ್ಮೆ ಗೃಹಚಾಮರ, ಮತ್ತೊಮ್ಮೆ ಲಂಕೆಯನ್ನೇ ಸುಡುವ ಜ್ವಾಲೆ. ನಗೆಯ ಮೊನೆ, ವ್ಯಂಗ್ಯದ ಚುಚ್ಚು, ಹಾಸ್ಯದ ಕೇಕೆ. ಎಂದೂ ಹಗೆ ಸಾಧಿಸದ ಹಿರಿಯ ಗುಣ ಅದಕ್ಕೆ. ಪಾ ವೆಂ ಅವರಿಗೆ ಅಗಾಧವಾದ ಅಭಿಮಾನಿ ಬಳಗವನ್ನು ಸಂಪಾದಿಸಿಕೊಟ್ಟದ್ದು ಇವರ ಲಾಂಗೂಲಾಚಾರ್ಯಾವತಾರವೇ.

ಲಾಂಗೂಲಾಚಾರ್ಯ ಎಂಬ ಗುಪ್ತನಾಮ ಇವರ 'ನಿಜವಾದ ಹೆಸರೇ ಎನ್ನುವಷ್ಟು ಮಟ್ಟಿಗೆ' ಅಂಟಿಕೊಂಡಿರುವುದು ಇವರಿಗೆ ಇಷ್ಟವಿಲ್ಲವಂತೆ. ತಾವು ಕವಿತೆ, ರಾಜಕೀಯ, ಸಾಮಾಜಿಕ ಬರಹಗಳನ್ನು ಬರೆದಿರುವುದನ್ನು ಎಲ್ಲರೂ ಮರೆತೇ ಬಿಡುವ ಹಾಗೆ ಅದು ಮಾಡಿತೆಂದು ಆಚಾರ್ಯರೇ ಹೇಳಿಕೊಂಡಿದ್ದಾರೆ. 'ನನಗೆ ಹಾಸ್ಯದೃಷ್ಟಿ ಎಷ್ಟು ಅಸ್ಥಿಗತವಾಯಿತೆಂದರೆ, ಗಂಭೀರ ಕವಿತೆಗಳನ್ನು ಅನಂತರ ಬರೆಯಲೇ ನನ್ನಿಂದಾಗಲಿಲ್ಲ.'

ಇದರಿಂದ ಕಾವ್ಯಲೋಕಕ್ಕೆ ತುಂಬ ನಷ್ಟವಾಯಿತೆಂಬುದು ನಿಜ. ಆದರೆ ಕನ್ನಡದಲ್ಲಿ ವಿರಳವಾದ ಹಾಸ್ಯಪ್ರಕಾರಕ್ಕೆ ಆಚಾರ್ಯರ ಕೊಡುಗೆ ಅಮೂಲ್ಯ. ಇದು ಚಿರಕಾಲ ಉಳಿಯುವ ಸಾಹಿತ್ಯ.

## ಉಳಿಯುವ ಸಾಹಿತ್ಯ

ಆಚಾರ್ಯರು ಎಸ್.ಎಸ್.ಎಲ್.ಸಿ.ಯಿಂದ ಮುಂದೆ ಓದಿದ್ದರೆ, ಪತ್ರಿಕೋದ್ಯಮಕ್ಕೆ ಸೇರದಿದ್ದರೆ ಸಾಹಿತ್ಯ ವ್ಯವಸಾಯದಲ್ಲೇ ಮುಂದುವರಿಯದಿದ್ದರೆ ಏನಾಗುತ್ತಿದ್ದರು?–ಎಂಬುದು ಯಕ್ಷಪ್ರಶ್ನೆ, ವ್ಯರ್ಥ ಪ್ರಶ್ನೆ. ಇದು ಬುದ್ಧಿಯ ಬಲದಿಂದ ಬಿಡಿಸಬಹುದಾದ ಗಣಿತ ಸಮಸ್ಯೆಯಲ್ಲ. ಜೀವನದ ಇಂಥ ಪ್ರಶ್ನೆಗಳಿಗೆ ಉತ್ತರವಿಲ್ಲ.

ಆದರೆ ಆಚಾರ್ಯರಂಥವರ ದುಡಿತಕ್ಕೆ ಕೈತುಂಬ ಸಂಬಳ ಬಂದಿದ್ದರೆ, ಇವರು ನೆಮ್ಮದಿಯಾಗಿದ್ದಿದ್ದರೆ ಇನ್ನೂ ಏಷ್ಟೆಲ್ಲ ಮಾಡುತ್ತಿದ್ದರು, ಎಂಬುದು ಬಹುಶಃ ಸುಲಭವಾಗಿ ಉತ್ತರಿಸಬಹುದಾದ ಪ್ರಶ್ನೆ.

ಪಾ ವೆಂ ಆಚಾರ್ಯರು ಸಾಹಿತಿಯೋ ಪತ್ರಿಕೋದ್ಯಮಿಯೋ? ಯಾವ ಕ್ಷೇತ್ರದಲ್ಲಿ ಇವರಿಗೆ ಮಣೆ ಹಾಕಬೇಕು?

ಎರಡೂ ಪಾಳೆಯಗಳವರು ಇವರನ್ನು ತಮ್ಮವರೆಂದು ಹೇಳಿಕೊಂಡಾರು. ಸಾಹಿತ್ಯಕ್ಕೂ ಪತ್ರಿಕಾವ್ಯವಸಾಯಕ್ಕೂ ನಡುವಣ ಗೆರೆ ಬಲು ತೆಳುವು, ಸದಾ ಹೊರಳುತ್ತಿರುವಂಥದು.

## ಬಗೆಹರಿಯದ ಪ್ರಶ್ನೆ

ಲಾಂಗೂಲಾಚಾರ್ಯರು ತಮ್ಮ ಹುಟ್ಟಿನ ಕುರಿತು ಬರೆದುಕೊಂಡಿರುವ ಹರಟೆಯನ್ನು ಇಲ್ಲಿ ಉಲ್ಲೇಖಿಸಬಹುದು. ಹುಟ್ಟಿದಾಗ ಇವರೂ ನೆರೆಮನೆಯ ಕೋಳಿಯೂ ಏಕಕಾಲದಲ್ಲಿ ಕೂಗಿದವಂತೆ. ಸೂರ್ಯೋದಯವಾದಾಗ ಮರುದಿನ ಹುಟ್ಟುವುದರಿಂದ ಇವರು ಶುಕ್ರವಾರವೇ ಹುಟ್ಟಿದರೆಂದು ಶುಕ್ರವಾರವಾದಿಗಳೂ, ಕೋಳಿ ಕೂಗಿದ್ದರಿಂದ ಮರುದಿನವಾಯಿತಾದ್ದರಿಂದ, ಇವರು ಶನಿವಾರ ಹುಟ್ಟಿದರೆಂದು ಶನಿವಾರವಾದಿಗಳೂ ವಾದಿಸುತ್ತಿದ್ದರಂತೆ. ಈ ವಾದ ಇನ್ನೂ ಬಗೆಹರಿದಿಲ್ಲ.

ಆಚಾರ್ಯರು ಸಾಹಿತಿಯೋ, ಪತ್ರಿಕೋದ್ಯಮಿಯೋ ಎಂಬುದು ಈ ಶುಕ್ರವಾರವಾದಿ–ಶನಿವಾರವಾದಿಗಳ ಜಗಳದಂತೆ ಬಗೆಹರಿಯದ ಪ್ರಶ್ನೆ.

ಒಂದು ಮಾತಂತೂ ನಿಜ: ಆಚಾರ್ಯರ ಸಹೋದ್ಯೋಗಿಗಳು ಕರೆಯುತ್ತಿದ್ದಂತೆ ಇವರು 'ಸರ್ವಜ್ಞಾಚಾರ್ಯ.'

–ಎಚ್ಚೆಸ್ಕೆ

ಪುರಸ್ಕಾರ

# ಸರ್ವಕುತೂಹಲಿ ವಿದ್ವಾಂಸ ಪಾವೆಂ

ಪತ್ರಿಕೋದ್ಯಮದಲ್ಲಿ ಗಣನೀಯ ಸೇವೆ ಸಲ್ಲಿಸಿದ ಹಿರಿಯರಿಗಾಗಿ ಪ್ರತಿವರ್ಷ ನೀಡುವ ಪ್ರತಿಷ್ಠಿತ ಬಿ. ಡಿ. ಗೊಯೆಂಕಾ ನೆನಪಿನ ಪ್ರಶಸ್ತಿಗಳನ್ನು ಇದೀಗ ಪ್ರಕಟಿಸಲಾಗಿದೆ. ಭಾರತೀಯ ಭಾಷೆಗಳಲ್ಲಿನ ಪತ್ರಿಕೋದ್ಯಮ ಸೇವೆಗಾಗಿ ಈ ವರ್ಷದ ಪ್ರಶಸ್ತಿಗೆ ಭಾಜನರಾದವರು ಕನ್ನಡದ ಖ್ಯಾತ ಪತ್ರಕರ್ತ. ಕವಿ. ವಿಮರ್ಶಕ. ವಿದ್ವಾಂಸ ಪಾ. ವೆಂ. ಆಚಾರ್ಯ ಅವರು.

'ಪಾವೆಂ'. 'ಲಾಂಗೂಲಾ ಚಾರ್ಯ' ಮೊದಲಾದ ಹೆಸರುಗಳಿಂದ ಪ್ರಸಿದ್ಧರಾದ ಪಾಡಿಗಾರು ವೆಂಕಟರಮಣ ಆಚಾರ್ಯರು ಹುಟ್ಟಿದ್ದು ಫೆಬ್ರುವರಿ 6. 1915 ರಂದು ಉಡುಪಿಯಲ್ಲಿ. ತಂದೆ ಪಾಡಿಗಾರು ಲಕ್ಷ್ಮೀನಾರಾಯಣಾಚಾರ್ಯರು. ತಾಯಿ ಸೀತಮ್ಮ. ಬಡತನ ಬೆನ್ನಿಗಂಟಿದ್ದರೂ ಅವರದು ಪಾಂಡಿತ್ಯ ಶ್ರೀಮಂತಿಕೆಯ ಮನೆತನ. ತಂದೆ ಲಕ್ಷ್ಮೀನಾರಾಯಣ ಆಚಾರ್ಯರಿಗೆ ಕನ್ನಡ. ಸಂಸ್ಕೃತ ಭಾಷೆಗಳ ಮೇಲೆ ಪ್ರಭುತ್ವ. ಅವರಿಗೆ ವೇದ ಉಪನಿಷತ್ತುಗಳೂ ಕರತಲಾಮಲಕ. ನಾಟಕ. ಹರಿಕಥೆಗಳಲ್ಲಿಯೂ ಆಸಕ್ತಿ. ಹೆಣ್ಣುಮಕ್ಕಳಿಗೆ ವಿದ್ಯಾಭ್ಯಾಸ ಕೊಡಿಸುವುದು ವಿರಳವಾಗಿದ್ದ ಆ ಕಾಲಕ್ಕೆ ತಮ್ಮ ಹೆಣ್ಣುಮಕ್ಕಳಿಗೆ ಓದು ಬರಹ ಕಲಿಸಿದ ಧೀಮಂತರವರು. "ಅವರು ಆ ಅವರಾಗಿರದಿದ್ದರೆ ನಾನು ಈ ನಾನಾಗುತ್ತಿರಲಿಲ್ಲ. ನನ್ನ ಸಾಹಿತ್ಯ. ಕಲಾಸಕ್ತಿಯಲ್ಲಿ ನನ್ನ ಕುತೂಹಲಮಯ ಮಿದುಳಿನಲ್ಲಿ ನನ್ನ ತಂದೆ ಇದ್ದಾರೆ" ಎಂದು ಇಂದಿಗೂ ನೆನೆಯುತ್ತಾರೆ ಪಾವೆಂ.

## ಮೊದಲಿಗ

ಇಂಥ ಸುಸಂಸ್ಕೃತ ಪರಿಸರದ ಹಿನ್ನೆಲೆಯಲ್ಲಿ ಬೆಳೆದ ಪಾವೆಂ ಅವರಿಗೆ ಸಹಜವಾಗಿಯೇ ವಿಚಾರವಂತಿಕೆ. ಕುತೂಹಲ ಪ್ರವೃತ್ತಿಗಳು ಕೈವಶವಾದವು. ಪಾವೆಂ ಯಾವುದೇ ವಿಷಯವನ್ನೂ ಒಂದೇ ಪರಿತಕ್ಕೆ ಗ್ರಹಿಸುತ್ತಿದ್ದರು. ಈ ಏಕಗ್ರಾಹಿತ್ವ ಅವರಿಗೆ ಜನ್ಮಸಿದ್ಧವಾದ್ದು. ಹಾಗಾಗಿ ಶಾಲೆಯಲ್ಲಿ ಪ್ರತಿ ಬಾರಿಯೂ ಮೊದಲಿಗನಾಗಿ ತೇರ್ಗಡೆ.

ಪಾವೆಂ. ಅವರ ಐದನೆಯ ವಯಸ್ಸಿಗೇ ತಂದೆಯ ವಿಯೋಗ. ಓದಿಗಾಗಿ ಪಡಬಾರದ ಕಡುಕಷ್ಟಗಳ ಅನುಭವ. ಹೀಗಿದ್ದೂ ಉಡುಪಿಯ ಅನಂತೇಶ್ವರ ಶಾಲೆಯಲ್ಲಿ ವಿದ್ಯಾಭ್ಯಾಸ ಮುಂದುವರಿಕೆ. ಐದನೆಯ ತರಗತಿಯಲ್ಲಿ ಓದುತ್ತಿದ್ದ ದಿನಗಳಲ್ಲಿ ತಿಂಗಳಿಗೆ ಎಂಟಾಣೆ ಶಾಲಾ ಶುಲ್ಕವೂ ಕೊಡಲಾಗದ ಸ್ಥಿತಿ. ಅನಿರೀಕ್ಷಿತವಾಗಿ ಒಬ್ಬ ಆಸ್ತಿಕ ವಿಧವೆಯಿಂದ ಪ್ರತಿ ತಿಂಗಳೂ ಶಾಲಾ ಶುಲ್ಕ ತುಂಬುತ್ತೇನೆಂಬ ವಾಗ್ದಾನ. ನಂತರದ ಅಭ್ಯಾಸಕ್ಕೆ ಅಣ್ಣ (ದೊಡ್ಡಪ್ಪನ ಮಗ) ವೆಂಕಟದಾಸಾ ಚಾರ್ಯರಲ್ಲಿ ಆಶ್ರಯ. ಶಾಲೆಗೆ ಮೊದಲಿಗನಾಗಿ ಎಸ್.ಎಸ್.ಎಲ್.ಸಿ.ಯಲ್ಲಿ ತೇರ್ಗಡೆ. ಮುಂದೆ ಓದಲಾಗದ ಪರಿಸ್ಥಿತಿಯಿಂದ ವಿದ್ಯಾಭ್ಯಾಸಕ್ಕೆ ಶರಣು.

ಕೆಲ ದಿನಗಳ ನಂತರ ಉಡುಪಿಯ ಕಡಿಯಾಳಿ ಶಾಲೆಯಲ್ಲಿ ಉಪಾಧ್ಯಾಯ ವೃತ್ತಿಗೆ ಆಹ್ವಾನ. ಕೇವಲ ಒಂದೇ ವರ್ಷದಲ್ಲಿ ಶಿಕ್ಷಕ ವೃತ್ತಿಗೆ ಕೈಮುಗಿದರು. ಇದರ ಬಗ್ಗೆ ಬರೆಯುತ್ತ ಅವರೆನ್ನುತ್ತಾರೆ : "ನನ್ನ ತೊಂದರೆಯೆಂದರೆ ಮಕ್ಕಳ ಮಟ್ಟದಲ್ಲಿ ಅವರಿಗೆ ಹೇಳಿಕೊಡಲು ಸಾಧ್ಯವಾಗುತ್ತಿರಲಿಲ್ಲ. ಅದೂ ಎರಡನೇ ತರಗತಿಗೆ! ಶಿಕ್ಷಕನಿಗೆ ಉತ್ತಮ ಮೇಧಾಶಕ್ತಿ ಸಾಲುವುದಿಲ್ಲ. ಮತ್ತೇನೋ ಒಂದು ಬೇಕು. ಆ ಒಂದು ನನಗಿಲ್ಲ."

ನಂತರ ಎಸ್. ಯು. ಪಣಿಯಾಡಿಯವರ ಸ್ವದೇಶೀ ಅಂಗಡಿಯಲ್ಲಿ 'ಮಾರಾಟಗಾರ- ಕಂ- ಕಾರಕೂನ- ಕಂ- ಕಸ ಗುಡಿಸುವವ- ಕಂ- ಗ್ಯಾಸ್ ದೀಪ ಹಚ್ಚುವವ'- ಹೀಗೆ ಏಳು ವರ್ಷ ಕಾಲ ಹಲವು ರೀತಿಯಲ್ಲಿ ದುಡಿದರು. ಅಷ್ಟರಲ್ಲಿ ಪಣಿಯಾಡಿಯವರ ವ್ಯಾಪಾರ ನೆಲ ಕಚ್ಚಿತು. ಪಾವೆಂ ಅತಂತ್ರರಾದರು.

ಅದಾಗಲೆ ಮದುವೆಯಾಗಿ. ಎರಡು ಮಕ್ಕಳ ತಂದೆಯಾಗಿದ್ದ ಪಾವೆಂ ಜೀವನೋಪಾಯಕ್ಕಾಗಿ ಊರು ಬಿಟ್ಟರು. ಮದರಾಸಿಗೆ ಹೊರಟರು. ಅಲ್ಲಿ ಹೊಟೇಲೊಂದರಲ್ಲಿ ಬಿಲ್ ರೈಟರ್ ಆಗಿ ಸೇರಿದರು. ಅಲ್ಲಿಯೂ ಕೆಲಸಕ್ಕೆ ಮನ್ನಣೆಯೇನೊ ಸಿಕ್ಕಿತು. ಆದರೆ ಶ್ರಮಕ್ಕೆ ತಕ್ಕ ಪಗಾರ ಸಿಗಲಿಲ್ಲ. ಅದು ಎರಡನೆ ಮಹಾಯುದ್ಧದ ಅವಧಿಯಾದ್ದರಿಂದ ಜಪಾನಿಯರ ಬಾಂಬ್ ಬೆದರಿಕೆಯ ಪರಿಣಾಮ ಸ್ವಲ್ಪವೇ ಸಮಯದಲ್ಲಿ ಊರಿಗೆ ಹಿಂದಿರುಗಬೇಕಾಯಿತು.



**ಪತ್ರಕರ್ತರಾಗಿ. ಕವಿಯಾಗಿ. ಭಾಷಾ ಶಾಸ್ತ್ರಜ್ಞರಾಗಿ. ವಿಚಾರವಂತರಾಗಿ 'ಪಾವೆಂ' ಕನ್ನಡಿಗರ ಜ್ಞಾನ ತೃಷೆಯನ್ನು ತಣಿಸಲು ಸುಮಾರು 50 ವರ್ಷಗಳಿಂದ ನಿರತರಾಗಿದ್ದಾರೆ. ಸಾಹಿತ್ಯ. ಕಲೆ. ವಿಜ್ಞಾನ. ರಾಜಕೀಯ ಹೀಗೆ ಎಲ್ಲ ಕ್ಷೇತ್ರಗಳಲ್ಲೂ ಶ್ರೀಸಾಮಾನ್ಯನಿಗೂ ಅರ್ಥವಾಗುವ ಹಾಗೆ ಬರೆಯಬಲ್ಲ ಸಾಮರ್ಥ್ಯ ಅವರದ್ದು. ಪತ್ರಿಕೋದ್ಯಮದಲ್ಲಿ ಶ್ರೇಷ್ಠತೆಗಾಗಿ ಈ ಬಾರಿ ಅವರಿಗೆ ಗೊಯೆಂಕಾ ಪ್ರಶಸ್ತಿ ನೀಡಲಾಗಿದೆ.**

● ರಾಜಶೇಖರ್

## ಬರಹಗಾರ

ಮದರಾಸು ತ್ಯಜಿಸಿದ ನಂತರ ಧಾರವಾಡದಲ್ಲಿ ಕೆಲ ದಿನಗಳ ವಾಸ್ತವ್ಯ. ಆಗ 'ಸಂಯುಕ್ತ ಕರ್ನಾಟಕ'ದ ಆಗಿನ ಸಂಪಾದಕ ಮೊಹರೆ ಹನುಮಂತರಾಯರ ಪರಿಚಯ. 1942 ರಲ್ಲಿ 'ಸಂಯುಕ್ತ ಕರ್ನಾಟಕ'ದ ಮುದ್ರಣಾಲಯದ ನಿರ್ವಾಹಕನ ಹುದ್ದೆಗೆ ಆಮಂತ್ರಣ. ಕೆಲ ದಿನಗಳಲ್ಲಿ ಅದೇ ಪತ್ರಿಕೆಯ ಸಂಪಾದಕೀಯ ವಿಭಾಗಕ್ಕೆ ವರ್ಗಾವಣೆ. ಮುಂದೆ ನಿವೃತ್ತಿ ಹೊಂದುವವರೆಗೆ (1975) ಅದೇ ಸಂಸ್ಥೆಯ ಇತರ ಪತ್ರಿಕೆಗಳಾದ 'ಕರ್ಮವೀರ'ದ ಉಪಸಂಪಾದಕರಾಗಿ. 1956 ರಲ್ಲಿ ಆರಂಭದಿಂದ ಸಂಪಾದಕರಾಗಿ ಸುಮಾರು 18 ವರ್ಷಗಳ ಕಾಲ ಅದನ್ನು ಯಾರೂ "ಹೆಸರುಡದ" (ಇದು ಅವರದೇ ಮಾತು) ಹಾಗೆ ನಡೆಸಿಕೊಂಡು ಬಂದು. ಕನ್ನಡಿಗರ ಜ್ಞಾನತೃಷೆಯನ್ನು ತಣಿಸಲು ಶ್ರಮಿಸಿದ ಕೀರ್ತಿ ಪಾವೆಂ ಅವರದು. ಆ ಅವಧಿಯಲ್ಲಿ ಸಾಹಿತ್ಯ. ಕಲೆ. ವಿಜ್ಞಾನ. ರಾಜಕೀಯ- ಹೀಗೆ ಹಲವು ವಿಷಯಗಳ ಬಗೆಗೆ ಇವರು ಬರೆದ ಬರಹಗಳಿಗೆ ಲೆಕ್ಕವಿಲ್ಲ.

ಶಾಲೆಯಲ್ಲಿ ಓದುತ್ತಿದ್ದ ದಿನಗಳಲ್ಲಿಯೇ ಕೈಗೆ ಸಿಕ್ಕ ಪುಸ್ತಕಗಳನ್ನು ಓದುವ. ಕವಿತೆಗಳನ್ನು ಬರೆಯುವ ಚಟ ಅಂಟಿಕೊಂಡಿತು. ಒಂದು ಔಷಧದ ಕ್ಯಾಟಲಾಗಿನ ನೆರವಿನಿಂದ ಬಂಗಾಲಿಯನ್ನು ಕಲಿತರು. ಠಾಗೋರರ 'ಗೀತಾಂಜಲಿ'ಯನ್ನು ಮೂಲದಲ್ಲಿಯೇ ಓದಿದರು. ಹನ್ನೊಂದನೆ ವಯಸ್ಸಿಗೆ ರನ್ನನ 'ಗದಾಯುದ್ಧ' ದಿಂದ ಸ್ಫೂರ್ತಿ ಪಡೆದು ಚಂಪೂ ಮಹಾಕಾವ್ಯ ಬರೆಯಲು ಕಂದವೃತ್ತಗಳನ್ನು ಬರೆದದ್ದೂ ಉಂಟು.

ಪಣಿಯಾಡಿಯವರಲ್ಲಿ ಕೆಲಸ ಮಾಡುತ್ತಿದ್ದ ಅವಧಿಯಲ್ಲಿ ಸಾಹಿತ್ಯ ರಚನೆಯೂ ಮುಂದುವರಿಯಿತು. 'ಜಯ ಕರ್ನಾಟಕ'. 'ರಾಷ್ಟ್ರ ಬಂಧು'. 'ಪ್ರಬುದ್ಧ ಕರ್ನಾಟಕ' ಹಾಗೂ ಸಂಪಾದಕ ಮಂಡಲಿಯಲ್ಲಿ ಇವರೂ ಇದ್ದ 'ಅಂತರಂಗ' ಪತ್ರಿಕೆಯಲ್ಲಿ ಪಾವೆಂ ಅವರ ಲೇಖನಗಳು ಪ್ರಕಟವಾದವು. ಇವರ ಬರವಣಿಗೆಯ ಕಾರ್ಯಕ್ಕೆ ಚಾಲನೆ ಸಿಕ್ಕಿತು.

ಕನ್ನಡ ವಿಡಂಬನ ಸಾಹಿತ್ಯದಲ್ಲಿ ಪಾವೆಂ ಅವರದು ಬಹುದೊಡ್ಡ ಹೆಸರು. 'ಕರ್ಮವೀರ' ಪತ್ರಿಕೆಯಲ್ಲಿ ಇವರು 'ಲಾಂಗೂಲಾ ಚಾರ್ಯ' ಎಂಬ ಹೆಸರಿನಿಂದ ಬರೆದ ಬರಹಗಳು ತುಂಬ ಜನಪ್ರಿಯವಾದವು. ಸಾಮಾನ್ಯ ವಿಷಯಗಳನ್ನೂ ತಮ್ಮ 'ವಕ್ರದೃಷ್ಟಿ' ಯಿಂದ ಅಸಾಮಾನ್ಯವಾಗಿ ಚಿತ್ರಿಸುತ್ತಿದ್ದ ಬರಹಗಳು ಬಹುಬೇಗ ಪಾವೆಂ ಅವರಿಗೆ ಪ್ರಸಿದ್ಧಿಯನ್ನು ತಂದುಕೊಟ್ಟವು.

ಹೊಟ್ಟೆ ಪಾಡಿಗಾಗಿ ಕೈಗೊಂಡ ವಿವಿಧ ವೃತ್ತಿಗಳು ಇವರಿಗೆ ಲೋಕದ ಡೊಂಕನ್ನು ವಿಶಿಷ್ಟ ರೀತಿಯಲ್ಲಿ

## ಪುರಸ್ಕಾರ

ನೋಡಲು ನೆರವಾಯಿತು. ಹಾಗಾಗದಿದ್ದಲ್ಲಿ ಇವರು 'ಲೋಕದ ಡೊಂಕಿ'ನ ಬಗ್ಗೆ ಹೀಗೆ 'ವಿಪರೀತ' 'ಪ್ರಹಾರ' ಮಾಡಲು ಸಾಧ್ಯವಾಗುತ್ತಿರಲಿಲ್ಲ. ಹಾಸ್ಯವನ್ನು ನಿಮಿತ್ತವಾಗಿ ಇಟ್ಟುಕೊಂಡು ಮನುಷ್ಯನ ವಿವಿಧ ಪ್ರವೃತ್ತಿಗಳನ್ನು ಪರಿಣಾಮಕಾರಿಯಾಗಿ ತಮ್ಮ ಬರಹಗಳಲ್ಲಿ ತಂದ ಪರಿ ಅದ್ಭುತವಾದ್ದು. ಅವರು ತಮ್ಮ ಈ ಬಗೆಯ ಬರಹಗಳ ಸಂಕಲನಗಳಿಗೆ ಇಟ್ಟಿರುವ ಹೆಸರುಗಳೂ ಕೂಡ ಈ ಪ್ರಕಾರದ ವೈಶಿಷ್ಟ್ಯ, ವೈವಿಧ್ಯಗಳನ್ನು ಧ್ವನಿಸುತ್ತವೆ.

ಹಲವು ಭಾಷೆಗಳನ್ನು ಬಲ್ಲ ಪಾವೆಂ ಅವರ ಓದು ವಿಶಾಲ ಹರಹಿನದು. ಅವರು ಉತ್ತಮ ಪ್ರಬಂಧಕಾರರೆಂತೋ ಅಂತೆಯೆ ಒಳ್ಳೆಯ ಕವಿ. ವಿಮರ್ಶಕ. ಅನುವಾದಕರು ಕೂಡ. 'ನವನೀರದ' (1952). 'ಕೆಲವು ಪದ್ಯಗಳು' (1978) ಎಂಬ ಎರಡು ಕವನ ಸಂಕಲನಗಳನ್ನು ಕನ್ನಡದಲ್ಲೂ 'ಬಯ್ಯ ಮಲ್ಲಿಗೆ' (1981) ಕವನ ಸಂಕಲನವನ್ನು ತುಳುವಿನಲ್ಲೂ ರಚಿಸಿದ್ದಾರೆ. 'ಡಾ. ಶಂಬಾ : ಪಾವೆಂ ಕಂಡಂತೆ' (1985). ಕಾರಂತರ ಕಾದಂಬರಿಗಳ ಬಗೆಗಿನ ವಿಮರ್ಶೆ ಮೊದಲಾದವು ಇವರ ವಿಮರ್ಶನ ಪ್ರಜ್ಞೆಗೆ ಉದಾಹರಣೆಗಳು. ಬಲಫೂಲರ ಬಂಗಾಲಿ ಕಾದಂಬರಿ 'ವಾಸನಾ' (1950). ಸಂಸ್ಕೃತ ಸುಭಾಷಿತಗಳ ಕನ್ನಡಾನುವಾದ 'ಸುಭಾಷಿತ ಚಮತ್ಕಾರ' (1986)– ಈ ಅನುವಾದಿತ ಕೃತಿಗಳಲ್ಲಿ ಪಾವೆಂ ಅವರು ತಮ್ಮ ಅನುವಾದ ಸಾಮರ್ಥ್ಯವನ್ನು ತೋರಿಸಿದ್ದಾರೆ. ಅಲ್ಲದೆ. ಇವರ 'ರಷ್ಯಾ ರಾಜ್ಯಕ್ರಾಂತಿ' (1943). 'ಸ್ವತಂತ್ರ ಭಾರತ' (1972) ಗದ್ಯ ಕೃತಿಗಳು ಸೂಕ್ಷ್ಮ ಒಳನೋಟಗಳುಳ್ಳ ಬರಹಗಳು.

'ಕಸ್ತೂರಿ' ಮಾಸಿಕದಲ್ಲಿ ಎಲ್ಲರ ಗಮನ ಸೆಳೆಯುವ ಅಂಕಣ ಬರಹ 'ಪದಾರ್ಥ ಚಿಂತಾಮಣಿ'ಯ ಬರಹಗಳು ಇತ್ತೀಚೆಗೆ (1991) ಪುಸ್ತಕ ರೂಪದಲ್ಲಿ ಪ್ರಕಟವಾಗಿದೆ. ಈ ಕೃತಿ ಪಾವೆಂ ಅವರ ಬಹುಶ್ರುತತ್ವಕ್ಕೆ ಸಾಕ್ಷಿ. ಎಂಭತ್ತೆಂಟು ಲೇಖನಗಳನ್ನೊಳಗೊಂಡ ಈ ಪುಸ್ತಕ ಸುಮಾರು ಎಂಟುನೂರು ಪದಗಳ ವ್ಯುತ್ಪತ್ತಿ ಸ್ವರೂಪ. ರೂಪಾಂತರಗಳನ್ನು ತುಂಬ ವಿದ್ವತ್‌ಪೂರ್ಣವಾಗಿ. ಅಷ್ಟೇ ಸರಳವಾಗಿ ತಿಳಿಸುತ್ತದೆ. ಕನ್ನಡದ ಪ್ರಸಿದ್ಧ ಸಂಶೋಧಕ ಡಾ. ಶಂ.ಬಾ. ಜೋಶಿಯವರು 'ಪದಾರ್ಥ ಚಿಂತಾಮಣಿ'ಯ ಬರಹಗಳನ್ನು ನೋಡಿ (ಪುಸ್ತಕ ರೂಪದಲ್ಲಿ ಬರುವುದಕ್ಕೆ ಮುಂಚೆಯೇ) "ಶ್ರೀಯುತರ (ಪಾವೆಂ) ಈ ಕಾರ್ಯವು 'ಮಾನವ ಶಾಸ್ತ್ರ'ದ ಒಂದು ಮಹತ್ತ್ವದ ಅಂಗವಾಗಿದೆ" ಎಂದು ಮೆಚ್ಚಿಗೆ ಸೂಚಿಸಿದ್ದರು. ಪ್ರಸಿದ್ಧ ಅಂಕಣಕಾರ. ಭಾಷಾ ಶಾಸ್ತ್ರಜ್ಞ ಡಾ.ಹಾ.ಮಾ. ನಾಯಕರು "ಮೇಲು ನೋಟಕ್ಕೆ ಲಘುವಾದುವೆಂದು ತೋರುವ. ಆಂತರ್ಯದಲ್ಲಿ ಬಹುಶ್ರುತ ಪಾಂಡಿತ್ಯವನ್ನು ಅಡಗಿಸಿಟ್ಟುಕೊಂಡಿರುವ ಈ ಪುಸ್ತಕದಿಂದ ಆಚಾರ್ಯರು ಕನ್ನಡದ 'ವರ್ಡ್‌ಲೋರ್' (ಪದಪರಂಪರೆ) ಅಧ್ಯಯನಕ್ಕೆ ನಾಂದಿ ಹಾಡಿದ್ದಾರೆ" ಎಂದು ಈ ಪುಸ್ತಕದ ಶ್ರೇಷ್ಠತೆಯನ್ನು ಗುರುತಿಸಿದ್ದಾರೆ.

"ಶೇಕ್ಸ್‌ಪಿಯರ್‌ನಿಂದ ಹಿಡಿದು ಇವತ್ತಿನವರೆಗೆ ಒಂದು ಶಬ್ದ ಯಾವಯಾವ ಅರ್ಥವನ್ನು ವಿಸ್ತರಿಸಿತು ಅಂತ ಇಂಗ್ಲಿಷಿನಲ್ಲಿ ಪುಸ್ತಕ ಬಂದಿದೆ. ನಮ್ಮಲ್ಲಿ ಇಂಥ ಅಧ್ಯಯನ ಆಗುತ್ತಿಲ್ಲ" ಎನ್ನುವ ಪಾವೆಂ ಆಚಾರ್ಯರು ಈ ಕೊರತೆಯನ್ನು ನೀಗಲು ಕನ್ನಡದಲ್ಲಿ ಈ ಪ್ರಕಾರದಲ್ಲಿ ಮೊಟ್ಟಮೊದಲನೆಯದೆಂದು ಹೆಸರಿಸಬಹುದಾದ 'ಪದಾರ್ಥ ಚಿಂತಾಮಣಿ' ಎಂಬ ಒಂದು ಅಪೂರ್ವ ಕೃತಿಯನ್ನು ನೀಡಿದ್ದಾರೆ.

ಪತ್ರಕರ್ತರಾಗಿ. ಕವಿಯಾಗಿ. ಭಾಷಾ ಶಾಸ್ತ್ರಜ್ಞರಾಗಿ. ವಿಚಾರವಂತರಾಗಿ. ಅನೇಕ ಮಂದಿ ತರುಣ ಲೇಖಕರನ್ನು ಬೆಳಕಿಗೆ ತಂದವರಾಗಿ– ಹೀಗೆ ಹಲವು ರೀತಿಯಲ್ಲಿ ನಾಡು– ನುಡಿ ಸೇವೆಯಲ್ಲಿ ನಿರತರಾಗಿರುವ ಸರ್ವಕುತೂಹಲಿ ಪಾವೆಂ ಆಚಾರ್ಯರಿಗೆ ದೊರೆತ ಪ್ರಶಸ್ತಿಗಳು ಹಲವು. 'ನವನೀರದ' ಕವನ ಸಂಕಲನಕ್ಕೆ ಮುಂಬೈ ಸರ್ಕಾರದ ಬಹುಮಾನ. ಪತ್ರಿಕೋದ್ಯಮ ಸೇವೆಗಾಗಿ ಪಿ.ಆರ್. ರಾಮಯ್ಯ ಪ್ರಶಸ್ತಿ, ವರ್ಧಮಾನ ಪ್ರಶಸ್ತಿ, ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ರಾಜ್ಯೋತ್ಸವ ಗೌರವ ಮೈಸೂರಿನಲ್ಲಿ ಸಾರ್ವಜನಿಕ ಸನ್ಮಾನ ಮತ್ತು ಹೆಮ್ಮಿಣಿ ಅರ್ಪಣೆ. ಸಾಹಿತ್ಯ ಪರಿಷತ್ತಿನ ವಜ್ರ ಮಹೋತ್ಸವ ಸನ್ಮಾನ. – ಮುಂತಾಗಿ ಹಲವು ಪ್ರಶಸ್ತಿ ಗೌರವಗಳಿಂದ ಪುರಸ್ಕೃತರಾಗಿದ್ದಾರೆ.

ಇದೀಗ ಬಿ.ಡಿ. ಗೊಯೆಂಕಾ ಪ್ರಶಸ್ತಿ ಪೀಠ ಪಾವೆಂ ಆಚಾರ್ಯರಿಗೆ ಪ್ರಶಸ್ತಿ ನೀಡುವುದರ ಮೂಲಕ ಅರ್ಹವ್ಯಕ್ತಿಗಳನ್ನು ಗೌರವಿಸುವ ಪ್ರಶಸ್ತಿ ಪೀಠಗಳು ಇನ್ನೂ ಉಳಿದಿವೆಯೆಂಬುದನ್ನು ತೋರಿಸಿಕೊಟ್ಟಿದೆ. ●

# ಪಾ.ವೆಂ.ಗೆ ಗೋಯೆಂಕಾ ಪ್ರಶಸ್ತಿ

ಪಿ.ಟಿ.ಐ.

ಮುಂಬೈ, ಫೆ. 4

ಪತ್ರಿಕೋದ್ಯಮದಲ್ಲಿನ ಉತ್ಕೃಷ್ಟತೆಗಾಗಿ ಪ್ರತಿವರ್ಷ ನೀಡಲಾಗುವ ಬಿ. ಡಿ. ಗೋಯೆಂಕಾ ಪ್ರಶಸ್ತಿಗೆ ಈ ಬಾರಿ ಕನ್ನಡದ ಹಿರಿಯ ಪತ್ರಕರ್ತ ಪಾ. ವೆಂ. ಆಚಾರ್ಯರನ್ನು ಆಯ್ಕೆ ಮಾಡಲಾಗಿದೆ.

1991ನೇ ಸಾಲಿನ ಈ ಪ್ರಶಸ್ತಿಯನ್ನು ಮುಂದಿನ ತಿಂಗಳು ಇಲ್ಲಿ ನಡೆಯಲಿರುವ ವಿಶೇಷ ಸಮಾರಂಭದಲ್ಲಿ ಪ್ರದಾನ ಮಾಡಲಾಗುವುದು.

ಇಂಗ್ಲಿಷ್ ಭಾಷೆ ವಿಭಾಗದಲ್ಲಿನ ಪ್ರಶಸ್ತಿಗೆ 'ಎಕನಾಮಿಕ್ ಟೈಮ್ಸ್' ಪತ್ರಿಕೆಯ ಸಂಪಾದಕ ಟಿ. ಎನ್. ನಿನನ್ ಅವರನ್ನು ಆಯ್ಕೆ ಮಾಡಲಾಗಿದೆ.

ಭಾರತೀಯ ಭಾಷೆಗಳ ವಿಭಾಗದಲ್ಲಿನ ಪ್ರಶಸ್ತಿ ಪಾಡಿಗಾರು ವೆಂಕಟರಮಣ ( [illegible] ವೆಂ. ) ಆಚಾರ್ಯ ಅವರಿಗೆ ಸಿಕ್ಕಿದೆ.

ಸಂಪಾದಕರಾಗಿ ಹಾಗೂ ಅಂಕಣ ಬರಹಗಾರರಾಗಿ ದೀರ್ಘ ಕಾಲದಿಂದ ಸಲ್ಲಿಸುತ್ತಿರುವ ಸೇವೆಯನ್ನು ಗುರುತಿಸಿ ವಿದ್ವಾಂಸ ಪಾ. ವೆಂ. ಆಚಾರ್ಯ ಅವರಿಗೆ ಈ ಪ್ರಶಸ್ತಿ ನೀಡಲಾಗಿದೆ. 'ಕಸ್ತೂರಿ'



ಪಾ. ವೆಂ.

ಮಾಸಿಕದ ಸಂಪಾದಕರಾಗಿದ್ದ ಅವರು ಕನ್ನಡ ಗದ್ಯಕ್ಕೆ ಹೊಸ ಆಯಾಮ ನೀಡಿದವರು.

## 'ಲಾಂಗೂಲಾಚಾರ್ಯ'

'ಲಾಂಗೂಲಾಚಾರ್ಯ' ಹೆಸರಿನಲ್ಲಿ 'ಕರ್ಮವೀರ ಸಾಪ್ತಾಹಿಕದಲ್ಲಿ ಜನಪ್ರಿಯ ಹಾಸ್ಯ-ಹರಟೆ ಅಂಕಣವನ್ನು ನಗೆ ಬರಹಗಳನ್ನೂ ಬರೆದ ಪಾ.ವೆಂ. ಆಚಾರ್ಯ ಅವರು 'ಕಸ್ತೂರಿ'ಯ ಪ್ರಾರಂಭದಿಂದ ಅದರ ಸಂಪಾದಕರಾಗಿ ಸೇವೆ ಸಲ್ಲಿಸಿ ಅದನ್ನು ಕನ್ನಡದ ಮಾದರಿ 'ಡೈಜೆಸ್ಟ್' ಆಗಿ ದೀರ್ಘ ಕಾಲ ಬೆಳೆಸಿದರು. ರಾಧಾಕೃಷ್ಣರಾವ್ ಮುರಳೀಧರ ಮೊದಲಾದ ಹೆಸರುಗಳಲ್ಲಿ ಅವರು ಕಸ್ತೂರಿಯಲ್ಲಿ ಬರೆಯುತ್ತಿದ್ದ ಲೇಖನಗಳು ಅಪಾರ ಜನಪ್ರಿಯವಾಗಿದ್ದವು.

ಕಸ್ತೂರಿಯ ಸಂಪಾದಕರಾಗಿ ನಿವೃತ್ತರಾದ ಮೇಲೂ ಅವರ ಬರವಣಿಗೆ ಮುಂದುವರಿದೇ ಇದೆ. ಕನ್ನಡದ ಹಲವು ನಿಯತಕಾಲಿಕಗಳು ಹಾಗೂ ಪತ್ರಿಕೆಗಳಲ್ಲಿ ಆಗಾಗ ಅವರ ಲೇಖನಗಳು ಪ್ರಕಟವಾಗುತ್ತಿವೆ.

ತಮ್ಮದೇ ಆದ ಹೊಸ ಗದ್ಯ ಶ್ರೇಣಿಯನ್ನು ರೂಪಿಸಿಕೊಂಡಿದ್ದ ಅವರು ಅನೇಕ ಉತ್ತಮ ಕವನಗಳನ್ನೂ ಬರೆದಿದ್ದಾರೆ.

ಅಚ್ಯುತ ಪಟವರ್ಧನ್ ಅವರ ಅಧ್ಯಕ್ಷತೆಯಲ್ಲಿನ ಆಯ್ಕೆ ಸಮಿತಿಯಲ್ಲಿ ನ್ಯಾಯತಜ್ಞ ನಾನಿ ಪಾಲ್ಖಿವಾಲಾ, ನ್ಯಾಯಮೂರ್ತಿ ತುಲ್ಜಾಪುರ್‌ಕರ್, ಪತ್ರಕರ್ತ ಬಿ. ಜಿ. ವರ್ಗೀಸ್, ಸಾಹಿತಿ ಡಾ. ಯು. ಆರ್. ಅನಂತಮೂರ್ತಿ ಹಾಗೂ ಪತ್ರಕರ್ತ - ಬರಹಗಾರ ಟಿ. ಜೆ. ಎಸ್. ಜಾರ್ಜ್ ಇದ್ದಾರೆ.

# ಪ್ರತಿಭಾನ್ವಿತ

ಬಿ.ಡಿ. ಗೊಯೆಂಕ ಪ್ರಶಸ್ತಿ ವಿಜೇತ ಪಾ.ವೆಂ. ಆಚಾರ್ಯ ದಂತಗೋಪುರದ ಪಂಡಿತರಲ್ಲ, ಬದುಕಿನ ಬೆಂಕಿಯಲ್ಲಿ ಬೆಂದು ಅಪರಂಜಿಯಾದವರು.

**ಪಾಟೀಲ ಪುಟ್ಟಪ್ಪ**

ಮನುಷ್ಯನೆಂದರೆ ಏನು? ಅವನ ಮೈಯೇ? ಮುಖವೇ? ಅವನು ತೊಟ್ಟ ಬಟ್ಟೆಯೇ? ಮನುಷ್ಯ ಚೆನ್ನಾಗಿದ್ದಾನೆ, ಅಥವಾ ಚೆನ್ನಾಗಿಲ್ಲ ಎನ್ನುವ ಮಾತನ್ನು ನಾವು ಅವನ ಗಾತ್ರ ನೋಡಿ, ಮುಖ ನೋಡಿ ಹೇಳುತ್ತೇವೆಯೇ? ಅವನು ಎಂಥವನು ಎನ್ನುವುದಕ್ಕೆ ಇವು ಒಂದೂ ಅಳತೆಗೋಲು ಅಲ್ಲ. ಮನುಷ್ಯ ಎನ್ನುವವನು ಬೇರೆಯೇ ಇದ್ದಾನೆ.

ಪಾವೆಂ ನೋಡಿದರೆ... ಅವರಲ್ಲಿ ನೋಡುವುದು ಏನಿದೆ? ಆದರೆ, ಅವರು ಕಾಣುವುದಕ್ಕೆ ಬೇಕಾದಷ್ಟು ಇರುವ ಬಹು ಅಪರೂಪದ ವ್ಯಕ್ತಿ. ಅಂಥವರು ಮನುಷ್ಯರಲ್ಲಿ ಅತಿ ವಿರಳ. ಕೆಲವರು ನೋಡುವಂತೆ ಇರುತ್ತಾರೆ; ಆದರೆ ಕಾಣುವಂತೆ ಇರುವುದಿಲ್ಲ. ಇನ್ನೂ ಕೆಲವರು ಕಾಣುವಂತೆ ಇರುತ್ತಾರೆ, ಆದರೆ ನೋಡುವಂತೆ ಇರುವುದಿಲ್ಲ ಕಾಣುವಂತೆ ಇರುವ ಜನರು ಕಾಣುವಂಥ ಕೆಲಸ ಮಾಡಿದ್ದಾರೆ.

ಜೀವನದ ಕುಲುಮೆಯಲ್ಲಿ ಬೆಂದು, ಪಾವೆಂ, ಮಾಗಿ ಒಂದು ಮೂರ್ತಿ ಆಗಿದ್ದಾರೆ. ಒಬ್ಬ ನೀಗ್ರೋ, ಬಿಳಿಯರನ್ನೂ ಕರಿಯರನ್ನೂ ಕುರಿತು ಹೇಳುತ್ತಿದ್ದ ಒಂದು ಮಾತು ದೂರಾನ್ವಯದಿಂದ ಪಾವೆಂ ಅವರಿಗೆ ಹತ್ತುತ್ತದೆ. ದೇವರ ಕುಲುಮೆಯಲ್ಲಿ ಬಿಳಿಯರೂ, ಕರಿಯರೂ [illegible]ಗೊಂಡಿರುವರೆನ್ನುವ ಮಾತನ್ನು ಆ ನೀಗ್ರೋ ಹೇಳುತ್ತಿದ್ದ. 'ಬಿಳಿಯರು ಬೆಯ್ಯದೆ ಹಸಿ ಹಸಿಯಾಗಿ ಉಳಿದರೆಂದು' ಅವನ ವ್ಯಾಖ್ಯೆ. ಕರಿಯರು ಕಪ್ಪಗೇಕೆ ಎನ್ನುವ ಬಗೆಗೆ ಕೂಡ ಅವನಲ್ಲಿ ಸಿದ್ಧ ವಿವರಣೆ ಇದ್ದಿತು: 'ಅವರು ಚೆನ್ನಾಗಿ ಬೆಂದು ಕಪ್ಪಗಾಗಿದ್ದಾರೆ' ಬೇಯುವ ಮಾತು ಬಂದರೆ ಪಾವೆಂ ರವರಷ್ಟು ಬೆಂದವರು ಹೆಚ್ಚು ಜನ ಸಿಕ್ಕುವುದಿಲ್ಲ. ಜೀವನದ ಶ್ರೀಮಂತಿಕೆಯನ್ನು ಹೆಚ್ಚಿಸುವ ಸಮೃದ್ಧ ಸರಕನ್ನು ಅವರು ತಮ್ಮೊಳಗೆ ತುಂಬಿಕೊಂಡಿದ್ದಾರೆ.

ಅವರ ಪ್ರತೀತಿಯನ್ನು ಕೇಳಿ, ಅವರನ್ನು ನೋಡಲು ಹೋದವರು ನಿರಾಸೆಗೊಳ್ಳುತ್ತಾರೆ. ಬೀಚಿ, ತಮ್ಮ ಬಗೆಗೆ ಹೇಳುತ್ತಿದ್ದ ಒಂದು ಮಾತು ಪಾವೆಂ ವಿಷಯದಲ್ಲಿಯೂ ಸತ್ಯವೆನಿಸುವಂತೆ ಇದೆ. ಬೀಚಿ ಒಂದು ದಿನ, ಬಳ್ಳಾರಿಯಲ್ಲಿ ತಮ್ಮ ಮನೆಯ ಮುಂದೆ, ಒಂದು ಹಾಫ್ ಪ್ಯಾಂಟು, ಬನೀನು ತೊಟ್ಟುಕೊಂಡು ಕೂತಿದ್ದರು, ಅವರನ್ನು ನೋಡಲು ಬಂದವರೊಬ್ಬರು, 'ಏ ತಮ್ಮ ನಿಮ್ಮ ಅಪ್ಪ ಇದ್ದಾರೇನು?' ಎಂದು ಕೇಳಿದ್ದ. ಅದೇ ರೀತಿ ಇವರೇ ಪಾವೆಂ ಎಂದು ಹೇಳಿದರೆ ಅನೇಕರಿಗೆ ನಂಬುಗೆ ಆಗುವುದಿಲ್ಲ.



ಪತ್ನಿಯೊಡನೆ ಪಾ.ವೆಂ.

## ಬರಹದಿಂದ ಬದಲಾದ ಹಣೆ ಬರಹ

ಬರಹದ ಆರಂಭದೊಂದಿಗೆ ಮಾನವನ ಹಣೆ ಬರಹವೂ ಬದಲಾಯಿತು. ಬೇರೆ ಬೇರೆ ಭಾಷೆಗಳಲ್ಲಿ ಬರಹಕ್ಕೆ ಇರುವ ಪದಗಳ ಪರಿಶೀಲನೆ ಬರಹದ ಆರಂಭದ ಕಾಲದ ರೀತಿಗಳನ್ನು ಕುರಿತು ಚಾಡಿ ಹೇಳುತ್ತದೆ.

ಕನ್ನಡ ಬರೆಯನ್ನೇ ತೆಗೆದುಕೊಳ್ಳಿ. ಎಲ್ಲ ಲಿಖಿತ ದ್ರಾವಿಡ ಭಾಷೆಗಳಲ್ಲಿಯೂ ಇದಕ್ಕೆ ಜ್ಞಾತಿ ಪದಗಳಿವೆ. (ತಮಿಳು ವರೈ, ತೆಲುಗು ವ್ರಾ, ತುಳು ಬರೆ). ಚಿತ್ರ ಮಾಡುವುದಕ್ಕೂ ಅಕ್ಷರ ಲೇಖನಕ್ಕೂ ಈ ಭಾಷೆಗಳಲ್ಲಿ ಬರೆ ಧಾತುವನ್ನೇ ಬಳಸಲಾಗುತ್ತದೆ. ಪ್ರಾಣಿಗಳ ಮೈಮೇಲೆ ಕಾಸಿ ಮಾಡಿದ ಗುರುತಿಗೂ ಕೋಲಿನಿಂದ ಹೊಡೆದಾಗ ಏಳುವ ಬಾಸುಂಡೆಗೂ ಬರೆ ಎಂದೇ ಹೆಸರು. ಚಿನ್ನವನ್ನು ತಿಕ್ಕಿ ನೋಡುವುದಕ್ಕೆ ಉಪಯೋಗಿಸುವ ಒರೆ ಧಾತುವೂ ಬರೆ ಧಾತುವೂ ಮೂಲದಲ್ಲಿ ಒಂದೇ ಇರಬಹುದು. ಕಸಬರಿಗೆ ಎಂಬಲ್ಲಿ ಬರಿಗೆ ಎಂಬುದೂ ಬರೆ ಧಾತುವಿನ ಮಗುವೇ. ಹೀಗೇ ಬರೆ ಧಾತುವಿಗೆ ಕಡ್ಡಿಯಂಥ ಪದಾರ್ಥದಿಂದ ಕೆರೆದು ಅಥವಾ ಯಾವುದಾದರೂ ಕುರುಹು ಬಿಡಬಲ್ಲ ಪದಾರ್ಥದಿಂದ ತಿಕ್ಕಿ ಗುರುತು ಮಾಡು ಎಂಬರ್ಥ ಮೂಲದಲ್ಲಿ ಇರಬೇಕು. ಮಾನವನ ಅತಿ ಪ್ರಾಚೀನ ಗುಹನಿವಾಸಗಳಲ್ಲಿ ನಮಗೆ ದೊರೆಯುವ ಚಿತ್ರಗಳು ಈ ವಿಧಾನದಲ್ಲಿ ನಿರ್ಮಿಸಿದವುಗಳೆಂದು ಮನಗಂಡರೆ ಲೇಖನ ಕಲೆಯ ಉಗಮ ಹೇಗಾಯಿತೆಂಬುದರಲ್ಲಿ ಬರೆ ಧಾತುವಿನ ಅರ್ಥಕ್ಕೆ ಬೆಂಬಲ ಬರುತ್ತದೆ.

ಸಂಸ್ಕೃತದ ಲೇಖನ ಮತ್ತು ಇಂಗ್ಲಿಷಿನಲ್ಲಿ **writing** ಪದಗಳನ್ನು ಬೆದಕಿದರೆ ಇದಕ್ಕಿಂತಲೂ ಸ್ಪಷ್ಟವಾದ ಸಂಕೇತ ಸಿಗುತ್ತದೆ. ಲಿಖ್ ಧಾತುವಿನ ಮೂಲ ರೂಪ ರಿಖ್ ಆಗಿತ್ತು. ಅಥರ್ವ ವೇದಾದಿ ಬಹು ಪ್ರಾಚೀನ ಭಾರೋಪ್ಯ ದಾಖಲೆಗಳಲ್ಲಿ ರಿಖ್ - ಲಿಖ್ ಧಾತುವಿಗೆ ಕೆರೆ ಕೆರಸು ಕುಕ್ಕು ಮೊದಲಾದ ಅರ್ಥಗಳೇ ಇವೆ. ಸಂಸ್ಕೃತಕ್ಕೆ ಬಹಳ ಹತ್ತಿರವಾದ ಯೂರೋಪಿನ ಲಿಥುವೇನಿಯನ್ ಭಾಷೆಯಲ್ಲಿ ರೇಕ್ತಿ ಎಂದರೆ ಕೊರೆಯುವುದು, ಕೆತ್ತುವುದು ಎಂದೇ ಅರ್ಥ. ಇಂಗ್ಲೀಷಿನ **write** ಹಳೇ ಇಂಗ್ಲೀಷ್ **writan** ಹತ್ತು ಹಳೇ ನಾರ್ಸ್ ಭಾಷೆಯ **rita** ಇವೆರಡೂ ಕೆರೆ ಎಂಬರ್ಥವನ್ನೇ ಕೊಡುತ್ತವೆ. ಸಂಸ್ಕೃತದ ಲಿಖಿತಕ್ಕೆ ಅಥರ್ವವೇದದಲ್ಲಿ ಕೆರೆದ ಕಲೆಯುಂಟುಮಾಡಿದ ಗುರುತು ಎಂಬರ್ಥವೇ ಇದ್ದು ಅದಕ್ಕೆ ಲೇಖನ ಎಂಬರ್ಥ ಬಂದದ್ದು ತಡವಾಗಿ, ಯಾಜ್ಞವಲ್ಕ್ಯ ಸ್ಮೃತಿ, ಸಾಂಖ್ಯಾಯನ ಶ್ರೌತ ಸೂತ್ರಕಾಲದಲ್ಲಿ. ಲೇಖನವೆಂದರೆ ಮೂಲತಃ ಕೆರೆದು ಮಾಡಿದ ಕಾಯಂ ಗುರುತು ಎಂದೇ. ಇದು ಕಂಟವದಿಂದ ತಾಳೆ ಓಲೆಯಮೇಲೆ ಕೆರೆದು ಬರೆಯುವ ಕಾಲನ ಲೇಖನಕ್ಕೂ ಸರಿಯಾಗಿ ಹೊಂದಿಕೊಂಡಿತು. ಮುಂದೆ ಬಣ್ಣ ಬಳಿದು ಮಾಡಿದ ಚಿತ್ರಗಳಿಗೂ ಅಕ್ಷರಗಳಿಗೂ ಲಿಖ್ ಧಾತುವಿನಿಂದ ಬಂದ ಪದಗಳನ್ನೇ ವಿಸ್ತರಿಸಲಾಯಿತು. ಹೀಗೆ ನಮಗೆ ಚಿತ್ರಲೇಖೆಯರು ಪ್ರಾಚೀನ ಪುರಾಣ ಕಾವ್ಯ ಸಾಹಿತ್ಯದಲ್ಲಿ ಸಿಗುತ್ತಾರೆ.

(ಪದಾರ್ಥ ಚಿಂತಾಮಣಿಯಿಂದ)

# ಪಂಡಿತ ಪತ್ರಿಕೋದ್ಯಮಿ



ಪಾವೆಂ

> ಪಾವೆಂ ಬಡತನ ಅನುಭವಿಸಿದರು ಎಂದರೆ ಏನೂ ಹೇಳಿದಂತೆ ಅಲ್ಲ. ಬಡತನ ಬಿಟ್ಟು ಬೇರೆ ಸ್ಥಿತಿ ಅವರ ಅನುಭವಕ್ಕೆ ತಿಳಿದಿಲ್ಲ.

ಪಾಡಿಗಾರು ವೆಂಕಟರಮಣಾಚಾರ್ಯ, ೧೯೧೫ರಲ್ಲಿ, ಉಡುಪಿಯ ಲಕ್ಷ್ಮೀನಾರಾಯಣಾಚಾರ್ಯ ಮತ್ತು ಸೀತಮ್ಮನವರ ಮಗನಾಗಿ ಜನ್ಮವೆತ್ತಿ ಬಂದರು. ಯುದ್ಧದ ಭರಾಟೆಯ ಮಧ್ಯದಲ್ಲಿ ಜನ್ಮವೆತ್ತಿ ಬಂದ ಅವರು ಜೀವನದಲ್ಲಿ ಬಹಳಷ್ಟು ಹೋರಾಟಗಳನ್ನು ಕಂಡವರು.

ಅವರ ತಂದೆ ಲಕ್ಷ್ಮೀನಾರಾಯಣಾಚಾರ್ಯರು ವೇದ ಶಾಸ್ತ್ರಗಳನ್ನು ಬಲ್ಲವರು. ತುಂಬ ಬುದ್ಧಿವಂತರು. ಉಡುಪಿಯ ಅದಮಾರು ಮಠದಲ್ಲಿದ್ದರು. ಅವರಿಗೂ ಸ್ವಾಮಿಗಳಿಗೂ ಮನಸ್ತಾಪವಾಗಿ ಅವರು ಉತ್ತರ ಕನ್ನಡ ಜಿಲ್ಲೆಯ ಸೋಂದೆ ಮಠಕ್ಕೆ ಪಾರುಪತ್ಯಗಾರರಾಗಿ ಹೋದರು. ಆಚಾರ್ಯರ ಕುಟುಂಬವೇ ಅವರೊಟ್ಟಿಗೆ ಅಲ್ಲಿಗೆ ಹೋಗಿದ್ದಿತು. ಪಾವೆಂ ಅವರ ತಂದೆ ಹೆಚ್ಚು ದಿನ ಬದುಕಲಿಲ್ಲ. ಅವರಿಗೆ ನಾಲ್ಕು ವರ್ಷ ಪೂರೈಸಿದ್ದಿತು. ಅಷ್ಟರಲ್ಲಿಯೇ ಅವರು ಸತ್ತು ಹೋದರು. ಕುಟುಂಬದ ಮುಖ್ಯ ಆಧಾರ ಸ್ತಂಭವೇ ಕುಸಿದು ಬಿದ್ದು ಮನೆಮಂದಿಗೆಲ್ಲ ಉಪವಾಸ ವನವಾಸ ಅನುಭವಿಸುವ ಸ್ಥಿತಿ ಬಂದಿತು.

ಸೋಂದೆಯಲ್ಲಿರುವಾಗಲೇ ಪಾವೆಂ ಪ್ರಾಥಮಿಕ ವಿದ್ಯಾಭ್ಯಾಸ ಆರಂಭಗೊಂಡಿದ್ದಿತು. ಅವರ ಅಕ್ಕನೇ ಅವರಿಗೆ ಪ್ರಥಮ ಗುರು. ಆಗಿನ ಕಾಲದಲ್ಲಿ ಅವರ ತಂದೆ, ತಮ್ಮ ಹೆಣ್ಣು ಮಕ್ಕಳನ್ನು ಶಾಲೆಗೆ ಕಳಿಸಿ, ತಕ್ಕಷ್ಟು ವಿದ್ಯೆ ಸಂಗೀತ ಹೇಳಿಸಿದ್ದರು.

ತಂದೆಯ ಪ್ರಭಾವ ಪಾವೆಂರ ಮೇಲೆ ಆಗುವ ಮೊದಲೇ ಅವರು ಕಣ್ಮರೆಯಾಗಿ ಹೋದರು. ಆದರೆ ತಮ್ಮ ತಂದೆಯ ನಿರ್ಭಯ ಪ್ರವೃತ್ತಿ ಅವರಲ್ಲಿ ಅವರರಿಯದಂತೆ ಸೇರಿಕೊಂಡಿದ್ದಿತು. ಆಗಿನ ದಿನಗಳಲ್ಲಿ ಲಕ್ಷ್ಮೀನಾರಾಯಣಾಚಾರ್ಯರು ನಾಟಕಗಳಲ್ಲಿ ವೇಷ ತೊಟ್ಟು, ವೈದಿಕರ ಅವಕೃಪೆಗೆ ತುತ್ತಾಗಿದ್ದರು. ಹರಿಕಥೆಗಳಲ್ಲಿ ಪ್ರವೀಣರಾದ ಅವರು, ಅವುಗಳಲ್ಲಿ ಹೇಳುವ ಹಾಡುಗಳನ್ನು ಬರೆದಿದ್ದರಂತೆ.

ಪಾವೆಂ ಜೀವನದ ಮೇಲೆ ಅವರ ತಾಯಿ ಸೀತಮ್ಮ ಅಕ್ಕ ನೇತ್ರಾವತಿ ಮತ್ತು ಭಾವ ನಾರಾಯಣಾಚಾರ್ಯರ ಪ್ರಭಾವ ಬಹಳಷ್ಟು ಆಗಿದೆ. ತಂದೆ ತೀರಿಹೋದ ಮೇಲೆ, ನಾರಾಯಣಾಚಾರ್ಯ ಮತ್ತು ನಾಗವೇಣಿ ಅವರನ್ನು ನೋಡಿಕೊಂಡರು. ಆ ಕಾರಣದಿಂದಲೇ ಪಾವೆಂ ಮತ್ತು ಅವರ ತಾಯಿ, ಲಕ್ಷ್ಮೀನಾರಾಯಣಾಚಾರ್ಯರ ಜೀವನಾನಂತರವೂ ಮೂರು ವರ್ಷಗಳ ಕಾಲ ಸೋಂದೆಯಲ್ಲಿಯೇ ಉಳಿದರು.

ಉಡುಪಿಗೆ ಹೋಗಬೇಕೆಂದರೆ, ಕುಂಜುಬೆಟ್ಟದಲ್ಲಿ ಒಂದು ಚಿಕ್ಕ ಮನೆಯನ್ನು ಬಿಟ್ಟರೆ, ಒಂದಂಗುಲ ಭೂಮಿಯೂ ಇರಲಿಲ್ಲ.

• 3ನೇ ಪುಟ ನೋಡಿ •

# ಅನನ್ಯತೆಯನ್ನು ಅಳಿಸಿ ಹಾಕುತ್ತಿರುವ ಆಧುನಿಕತೆ




■ ಎನ್. ಶ್ರೀನಿವಾಸ ಉಡುಪ

'ಪಾ.ವೆಂ.' ಎಂಬ ಸಂಕ್ಷಿಪ್ತ ನಾಮದಿಂದ ಖ್ಯಾತರಾಗಿದ್ದ ಪಾಡಿಗಾರು ವೆಂಕಟರಮಣಾಚಾರ್ಯರು (೧೯೧೫--೧೯೯೨) ಸ್ವಂತ ಪರಿಶ್ರಮದಿಂದಲೇ ಬಹುಶ್ರುತತೆಯನ್ನು ದಕ್ಕಿಸಿಕೊಂಡ ಸಾಹಸಿಗಳು; ಕನ್ನಡದ ಹೆಮ್ಮೆಯ 'ಕಸ್ತೂರಿ' ಮಾಸಪತ್ರಿಕೆಯ ಸ್ಥಾಪಕ ಸಂಪಾದಕರಾಗಿ, ಆ ಪತ್ರಿಕೆಯನ್ನು ಅಕ್ಷರಶಃ 'ಜ್ಞಾನಕ್ಕೊಂದು ಬೆಳಕಿಂಡಿ'ಯನ್ನಾಗಿ ರೂಪಿಸಿದರು. ಕರ್ಮವೀರದ ಓದುಗರೊಂದಿಗೆ 'ಲಾಂಗೂಲಾಚಾರ್ಯ'ರಾಗಿ ಪ್ರತಿವಾರವೂ ಅತ್ಯಂತ ಸ್ವಾರಸ್ಯವಾಗಿ ಹರಟೆ ಹೊಡೆಯುತ್ತಿದ್ದ ಪಾ.ವೆಂ. ರವರನ್ನು ಕನ್ನಡಿಗರು ಮರೆಯಲು ಸಾಧ್ಯವೇ ಇಲ್ಲ. ಪತ್ರಿಕೋದ್ಯಮದ ಒತ್ತಡಗಳಲ್ಲೂ ಅವರು ತಮ್ಮ ಸೃಜನಶೀಲತೆಯನ್ನು ಕಳೆದುಕೊಳ್ಳಲಿಲ್ಲ. ಕಸ್ತೂರಿಗಾಗಿ ವಿವಿಧ ವಿಷಯಗಳನ್ನು ಕುರಿತು ಬೇರೆ ಬೇರೆ ಹೆಸರುಗಳಲ್ಲಿ ನೂರಾರು ಮೌಲಿಕ ಲೇಖನಗಳನ್ನು ಬರೆದ ಪಾ.ವೆಂ. ರವರೇ ಕರ್ಮವೀರದಲ್ಲಿ ಲಘುಧಾಟಿಯ ವಿಡಂಬನಾತ್ಮಕ ಹರಟೆಗಳನ್ನೂ ಬರೆದರು. ಪ್ರಹಾರ, ಲೋಕದ ಡೊಂಕು, ವಿಪರೀತ ಎಂಬ ಮೂರು ಸಂಕಲನಗಳಲ್ಲಿ ಪ್ರಕಟವಾಗಿರುವ ಈ ಲಘುಬರಹಗಳು ತುಂಬಾ ಸ್ವಾರಸ್ಯಪೂರ್ಣ ಓದನ್ನು ಒದಗಿಸುವುದು ಮಾತ್ರವಲ್ಲದೆ, ಎಲ್ಲ ಕಾಲಕ್ಕೂ ಸಲ್ಲುವ ಪ್ರಸ್ತುತತೆಯನ್ನೂ ಉಳಿಸಿಕೊಂಡಿವೆ. 'ಪದಾರ್ಥ ಚಿಂತಾಮಣಿ' ಸಂಪುಟಗಳು ಪಾ.ವೆಂ. ರವರ ವಿದ್ವತ್ತಿಗೆ ಸಾಕ್ಷಿ ಹೇಳುವಂತಿವೆ. ಅವರ 'ಸುಭಾಷಿತ ಚಮತ್ಕಾರ' ಒಂದು ಅಪರೂಪದ ಕೃತಿ. ಪಾ.ವೆಂ. ರವರ ಅನುವಾದ ಪ್ರತಿಭೆಯನ್ನು ಪ್ರಕಟಿಸುವಂಥದು. ಕನ್ನಡದಲ್ಲಿ 'ನವನೀರದ' ಮತ್ತು 'ಕೆಲವು ಪದ್ಯಗಳು' ಎಂಬ ಎರಡು ಕವನ ಸಂಕಲನಗಳನ್ನೂ, ತುಳುವಿನಲ್ಲಿ ಒಂದು ಸಂಕಲನವನ್ನು ಪ್ರಕಟಿಸಿರುವ ಪಾ.ವೆಂ. ತಾವೊಬ್ಬ ಸಮರ್ಥಕವಿ ಎಂಬುದನ್ನೂ ಸಾಬೀತು ಪಡಿಸಿದ್ದಾರೆ. ಅವರ ಹಲವು ಕವಿತೆಗಳಲ್ಲಿ ಒಂದು ಬಗೆಯ ವ್ಯಂಗ್ಯ ಮನೋಧರ್ಮ ಕಾಣಿಸುತ್ತದೆ. '... ಎಂಥ ಆದರ್ಶವಾದಿಯ ಕಣ್ಣುಗಳ ಪರೆಯನ್ನೂ ಕಳಚಬಲ್ಲ ಪತ್ರಿಕೋದ್ಯಮಕ್ಕೆ ಇಳಿದದ್ದು' ಇದಕ್ಕೆ ಕಾರಣವಿದ್ದೀತೆಂದು ಅವರೇ ಹೇಳಿಕೊಂಡಿದ್ದಾರೆ.



೧೯೭೮ರಲ್ಲಿ ಪ್ರಕಟವಾದ 'ಕೆಲವು ಪದ್ಯಗಳು' ಎಂಬ ಪುಟ್ಟ ಸಂಕಲನದಲ್ಲಿ ಆಚಾರ್ಯರಿಗೆ ಹೆಸರು ತಂದ 'ಗೋಪಿ', 'ನೆಹರು ಸತ್ತರು', 'ಗೀತಾಧ್ಯಾಯ ೧೯', 'ಹೌಸಿಂಗ್ ಕಾಲನಿ' ಮುಂತಾದ ವಿಶಿಷ್ಟ ಕವಿತೆಗಳಿವೆ. 'ಹೌಸಿಂಗ್ ಕಾಲನಿ' ಎಂಬುದು ಆಧುನಿಕ ಬದುಕಿನ ಏಕತಾನತೆಯನ್ನು ವಿಡಂಬನಾತ್ಮಕವಾಗಿ ಬಿಂಬಿಸುವ ಒಂದು ರಚನೆ. ಯಾಂತ್ರೀಕೃತ ಜಗತ್ತಿನಲ್ಲಿ ವ್ಯಕ್ತಿ ವ್ಯಕ್ತಿಗಳ ನಡುವಣ ವೈವಿಧ್ಯ ಮರೆಯಾಗುತ್ತಿದೆ; ಒಂದೇ ಬಗೆಯ ಯೋಚನೆ, ಒಂದೇ ರೀತಿಯ ಜೀವನ ಶೈಲಿ, ಒಂದೇ ದಿಕ್ಕಿನ ಚಲನೆ ಇವೆಲ್ಲವೂ ಈ ಯುಗದ ಲಕ್ಷಣಗಳಾಗಿ ಜೀವನ ತನ್ನ ಸ್ವಾರಸ್ಯವನ್ನು ಕಳೆದುಕೊಳ್ಳುತ್ತಿದೆ. ಟಿ.ಎಸ್. ಎಲಿಯಟ್ ಈ ಸ್ಥಿತಿಯನ್ನೇ ತನ್ನ 'ಹಾಲೋ ಮೆನ್' ಎಂಬ ಪ್ರಖ್ಯಾತ ಕವಿತೆಯಲ್ಲಿ 'ಷೇಪ್ಸ್ ವಿಥೌಟ್ ಫಾರ್ಮ್ಸ್' ಎಂದು ವರ್ಣಿಸಿರುವುದು. ಸ್ವಂತಿಕೆ, ವಿಶಿಷ್ಟತೆಗಳನ್ನು ಉಳಿಸಿಕೊಳ್ಳಲಾಗದ ಸಮಾಜದ ಅದರಲ್ಲೂ ಭಾರತೀಯ ಸಮಾಜದ ಶೋಚನೀಯ ಪರಿಸ್ಥಿತಿಯನ್ನು ಪಾ.ವೆಂ. ತಮ್ಮ 'ಹೌಸಿಂಗ್ ಕಾಲನಿ'ಯಲ್ಲಿ ಚುಚ್ಚು ವಿಡಂಬನೆಯ ಮೂಲಕ ಚಿತ್ರಿಸಿದ್ದಾರೆ.

**ನಮ್ಮೀ ಹೌಸಿಂಗ್ ಕಾಲನಿಯಲ್ಲಿ। ಮನೆಗಳೆಲ್ಲವೂ ಒಂದೇ ಪ್ಲಾನು**
**ಕೇಳೋದೆಲ್ಲ ರೇಡಿಯೋ ಸಿಲೋನು। (ಹಲ್ಲುಜ್ಜುವುದು ಬಿನಾಕಾದಲ್ಲಿ)**
**ಎಲ್ಲಾರು ತೊಡೋದು ಟೆರ್ಲಿನ್ ಸೂಟೇ**
**ಹಾಕ್ಕೊಳ್ಳೋದು ಬಾಟಾ ಶೂಸೇ (ಸ್ವಂತ ಬೂಟೋ? -ಕುಂಟರಿಗಷ್ಟೇ)**

ಹೀಗೆ ಪ್ರಾರಂಭವಾಗುತ್ತದೆ ಕವಿತೆ. ಹೌಸಿಂಗ್ ಕಾಲನಿಯಲ್ಲಿನ ಎಲ್ಲಾ ಮನೆಗಳೂ ಒಂದೇ ಅಚ್ಚಿನಲ್ಲಿ ಹಾಕಿ ತೆಗೆದಂಥ ಏಕ ರೂಪದ ಮನೆಗಳು. ಅಲ್ಲಿ ವಾಸಿಸುವ ಮಂದಿಯೂ ಹೀಗೇ ಸ್ವಂತ ಚಹರೆಯಿಲ್ಲದವರು. ಅವರ ದಿನಚರಿ, ಉಡುಗೆ, ತೊಡುಗೆ, ಆಹಾರ ವಿಹಾರ ಯಾವುದರಲ್ಲೂ ವೈವಿಧ್ಯವಿಲ್ಲ. ಅಲ್ಲೂ ಸ್ವಂತಿಕೆ ಉಳಿಸಿಕೊಳ್ಳಲು ಪ್ರಯತ್ನಿಸುವ ವ್ಯಕ್ತಿ ಒಂದು ರೀತಿಯಲ್ಲಿ ಅಂಗವಿಕಲನೆನ್ನಿಸಿಕೊಳ್ಳುತ್ತಾನೆ. 'ಸ್ವಂತ ಬೂಟೋ? ಕುಂಟರಿಗಷ್ಟೇ' ಎನ್ನುತ್ತಾರೆ ಕವಿ.

ವ್ಯಕ್ತಿ ವಿಶಿಷ್ಟತೆಯನ್ನು ಉಳಿಸಿಕೊಳ್ಳಲು ಹೆಣಗಾಡುವ ಸ್ತ್ರೀ ಸಮುದಾಯಕ್ಕು ಈ ಪರಾನುಕರಣೆಯ ಭೂತದ ಕಾಟ ತಪ್ಪಿಲ್ಲ. ಅವರಿಗೂ ತಮ್ಮತನವನ್ನು ಕುರಿತು ಸಂಪೂರ್ಣ ಅವಜ್ಞೆ. ಅವರನ್ನು ಕುರಿತು ಕವಿ ಹೇಳುತ್ತಾರೆ:

**ನಮ್ಮೀ ಹೌಸಿಂಗ್ ಕಾಲನಿಯಲ್ಲಿ। ಹೆಂಡರುಗಳ ಎಲ್ಲಾ ಫ್ಯಾಶನ್ನೂ**
**ಈವ್ಸ್ ವೀಕ್ಲೀಲಿ ಪ್ರಿಂಟಾದ್ದೇನೇ। ಅವರು ನಗೋದೂ ಅಳೋದೂನೂ ಮಾರ್ಲಿನ್ ಮನ್ರೋ ಡಿಟ್ಟೋನೇನೇ...**

ಮುಂದೆ ಕಾಣುವ ವ್ಯಂಗ್ಯ ಇನ್ನಷ್ಟು ಹರಿತ. ಕಾಲನಿಯಲ್ಲಿನ ತಮ್ಮ ತಮ್ಮ ಮನೆಗಳನ್ನು ಗುರುತಿಸಲು ಅಲ್ಲಿನ ನಿವಾಸಿಗಳು ದೊಡ್ಡದಾಗಿ ಮನೆಗಳ ನಂಬರ್ ಹಾಕಿಸಿಕೊಂಡಿದ್ದಿರೂ, ರಾತ್ರಿ ವಿದ್ಯುತ್ ಇಲ್ಲದಿದ್ದಾಗ, ತಮ್ಮದಲ್ಲದ ಮನೆಗಳಿಗೆ ಹೋಗಿ, ಇನ್ನೊಬ್ಬರ ಪತ್ನಿಯರೊಂದಿಗೆ ರಾತ್ರಿ ಕಳೆದು, ಬೆಳಿಗ್ಗೆ ಸ್ವಂತ ಮನೆಗೆ ಹಿಂತಿರುಗುವ ಸಂದರ್ಭಗಳೂ ಇವೆ. 'ಅಂದಿನ ರಾತ್ರಿಗೂ, ಹಿಂದಿನ ರಾತ್ರಿಗೂ ಅಂತರ' ಕಾಣದೆ ಅಚ್ಚರಿಗೊಳ್ಳುತ್ತಾರಂತೆ ಕಾಲನಿಯ ಗಂಡಸರು, ತೀರಾ ಖಾಸಗಿಯ ಕ್ಷಣಗಳೂ ಸಾಧಾರಣೀಕರಣಗೊಳ್ಳುವ ಪ್ರಕ್ರಿಯೆಯನ್ನು ಕವಿ ಇಲ್ಲಿ ವಿಡಂಬಿಸಿದ್ದಾರೆ.

ಕಾಲನಿಯ ನಿವಾಸಿಗಳ ಉದ್ಯೋಗದಲ್ಲಿ ಕೂಡಾ ವೈವಿಧ್ಯವಿಲ್ಲ. ಅಲ್ಲಿರುವವರೆಲ್ಲರೂ ಯಾರೋ ಒಬ್ಬ ಬಾಸ್ ಹೇಳುವ ಮಾತುಗಳನ್ನು ಮಕ್ಕಿಕಾಮಕ್ಕಿ ಬರೆದುಕೊಳ್ಳುವ 'ಸ್ಟೆನೋ'ಗಳು ಅರ್ಥಾತ್ ಸ್ವಂತಿಕೆ ಇಲ್ಲದವರು; ಇಲ್ಲವೇ ಒಬ್ಬರನ್ನೊಬ್ಬರು ಅನುಕರಣೆ ಮಾಡುವಂಥವರು. ('ಅವನ ಪ್ಯಾಡನ್ನು ನಾನು ಓದೋದು... ಅವನು ಡಾರ್ಕದಲ್ಲಿ ಟೈಪು ಮಾಡೋದು' ಎಂಬುದರ ವ್ಯಂಗ್ಯವನ್ನು ಗಮನಿಸಬೇಕು.)

ಸ್ವಸ್ವರೂಪವನ್ನು ಕಳೆದುಕೊಳ್ಳುತ್ತಿರುವ ಭಾರತವನ್ನು ದೃಷ್ಟಿಯಲ್ಲಿಟ್ಟು ಪಾ.ವೆಂ. ಬರೆದಿರುವ ಈ ಕವಿತೆ ಬೇಂದ್ರೆಯವರ 'ದುಂಡು ಮೇಜಿನ ಸುತ್ತ ದುಂಡು ದುಂಡು ಮಂದಿ' ಎಂದು ಪ್ರಾರಂಭವಾಗುವ ಒಂದು ಲಘು ಕವಿತೆಯನ್ನು ನೆನಪಿಸುತ್ತದೆ. ಜಾಗತೀಕರಣ ಪ್ರಕ್ರಿಯೆ ಗಾಢವಾಗಿರುವ ಈ ಕಾಲ ಘಟ್ಟದಲ್ಲಿ ಈ ಕವಿತೆ ಇನ್ನಷ್ಟು ಪ್ರಸ್ತುತವೆನ್ನಿಸುತ್ತದೆ. ●

ತರಂಗ ಸಮಗ್ರ ಕುಟುಂಬಕ್ಕೆ ಸಮೃದ್ಧ ಸಾಪ್ತಾಹಿಕ
ಹತ್ತನೆಯ ವರ್ಷ ● ಸಂಪುಟ 10 ಸಂಚಿಕೆ 9 ಮಾರ್ಚ್ 1, 1992



# ಅಂತರಂಗ ಬಹಿರಂಗ

### ಗೋಯೆಂಕಾ ಪ್ರಶಸ್ತಿ ವಿಜೇತ
### ಕನ್ನಡ ಪತ್ರಿಕೋದ್ಯಮದ ಭೀಷ್ಮಾಚಾರ್ಯ

## ಪಾ. ವೆಂ. ಆಚಾರ್ಯ

**ಈ** ವರ್ಷ ಪ್ರದೇಶ ಭಾಷಾ ಪತ್ರಿಕೋದ್ಯಮಿಗೆ ಸಲ್ಲಬೇಕಾದ ಒಂದು ಲಕ್ಷ ರೂಪಾಯಿ ಮೊತ್ತದ ಗೋಯೆಂಕಾ ಪ್ರಶಸ್ತಿ ಹಿರಿಯ ಲೇಖಕ ನಮ್ಮ ಪಾಡಿಗಾರು ವೆಂಕಟರಮಣ ಆಚಾರ್ಯರಿಗೆ ಸಂದಿರುವುದು ಅತ್ಯಂತ ಯೋಗ್ಯವಾಗಿದೆ. ಇದರಿಂದ ಕನ್ನಡಿಗರಿಗೆ ಆನಂದ, ಅಭಿಮಾನ ಉಂಟಾಗಿದೆ.

ಪತ್ರಿಕೋದ್ಯಮಕ್ಕೆ ಜ್ಞಾನಪೀಠ ಪ್ರಶಸ್ತಿಯಷ್ಟೆ ಮಹತ್ವ ಹಾಗೂ ಗೌರವ ತಂದುಕೊಡುವ ಪ್ರತಿಷ್ಠೆಯದ್ದು ಈ ಗೋಯೆಂಕಾ ಪ್ರಶಸ್ತಿ. ಅದರ ಬಗ್ಗೆ ಎಷ್ಟು ವ್ಯಾಪಕ ರೀತಿಯಲ್ಲಿ ಈ ಸಂತೋಷವನ್ನು ಹಂಚಿಕೊಳ್ಳಬೇಕಿತ್ತೋ ಅಷ್ಟು ಕೆಲಸವನ್ನು ಪತ್ರಿಕಾ ಮಾಧ್ಯಮವಾಗಲಿ, ರೇಡಿಯೋ ಮತ್ತು ದೂರದರ್ಶನದವರಾಗಲಿ ಮಾಡಲಿಲ್ಲ. ನಮ್ಮ ಪತ್ರಿಕೆಗಳೂ ಈ ಬಗ್ಗೆ ಏಕೆ ಹೆಚ್ಚಿನ ಕುತೂಹಲ, ಆಸಕ್ತಿ ತೋರಿಸಲಿಲ್ಲ ಎಂಬುದೇ ಆಶ್ಚರ್ಯ.

ಇಂದು ಪತ್ರಿಕೋದ್ಯಮವೆಂದರೆ ರಾಜಕಾರಣಿಗಳ ಭಟ್ಟಂಗಿತನವೆಂಬ ಭಾವನೆ ಉಂಟಾಗಿದೆ. ಪತ್ರಕರ್ತರು ಎಂದರೆ ಕುಡುಕರು, ಅವರಿಗೆ 'ತಿಂಡಿ–ತೀರ್ಥ' ಕೊಟ್ಟರೆ ಏನನ್ನೂ ಬರೆಸಬಹುದು ಎಂಬ ಅಭಿಪ್ರಾಯವೂ ಜನಸಾಮಾನ್ಯರಲ್ಲಿದೆ. ಈ ಅಭಿಪ್ರಾಯಕ್ಕೆ ಪತ್ರಕರ್ತರೇ ಕಾರಣ. ಇಂಥ ಹಿನ್ನೆಲೆಯಲ್ಲಿ ಪಾ. ವೆಂ. ಅವರಂಥವರಿಗೆ ಗೋಯೆಂಕಾ ಪ್ರಶಸ್ತಿ ಬಂದಿರುವುದು ಸಮಗ್ರ ಕನ್ನಡ ಪತ್ರಿಕೋದ್ಯಮಕ್ಕೇ ಸಂದ ರಾಷ್ಟ್ರಮಾನ್ಯತೆ ಎಂದಂತಾಗಿದೆ. ಪವಿತ್ರವಾದ ಈ ಪ್ರವೃತ್ತಿಗೆ ಅಂಥ ಗೌರವ, ಮನ್ನಣೆ, ಒಳ್ಳೆಯ ಕೀರ್ತಿ ತಂದು ಕೊಟ್ಟಿರುವ ಪಾ. ವೆಂ. ಅವರಿಗೆ ಸಾವಿರ ಅಭಿನಂದನೆಗಳು.

ಪಾ. ವೆಂ., ಲಾಂಗೂಲಾಚಾರ್ಯ, ರಾಧಾಕೃಷ್ಣ, ಮುರಲೀಧರ ಮೊದಲಾದ ಹೆಸರುಗಳಿಂದ ಬರೆಯುತ್ತಿರುವ ಆಚಾರ್ಯರು ಪ್ರಚಂಡ ಅಧ್ಯಯನಶೀಲರು, ವಿಚಾರವಂತರು, ವಿದ್ವಾಂಸರು. ಯಾವುದೇ ವಿಷಯವನ್ನು ಆಳಕ್ಕೆ ಇಳಿದು ಬರೆಯುವವರು. ಇಂದಿನ 'ಮೇಲಿಂದ ಮೇಲಕ್ಕೆ' (ಸೂಪರ್‌ಫಿಶಿಯಲ್) ಬರವಣಿಗೆಯ ಪತ್ರಕರ್ತರು ಪಾ. ವೆಂ. ಅವರಿಂದ ಕಲಿಯುವುದು ತುಂಬ ಇದೆ.

'ತರಂಗ'ಕ್ಕೂ ಪಾ. ವೆಂ. ಅವರಿಗೂ ಒಂದು ವಿಶೇಷ ಮತ್ತು ವಿಚಿತ್ರ ನಂಟು. ಅಪೂರ್ವ ಬಾಂಧವ್ಯ. 'ತರಂಗ' ಪ್ರಕಟವಾಗುತ್ತಿರುವ ಮಣಿಪಾಲ ಪ್ರೆಸ್‌ನಿಂದಲೇ 1938ರಲ್ಲಿ ಹೊರಟ 'ಅಂತರಂಗ' ರೂಪಿಸಿದ ಮಹತ್ವದ ಪತ್ರಕರ್ತರೇ ಪಾ. ವೆಂ. ಮುಂದೆ ಅವರು 'ಸಂಯುಕ್ತ ಕರ್ನಾಟಕ' ಬಳಗ ಸೇರಿ, 'ಕರ್ಮವೀರ'ದಿಂದ 'ಕಸ್ತೂರಿ'ಗೆ ಸಂಪಾದಕರಾಗಿ ಅದನ್ನೊಂದು ಅದ್ವಿತೀಯ ಪತ್ರಿಕೆಯನ್ನಾಗಿ ಬೆಳೆಸಿದರು. 'ತರಂಗ'ದ ಬೆಳವಣಿಗೆಯಲ್ಲೂ ಅವರು ತುಂಬ ಆಸ್ಥೆ ತೋರಿದರು.

ಪಾ. ವೆಂ. ಅವರು ನನ್ನ ಮಟ್ಟಿಗೆ ದ್ರೋಣಾಚಾರ್ಯನಂತೆ. ಅವರು ನನಗೆ ನೇರವಾಗಿ ಕಲಿಸದಿದ್ದರೂ ಪತ್ರಕರ್ತನ ಹಲವು ಸೂಕ್ಷ್ಮ ಕರ್ತವ್ಯಗಳನ್ನು ಅವರಿಂದ ಏಕಲವ್ಯನಂತೆ ನಾನು ಕಲಿತಿದ್ದೇನೆ. ನನ್ನ ಹಲವಾರು ಮೊದಲ ಲೇಖನಗಳು 'ಕಸ್ತೂರಿ'ಯಲ್ಲೇ ಬೆಳಕು ಕಂಡದ್ದು, ಅವನ್ನು ಈಗಲೂ ಓದುಗರು ನೆನಪಿಟ್ಟಿರುವುದು ಈ ಪತ್ರಿಕೆಯ, ಅದರ ಹಿಂದಿದ್ದ ಸಂಪಾದಕರ ಯೋಗ್ಯತೆಯನ್ನೇ ತೋರಿಸುತ್ತದೆ. ಒಮ್ಮೆ ಒಬ್ಬ ಲೇಖಕನ ಸತ್ವವನ್ನು ಪತ್ತೆಹಚ್ಚಿಬಿಟ್ಟರೆ ಪಾ. ವೆಂ. ಅವರಲ್ಲಿ ಹುದುಗಿರುವ ಸಂಪಾದಕ ಬೆಂಬಿಡದ 'ಬ್ರಹ್ಮಕಪಾಲ'ದಂತೆ ಲೇಖಕನ ಬೆನ್ನಟ್ಟಿ ಅವನಿಂದ ಬರೆಸಿಕೊಳ್ಳದೆ ಬಿಡುವುದಿಲ್ಲ.

ಪತ್ರಕರ್ತರಿಗೆ ಪಾಂಡಿತ್ಯ ಏಕೆ? ಸಾಹಿತ್ಯ ಏಕೆ? ಅವರು ಸರಳವಾಗಿ ಬರೆದರೆ ಸಾಕು ಎಂದು ವಾದ ಮಾಡುವವರಿದ್ದಾರೆ. ಆದರೆ ಖಚಿತ ಬರವಣಿಗೆಗಾಗಿ ಮತ್ತು ಬರವಣಿಗೆಯ ಶುದ್ಧಿಗಾಗಿ ಇವೆರಡೂ ಪತ್ರಕರ್ತರಿಗೆ ಅತ್ಯವಶ್ಯ ಎಂದು ಪಾ. ವೆಂ. ತೋರಿಸಿಕೊಟ್ಟಿದ್ದಾರೆ. ಅದಕ್ಕೂ ಮೇಲಾಗಿ ಪತ್ರಕರ್ತನಿಗೆ ನಗೆ ಮತ್ತು ವಿಡಂಬನೆಗಳು ಎಂಥ ಆಯಾಮ ಕೊಡಬಲ್ಲವು ಎಂದು 'ಲಾಂಗೂಲಾಚಾರ್ಯ'ನಾಗಿ ಪಾ. ವೆಂ. ಸಾಬೀತುಪಡಿಸಿದ್ದಾರೆ. ಅದಕ್ಕೆ ಕಾವ್ಯಗುಣ ಸೇರಿದ್ದರೆ ಮತ್ತಷ್ಟು ಪಕ್ವವಾಗುತ್ತದೆ. ಜತೆಯಲ್ಲಿ ಸಹೃದಯತೆ ಹಾಗೂ ಗಾಂಭೀರ್ಯ ಅವರಿಗೆ ಒಪ್ಪಕೊಟ್ಟಿವೆ. ಹಿರಿಯರಾಗಿಯೂ ಅವರು ಗೆಳೆಯರಾಗಿರಬಲ್ಲರು. ಹಾಗೆಂದೇ ಅವರು ವಿಶಿಷ್ಟ ಬರಹಗಾರ.



ಪಾ. ವೆಂ. ಅವರ ನೆನಪಿನ ಶಕ್ತಿ ಮತ್ತು ವಿಷಯ ಗ್ರಹಿಕೆ ಅತ್ಯದ್ಭುತ. ಅವರು ಕನ್ನಡದ 'ಕಸ್ತೂರಿ' ವಿಶ್ವಕೋಶ ಎಂಬುದೇ ಸರಿ. ವಿಷಯ ಸಂಗ್ರಹ ಮತ್ತು ಅವುಗಳ ವ್ಯಾಖ್ಯಾನ, ವಕ್ರದೃಷ್ಟಿ ಎಲ್ಲವೂ ಅವರಲ್ಲಿ ವಿಶಿಷ್ಟ ರೀತಿಯಲ್ಲಿ ಮೇಳೈಸಿವೆ. ಅವರ 'ಪ್ರಹಾರ', 'ಲೋಕದ ಡೊಂಕು', 'ವಿಪರೀತ', 'ವಕ್ರದೃಷ್ಟಿ'ಗಳ ನವಿರು ಹಾಸ್ಯದಂತೆಯೆ ಸಂಸ್ಕೃತದ 'ಸುಭಾಷಿತ ಚಮತ್ಕಾರ' ಮತ್ತು 'ಪದಾರ್ಥ ಚಿಂತಾಮಣಿ' ಅವರ ವಿದ್ವತ್ತಿಗೆ, ಅನ್ವೇಷಣಾ ಗುಣಕ್ಕೆ ಕನ್ನಡಿ ಹಿಡಿಯುತ್ತವೆ.

'ತರಂಗ' ಆರಂಭವಾದಾಗ ಪಾ. ವೆಂ. ಬರೆದಿದ್ದರು–"ಇತರರಿಗಿಂತ ಭಿನ್ನವಾಗಿದ್ದು ತನ್ನದೇ ಓದುಗರ ಬಳಗ ಸೃಷ್ಟಿಸಿಕೊಳ್ಳುವ ನಿಮ್ಮ ಸಾಹಸವನ್ನು ಮೆಚ್ಚುತ್ತೇನೆ. ಇದು ಗುಡ್ಡ ಹತ್ತುವ ಕೆಲಸ. ಆದರೆ 'ತರಂಗ' ಅದರಲ್ಲಿ ಗೆದ್ದುಬರುವುದೆಂಬ ವಿಶ್ವಾಸ ನನಗಿದೆ." ಅವರ ಆಶೀರ್ವಾದ ಫಲಿಸಿದೆ.

ಅನಾರೋಗ್ಯ ಪೀಡಿತರಾಗಿ, ಆಗಾಗ ಉಬ್ಬಸದ ತೊಂದರೆ, ಇಪ್ಪತ್ತೊಂದು ಅಡಿ ಉದ್ದದಿಂದ ಶಸ್ತ್ರಚಿಕಿತ್ಸೆಯಲ್ಲಿ ಕತ್ತರಿಸಿ ಹಾಕಿ ಉಳಿದ ಕೆಲವೇ ಅಡಿಗಳ ಕರುಳಿನಿಂದಲೇ ಇಷ್ಟು ವರ್ಷ ಚಟುವಟಿಕೆಯಿಂದಿರುವ ಪಾ. ವೆಂ. ಕಷ್ಟ ಸಾಧನೆಯಲ್ಲೇ ಆನಂದ ಕಾಣುವ ಕರ್ಮಯೋಗಿ. ನನ್ನಂಥ ಹಲವಾರು ಪತ್ರಕರ್ತರಿಗೆ ಆಚಾರ್ಯ ಸ್ಥಾನದಲ್ಲಿದ್ದು, ನಿರಂತರ ಸ್ಫೂರ್ತಿಯಾಗಿ ಇರುವ ಪಾ. ವೆಂ. ಕನ್ನಡದ ಏಕಮೇವಾದ್ವಿತೀಯ ವಿದ್ವಾಂಸ–ಪತ್ರಕರ್ತ, ಕವಿ–ಪತ್ರಕರ್ತ, ಸಾಹಿತಿ–ಪತ್ರಕರ್ತ. ಮಗುವಿನಂಥ ಮನಸ್ಸಿನ ಪಾ. ವೆಂ. ಅವರ ಆರೋಗ್ಯ ಚೆನ್ನಾಗಲಿ, ಆಯುಷ್ಯ ವರ್ಧಿಸಲಿ, ಇನ್ನಷ್ಟು ಬರವಣಿಗೆ ಅವರಿಂದ ನಡೆಯಲಿ ಎಂಬುದೇ ನನ್ನ ಹಾರೈಕೆ.

ಸಂತೋಷಕುಮಾರ ಗುಲ್ವಾಡಿ

ಸಂಪಾದಕ

> "ನನ್ನದು ಪಾಂಡಿತ್ಯ ಅಲ್ಲ. ಕುತೂಹಲ ಬುದ್ಧಿಯ ಹುಚ್ಚಾಟ!" ಪಾ. ವೆಂ.

## ಸ್ವಗತ

ಅವರು ಹಿಂದಿಯ 'ರಾಷ್ಟ್ರಭಾಷಾ ವಿಶಾರದ'ರು. ಸ್ವಂತ ಆಸಕ್ತಿಯಿಂದ ಬಂಗಾಳಿಯನ್ನು ಕಲಿತವರು; ಸಂಸ್ಕೃತವನ್ನು ರೂಢಿಸಿಕೊಂಡವರು. ತರುಣ ವಯಸ್ಸಿನಲ್ಲಿ ಅವರ ಕಾರ್ಯಕ್ಷೇತ್ರಗಳು ಉಡುಪಿ ಮತ್ತು ಮದ್ರಾಸು. ಅವರು ನಿರ್ವಹಿಸಿದ ವೃತ್ತಿಗಳಾದರೂ ಹತ್ತು ಹಲವು—ಶಾಲಾ ಮಾಸ್ತರರು, ಅಂಗಡಿ ಗುಮಾಸ್ತರು, ಕಂಪೆನಿ ಸೆಕ್ರೆಟರಿ, ಮುದ್ರಣಾಲಯದ ಮ್ಯಾನೇಜರ್, ಲೆಕ್ಕಾಧಿಕಾರಿ, ಕೊನೆಗೆ ಹೊಟೇಲಿನಲ್ಲಿ 'ಬಿಲ್‌ರೈಟರ್'! ಈ ವೃತ್ತಿ ವೈವಿಧ್ಯ ಪಾವೆಂ ಅವರಿಗೆ ಜೀವನದ ನಿಜಸ್ವರೂಪವನ್ನು ತೋರಿಸಿತು; ವಿಶ್ವವಿದ್ಯಾನಿಲಯಗಳಿಗಿಂತ ಹೆಚ್ಚು ಕಲಿಸಿತು. 1942ರಲ್ಲಿ ಅವರು ಜೀವನವನ್ನು ಅರಸಿಕೊಂಡು ಹುಬ್ಬಳ್ಳಿಗೆ ಬಂದರು. ಈಗಲೂ ಅಲ್ಲಿಯೇ ನೆಲೆಸಿದ್ದಾರೆ. ಅಲ್ಲಿ 'ಸಂಯುಕ್ತ ಕರ್ನಾಟಕ' ಮುದ್ರಣಾಲಯದಲ್ಲಿ ಮೇಲ್ವಿಚಾರಕರಾಗಿ ತಮ್ಮ ವೃತ್ತಿಯನ್ನು ಆರಂಭಿಸಿ, 'ಕಸ್ತೂರಿ'ಯ ಸಂಪಾದಕರಾಗಿ ನಿವೃತ್ತರಾದರು (1975). ನಡುವೆ ಅವರು 'ಕರ್ಮವೀರ' ವಾರಪತ್ರಿಕೆಯ ಉಪಸಂಪಾದಕರೂ ಆಗಿದ್ದರು. ನಾನಾ ಹೆಸರುಗಳನ್ನು ಬಳಸಿ ಅವರು ಬರೆದರು. ಅವರ ಹೆಸರುಗಳಲ್ಲಿ ತುಂಬ ಪ್ರಸಿದ್ಧವಾದದ್ದು 'ಲಾಂಗೂಲಾಚಾರ್ಯ'. ರಾಧಾಕೃಷ್ಣ, ಮುರಳೀಧರ ಮೊದಲಾದವು ಇತರ ಹೆಸರುಗಳು. ಆದರೆ ಪಾವೆಂ ಎಂಬ ಹ್ರಸ್ವನಾಮದಿಂದಲೇ ಪ್ರಖ್ಯಾತರು. ಭಾರತೀಯ ಭಾಷೆಗಳಲ್ಲೇ ಒಂದು ಶ್ರೇಷ್ಠ 'ಡೈಜೆಸ್ಟ್' ಎನ್ನಿಸಿದ್ದ 'ಕಸ್ತೂರಿ'ಯನ್ನು ಅದರ ಆರಂಭದಿಂದಲೇ ನೋಡಿಕೊಂಡು ಬಂದವರು ಅವರು. ಈಗಲೂ ಅದರೊಡನೆ ಅವರ ಸಂಪರ್ಕ ತಪ್ಪಿಲ್ಲ. ಅಧ್ಯಯನ ಮತ್ತು ಬರೆವಣಿಗೆಗಳು ಆಚಾರ್ಯರಿಗೆ ಉಸಿರಾಟದಷ್ಟೇ ಸಹಜ. ಈಗ ಅವರು ಎಂಬತ್ತರ ಸಮೀಪ ಬಂದಿದ್ದರೂ ತಮ್ಮ ಆಸಕ್ತಿಗಳನ್ನು ಸ್ವಲ್ಪವೂ ಕಳೆದುಕೊಂಡಿಲ್ಲ.

ಪಾವೆಂ ತುಂಬ ಚಿಕ್ಕವರಿದ್ದಾಗಲೆ, ಹನ್ನೊಂದನೆಯ ವಯಸ್ಸಿನಲ್ಲಿಯೆ ಪದ್ಯ ಬರೆಯಲು ತೊಡಗಿದರಂತೆ. ಹದಿನೆಂಟರ ಹರಯಕ್ಕೆ ಬರುವ ಹೊತ್ತಿಗೆ ಪ್ರಕಟಣೆಯಲ್ಲಿ ತೊಡಗಿದರು! 'ಪ್ರಬುದ್ಧ ಕರ್ನಾಟಕ', 'ಜಯಕರ್ನಾಟಕ', 'ರಾಷ್ಟ್ರಬಂಧು'—ಮೊದಲಾದ ನಿಯತಕಾಲಿಕಗಳಲ್ಲಿ ಅವರ ರಚನೆಗಳು ಬೆಳಕುಕಂಡವು. ಕಥೆ ಕವಿತೆಗಳು ಅವರ ಆರಂಭದ ರಚನೆಗಳು. ಸಹಜವಾಗಿಯೆ ಅವರು ತುಳು ಭಾಷೆಯಲ್ಲಿಯೂ ಕವಿತೆಗಳನ್ನು ಬರೆಯಲಾರಂಭಿಸಿದ್ದರು. ಅಂದಿನ ದಿನಗಳಲ್ಲಿ ಉಡುಪಿಯಿಂದ ಪ್ರಕಟಗೊಳ್ಳುತ್ತಿದ್ದ'ಅಂತರಂಗ' ಎಂಬ ಪ್ರಸಿದ್ಧ ವಾರಪತ್ರಿಕೆಯ ಸಂಪಾದಕ ಬಳಗದಲ್ಲಿ ಸೇರಿಕೊಂಡು ತಮ್ಮ ಪತ್ರಿಕೋದ್ಯಮ ಜೀವನವನ್ನೂ ಆರಂಭಿಸಿದರು. ಹೀಗೆ ಸಾಹಿತ್ಯ—ಪತ್ರಿಕೋದ್ಯಮಗಳು ಎಳವೆಯಿಂದಲೇ ಅವರ ಬೆನ್ನು ಹತ್ತಿದವು.

'ರಶಿಯಾದ ರಾಜ್ಯಕ್ರಾಂತಿ' ಎಂಬ ಮಿಂಚಿನ ಬಳ್ಳಿ ಮಾಲೆಯ ಪುಸ್ತಕ ಪಾವೆಂ ಅವರ ಮೊದಲನೆಯ ಪುಸ್ತಕ ಇರಬೇಕು (1943). ಅದು ಪ್ರಕಟವಾದಾಗ ನಾನು ಮಾಧ್ಯಮಿಕ ಶಾಲೆಯ ವಿದ್ಯಾರ್ಥಿಯಾಗಿದ್ದೆ. ನಾನು ಕೊಂಡು ಓದಿದ ಮೊದಲನೆಯ ಕೆಲವು ಪುಸ್ತಕಗಳಲ್ಲಿ 'ರಶಿಯಾದ ರಾಜ್ಯಕ್ರಾಂತಿ'ಯೂ ಒಂದು. ಅದು ಇನ್ನೂ ನನ್ನ ಬಳಿ ಸುರಕ್ಷಿತವಾಗಿದೆ. ಪ್ರಕಾಶಕರು ಅದರಲ್ಲಿ ಲೇಖಕರ ಬಗೆಗೆ ಹೇಳಿದ ಮಾತುಗಳು ಇವು:. "ಶ್ರೀ ಪಿ. ವೆಂಕಟರಮಣಾಚಾರ್ಯರು ತೀರ ತರುಣರು; ವಿಚಾರವಂತರು. ಜೀವನ ರಂಗದಲ್ಲಿ ಕೆಲ ಸಿಹಿ—ಕಹಿ ಗುಟುಕುಗಳ ಅನುಭವ ಪಡೆದವರು. ಸಾಹಿತ್ಯಿಕ ವ್ಯಾಸಂಗವೂ, ನಿರ್ಮಾಣವೂ ಇವರಿಗೊಂದು ಆಚಾರವಾಗಿದೆ, ಅಭ್ಯಾಸವಾಗಿದೆ. ಹೀಗೆಯೇ ಇನ್ನೂ ಇವರು ಕನ್ನಡ ರಸವಂತಿಯ ಅಡಿದಾವರೆಗಳಲ್ಲಿ ತಮ್ಮ ಕೃತಿ ಕುಸುಮಗಳನ್ನರ್ಪಿಸುತ್ತಸಾಗಲಿ ಎಂದು ನಾವು ಹಾರೈಸುತ್ತೇವೆ." ಈ ಹಾರೈಕೆ ಈಗ ಸಫಲಗೊಂಡಿದೆ ಎನ್ನಬೇಕು.

ಅವರ ಎರಡನೆಯ ವೈಚಾರಿಕ ಪುಸ್ತಕ 'ಸ್ವತಂತ್ರ ಭಾರತ' 1972ರಲ್ಲಿ ಪ್ರಕಟವಾಯಿತು. ಲೇಖಕರೇ ಹೇಳಿಕೊಂಡಂತೆ "25 ವರ್ಷಗಳ ಕೆಳಗೆ ನಮಗೆ ಸ್ವಲ್ಪ ಅನಿರೀಕ್ಷಿತವಾಗಿಯೆ ಬಂದ ಸ್ವಾತಂತ್ರ್ಯದ ನಂತರ ನಮ್ಮ ದೇಶದಲ್ಲಿ ಏನಾಗಿದೆ ಏನಾಗಿಲ್ಲ ಎಂಬುದರ ಸ್ಥೂಲ ಪರಿಶೀಲನೆಯ ಯತ್ನ ಇದು. ಇದು ಪಾಂಡಿತ್ಯಪೂರ್ಣ ವಿವೇಚನೆಯಲ್ಲ. ಅದೊಂದು ತರಹದ ರನಿಂಗ್ ಕಾಮೆಂಟ್ರಿ." ರನಿಂಗ್ ಕಾಮೆಂಟ್ರಿ ನೀಡುವವರಿಗೆ ಎಷ್ಟೊಂದು ಎಚ್ಚರ, ಸೂಕ್ಷ್ಮದೃಷ್ಟಿಗಳಿರಬೇಕೆಂದು ನಮಗೆಲ್ಲ ಗೊತ್ತಿದೆ. ಎಚ್ಚರಿಕೆ, ಸೂಕ್ಷ್ಮದೃಷ್ಟಿಗಳೇ ಈ ಪುಸ್ತಕದ ಮಹತ್ತ್ವವನ್ನು ಹೆಚ್ಚಿಸಿವೆ. ಇಂದಿರಾ ಗಾಂಧಿಯವರ ಇಪ್ಪತ್ತು ಅಂಶಗಳ ಆರ್ಥಿಕ ಕಾರ್ಯಕ್ರಮದಲ್ಲಿ ಹದಿಮೂರನೆಯದು 'ಕಳ್ಳಸಾಗಣೆದಾರರ ನಿರ್ಮೂಲನ'. ಈ ಕುರಿತು ಆಚಾರ್ಯರು ಒಂದು ಕಿರುಹೊತ್ತಗೆ ಬರೆದಿದ್ದಾರೆ (1977) ಎಂಬುದು ಬಹುಜನರಿಗೆ ತಿಳಿದಿರಲಿಕ್ಕಿಲ್ಲ. ಸಂಸ್ಕೃತ ಸುಭಾಷಿತಗಳ ಒಂದು ಸೊಗಸಾದ ಸಂಕಲನವನ್ನೂ ಅವರು ನಮಗೆ ಕೊಟ್ಟಿದ್ದಾರೆ.

ಕನ್ನಡದಲ್ಲಿ ಎರಡು ('ನವನೀರದ' 1952; 'ಕೆಲವು ಪದ್ಯಗಳು') ತುಳುವಿನಲ್ಲಿ ಒಂದು ('ಬಯ್ಯಮಲ್ಲಿಗೆ') ಕವನ ಸಂಕಲನಗಳನ್ನು ಪಾವೆಂ ಪ್ರಕಟಿಸಿದ್ದಾರೆ. ತಮ್ಮ ಮೊದಲನೆಯ ಸಂಕಲನದಲ್ಲಿ ಕವಿ ಹೇಳಿಕೊಂಡ ಮಾತುಗಳು: "ಆಧುನಿಕ ಕನ್ನಡ ಕವಿತೆಯ ಉತ್ಥಾನದ ಕಾಲದಲ್ಲಿ ಕವಿತೆಗಳನ್ನು ಬರೆಯತೊಡಗಿದವರಲ್ಲಿ ನಾನೂ ಒಬ್ಬ. ವಾಸ್ತವಿಕವಾಗಿ ನನ್ನ ಹನ್ನೊಂದನೆಯ ವಯಸ್ಸಿನಿಂದಲೇ ಷಟ್ಪದಿ, ಕಂದ, ವೃತ್ತಾದಿ ವಿಧಾನಗಳಲ್ಲಿ ಕೈ ಪಳಗಿಸುತ್ತ ಬಂದಿದ್ದವನು 1932—33ರಲ್ಲಿ ಹೊಸ ಕವಿತೆಯ ಕರೆಯನ್ನು ಮುಟ್ಟಿದೆನೆಂದರೂ ಸಲ್ಲುವುದು... ಜೀವನದ ಬಿರುಗಾಳಿ ನನ್ನನ್ನು ಮೊದಲಿನಿಂದಲೂ ಕಾವ್ಯವ್ಯವಸಾಯಕ್ಕೆ ಪ್ರತಿಕೂಲವಾದ ಕ್ಷೇತ್ರಗಳಲ್ಲೇ ಸುತ್ತಾಡಿಸುತ್ತ ಬಂದಿದೆ. ಪ್ರತಿಕೂಲ ಆವರಣದಲ್ಲಿಯೂ ಹುಲುಸಾಗಿ ಬೆಳೆಯುವಷ್ಟು ಸತ್ತ್ವಶಾಲಿ ಪ್ರತಿಭೆ ನನ್ನದಲ್ಲವೋ ಏನೋ. ಆದರೂ ಆ ಹುರುಪಿನ ದಿನಗಳಲ್ಲಿ ನನ್ನಂತೆ ಬರೆಯ ತೊಡಗಿದವರಲ್ಲಿ ಬಹು ಸಂಖ್ಯಾಕರು ಅನಂತರ ಲೇಖನಿಯನ್ನು ಕೆಳಗಿರಿಸಿಯೇ ಬಿಟ್ಟಿರುವುದನ್ನು ನೋಡುವಾಗ ನಾನು ವಿಶೇಷ ಆತ್ಮಗ್ಲಾನಿ ಪಡಬೇಕಾಗಿಲ್ಲವೆನಿಸುತ್ತದೆ." ಪಾವೆಂ ಕಾವ್ಯ ಬುದ್ಧಿ ಭಾವಗಳ ಆಲಿಂಗನ ಪ್ರಯತ್ನ.

'ಲಾಂಗೂಲಾಚಾರ್ಯ' ಎಂಬ ಹೆಸರಿನಲ್ಲಿ ಪಾವೆಂ ಮುಖ್ಯವಾಗಿ 'ಕರ್ಮವೀರ' ಮತ್ತು 'ಕಸ್ತೂರಿ' ನಿಯತಕಾಲಿಕಗಳಲ್ಲಿ ಹಾಗೂ ಇತರ ಪತ್ರಿಕೆಗಳಲ್ಲಿ ಸುಮಾರು ಒಂದು ಸಾವಿರಕ್ಕೂ ಮೇಲ್ಪಟ್ಟು ಲಘು—ಬಿಗು ಬರೆಹಗಳನ್ನು ಪ್ರಕಟಿಸಿದ್ದಾರೆ. ಇವನ್ನು ಹರಟೆಗಳೆಂದು ಕರೆಯಲಾಗಿದೆ. ಲೇಖಕರೂ ಇದನ್ನು ಒಪ್ಪಿಕೊಂಡಿದ್ದಾರೆ. ಆದರೆ ನನಗೆ ಇವನ್ನು ಹರಟೆಗಳೆನ್ನಲು ಮನಸ್ಸು ಬಾರದು. 'ಹರಟೆ' ಎಂಬ ಮಾತು ಒಂದು ಬಗೆಯ ಒರಟುತನವನ್ನು ಸೂಚಿಸುತ್ತದೆ. ಪಾವೆಂ ಬರೆಹಗಳಲ್ಲಿ ಈ ಒರಟುತನ ಕಾಣಿಸುವುದಿಲ್ಲ. ಅವುಗಳಲ್ಲಿ ಅದ್ಭುತವಾದ ಕಲ್ಪನೆಯಿದೆ. ಹಾಗೆಂದು ಅವು ಲಲಿತ ಪ್ರಬಂಧಗಳೂ ಅಲ್ಲ. ಪಾವೆಂ ಅವರ ಈ ಬಗೆಯ ಬರೆಹಗಳಿಗೆ ಅವುಗಳದೇ ಆದ ಒಂದು ವೈಶಿಷ್ಟ್ಯವಿದೆ. ಈ ಬರೆಹಗಳ ವಿಪುಲರಾಶಿಯಿಂದ ಆಯ್ದು ಮಾಡಿ ನಾಲ್ಕು ಸಂಪುಟಗಳನ್ನು ಪಾವೆಂ ಪ್ರಕಟಿಸಿದ್ದಾರೆ ('ಪ್ರಹಾರ' 1965; 'ಲೋಕದ ಡೊಂಕು' 1976; 'ವಿಪರೀತ' 1977 ಮತ್ತು 'ವಕ್ರದೃಷ್ಟಿ' 1991). ಇವೆಲ್ಲವೂ ಒಂದೇ ಬಗೆಯ ಸಂಕಲನಗಳು. ಮೊದಲನೆಯ ಸಂಪುಟಕ್ಕೆ ದಿವಾಕರರು ಬರೆದ ಮುನ್ನುಡಿಯ ಈ ಮಾತುಗಳು ಎಲ್ಲ ಸಂಪುಟಗಳಿಗೂ ಸಮಾನವಾಗಿ ಅನ್ವಯವಾಗುತ್ತದೆ; "ಲಾಂಗೂಲಾಚಾರ್ಯರ ಹರಟೆಗಳು ಕನ್ನಡ ಪತ್ರಿಕಾ ಪ್ರಪಂಚದಲ್ಲಿ ಹೊಸತೊಂದು ಸಾಹಿತ್ಯ ರೂಪ. ಲಾಂಗೂಲಾಚಾರ್ಯರ ಹರಟೆಗಳು ವಿಮರ್ಶಕರು ಗೊತ್ತುಪಡಿಸಿದ ಲಕ್ಷಣಗಳಿಗೆ ಕಟ್ಟುನಿಟ್ಟಾಗಿ ಒಳಪಟ್ಟವುಗಳಲ್ಲ. ಅವು ಮೊನಚಾದ ವ್ಯಂಗ್ಯದಿಂದ, ವಿಶಾಲವಾದ ಲೋಕಾನುಭವದಿಂದ ಕೂಡಿವೆ. ನಾವು ಸ್ವೀಕೃತವೆಂದು ಗೊತ್ತು ಮಾಡಿಕೊಂಡಿರುವ ಅನೇಕ ರೂಢಿ ನಡಾವಳಿಗಳ ಮೇಲೆ ಅವರ ಪ್ರಹಾರ ಬಿದ್ದಮೇಲೆ ಅವುಗಳ ದೋಷ, ಟೊಳ್ಳು ವ್ಯಕ್ತವಾಗುತ್ತವೆ. ಲೋಕದ ಡೊಂಕುಗಳನ್ನು ಅವರು ಅಕ್ಷುಣ್ಣ ದೃಷ್ಟಿಯಿಂದ ಗುರುತಿಸುತ್ತಾರೆ. ಆದರೆ ಅವರು ಆ ಬಗ್ಗೆ ಸಂತೃಪ್ತರಾಗುವುದಿಲ್ಲ. ಲೋಕ ಹೀಗಿದ್ದರೇನೇ ಅದು ಲೋಕವೆನ್ನಿಸುತ್ತದೆ, ಎಂಬುದನ್ನವರು ಬಲ್ಲರು. ಅವರು ಯಾರನ್ನು ತಮ್ಮ ವ್ಯಂಗ್ಯಕ್ಕೆ ಗುರಿಮಾಡುವರೋ ಅವರು ಕೂಡ ಕುಪಿತರಾಗುವುದಿಲ್ಲ. ಏಕೆಂದರೆ ಲಾಂಗೂಲಾಚಾರ್ಯರು ಅವರನ್ನು ನೋಡಿ ನಗುವುದರೊಡನೆ ತಮ್ಮನ್ನು ನೋಡಿಕೊಂಡೂ ನಗುತ್ತಾರೆ!"

ಪಾವೆಂ ಅವರ ಆಚಾರ್ಯ ಕೃತಿ 'ಪದಾರ್ಥ ಚಿಂತಾಮಣಿ' ಕೆಲ ತಿಂಗಳ ಹಿಂದಷ್ಟೇ ಪ್ರಕಟಗೊಂಡಿದೆ. ಅದು ನಮ್ಮ ನಿತ್ಯ ಬಳಕೆಯ ಅನೇಕ ಪದಗಳ ಜೀವನ ಚರಿತ್ರೆಯನ್ನು ನಿರೂಪಿಸುವ ಎಂಬತ್ತೆಂಟು ಲೇಖನಗಳ ಒಂದು ಸ್ವಾರಸ್ಯ ಸಂಕಲನ. "ಮೇಲುನೋಟಕ್ಕೆ ಲಘುವಾದುದೆಂದು ತೋರುವ, ಅಂತರ್ಯದಲ್ಲಿ ಬಹುಶ್ರುತ ಪಾಂಡಿತ್ಯವನ್ನು ಅಡಗಿಸಿಟ್ಟುಕೊಂಡಿರುವ ಈ ಪುಸ್ತಕದಿಂದ ಆಚಾರ್ಯರು ಕನ್ನಡದ 'ವರ್ಡ್‌ಲೋರ್' (ಪದಪರಂಪರೆ) ಅಧ್ಯಯನಕ್ಕೆ ನಾಂದಿ ಹಾಡಿದ್ದಾರೆ" ಎಂದು ನಾನೇ ಅದರ ಮುನ್ನುಡಿಯಲ್ಲಿ ಬರೆದಿದ್ದೇನೆ. ಇದೊಂದು ತುಂಬ ಅಪರೂಪದ ಪುಸ್ತಕ. ಇದರಲ್ಲಿ ಪದ—ಅರ್ಥಗಳ ಸಂಬಂಧದ ಸ್ವರೂಪ ಸೊಗಸಾಗಿ ಕಾಣಿಸಿಕೊಳ್ಳುತ್ತದೆ. ಅದನ್ನು ಓದುವ ಯಾರಾದರೂ ಪಾವೆಂ ಅವರ ತಿಳಿವಳಿಕೆಯ ವ್ಯಾಪ್ತಿ ವಿಸ್ತಾರಗಳನ್ನು ಕಂಡು ಬೆರಗಾಗುತ್ತಾರೆ.

ಈಗಾಗಲೇ ಅನೇಕ ಗೌರವಗಳಿಗೆ ಆಚಾರ್ಯರು [illegible]ರಾಗಿದ್ದಾರೆ. ಅಂದಿನ ಮುಂಬಯಿ ಸರ್ಕಾರದಿಂದ ಅವರು ತಮ್ಮ 'ನವನೀರದ' ಕವನ ಸಂಗ್ರಹಕ್ಕೆ ಬಹುಮಾನ ಪಡೆದಿದ್ದಾರೆ. ಪಿ. ಆರ್. ರಾಮಯ್ಯ ಪತ್ರಿಕೋದ್ಯಮ ಪ್ರಶಸ್ತಿ ಗಳಿಸಿದ್ದಾರೆ; ವರ್ಧಮಾನ ಪ್ರಶಸ್ತಿ ದೊರತಿದೆ; ಕನ್ನಡ ಸಾಹಿತ್ಯ ಪರಿಷತ್ತು ಮತ್ತು ಕರ್ನಾಟಕ ಸಾಹಿತ್ಯ ಅಕಾದೆಮಿಗಳೆರಡೂ ತಮ್ಮ ಗೌರವ ಸಲ್ಲಿಸಿವೆ. ಹದಿನೈದು ವರ್ಷಗಳ ಕೆಳಗೆ (1977) ಮೈಸೂರಿನ ಸಾರ್ವಜನಿಕರು ಅವರನ್ನು ಕರೆದು ಸನ್ಮಾನಿಸಿ ನಿಧಿ ಸಮರ್ಪಣೆ ಮಾಡಿದ ನೆನಪು ಇನ್ನೂ ಹಸಿರಾಗಿದೆ. ಇದೆಲ್ಲಕ್ಕೂ ಕಿರೀಟಪ್ರಾಯವಾಗಿ ಈಗ ಗೊಯೆಂಕಾ ಪ್ರಶಸ್ತಿ ಅವರನ್ನು ಅಲಂಕರಿಸಿದೆ. ಇದರಿಂದ ಆಚಾರ್ಯರೇನೂ ದೊಡ್ಡವರಾಗಲಿಲ್ಲ. ಆದರೆ ಪ್ರಶಸ್ತಿ ಮಾತ್ರ ಯೋಗ್ಯರಾದವರನ್ನೇ ಕಂಡುಕೊಂಡಿದೆ.

●

## ಸ್ವಗತ



● ಡಾ| ಹಾ. ಮಾ. ನಾಯಕ

ವಿಳಾಸ: 'ಗೋಧೂಳಿ',
ಜಯಲಕ್ಷ್ಮೀಪುರಂ, ಮೈಸೂರು – 570 012.

# ಪಾವೆಂ: 'ಕಸ್ತೂರಿ' ಕಂಪು

ಕರ್ನಾಟಕಕ್ಕೆ ಇದು ಪ್ರಶಸ್ತಿಗಳ ವರ್ಷವೆಂದು ತೋರುತ್ತದೆ. ಸುಬ್ಬಣ್ಣನವರಿಗೆ ಮ್ಯಾಗ್ಸೇಸೆ ಪ್ರಶಸ್ತಿ; ಬಾಳಪ್ಪ ಹುಕ್ಕೇರಿಯವರಿಗೆ ತುಲಸೀ ಸಮ್ಮಾನ್; ಗೋಕಾಕರಿಗೆ ಜ್ಞಾನಪೀಠ ಪ್ರಶಸ್ತಿ; ಪಾವೆಂ ಆಚಾರ್ಯರಿಗೆ ಗೊಯೆಂಕಾ ಪ್ರಶಸ್ತಿ; ಇದೀಗ ಪ್ರಕಟವಾದ ಸುದ್ದಿಯಂತೆ ನಟಿ, ನಿರ್ದೇಶಕಿ ಜಯಶ್ರೀ ಅವರಿಗೆ ಸಫ್ದಾರ್ ಹಷ್ಮಿ ಸ್ಮಾರಕ ರಾಷ್ಟ್ರೀಯ ಪ್ರಶಸ್ತಿ–ಹೀಗೆ ಪಟ್ಟಿ ಬೆಳೆಯುತ್ತದೆ. ಯಾವ ರಾಜ್ಯವಾದರೂ ಹೆಮ್ಮೆ ಪಟ್ಟುಕೊಳ್ಳುವಂಥ ಸಾಧನೆ. ಪಾವೆಂ ಮೊದಲ ಬಾರಿಗೆ ಗೊಯೆಂಕಾ ಪ್ರಶಸ್ತಿಯನ್ನು ಕನ್ನಡಕ್ಕೆ ತಂದುಕೊಟ್ಟಿದ್ದಾರೆ. ಜಯಶ್ರೀಯವರು ತಮ್ಮಿಂದಲೇ ಪ್ರಶಸ್ತಿಯನ್ನು ಆರಂಭಿಸಿದ್ದಾರೆ! ಪದ್ಮಪ್ರಶಸ್ತಿಗಳೂ ನಾಲ್ಕೈದು ಕನ್ನಡಕ್ಕೆ ಬಂದಿವೆ. ನಾಡು ನುಡಿಗಳ ಆರಾಧಕರಿಗೆ ಇದೆಲ್ಲ ರೋಮಾಂಚನ ಉಂಟುಮಾಡುವ ಸಂಗತಿ.

ಇಂಥ ಪ್ರಶಸ್ತಿಗಳನ್ನು ಪಡೆಯಲು ಪೂರ್ಣ ಅರ್ಹರಾಗಿರುವ ಅನೇಕರು ಕರ್ನಾಟಕದಲ್ಲಿದ್ದಾರೆ. ದುರ್ದೈವದ ಮಾತು ಎಂದರೆ ಅಂಥವರ ಸಾಧನೆ ಸಿದ್ಧಿಗಳು ಸರಿಯಾದ ರೀತಿಯಲ್ಲಿ, ಪರಿಣಾಮಕಾರಿಯಾಗಿ ಆಯ್ಕೆ ಸಮಿತಿಗಳ ಎದುರು ಮಂಡಿತವಾಗುವುದಿಲ್ಲ. ಪ್ರಶಸ್ತಿಗಳಿಗೆ ಶಿಫಾರಸ್‌ಗಳನ್ನು ಕೋರಿದಾಗ ಬಹುಜನರು ಅದರ ಕಡೆ ಲಕ್ಷ್ಯ ಕೊಡುವುದೇ ಇಲ್ಲ; ಕೆಲವರು ಕಾಟಾಚಾರಕ್ಕೆ ಏನೋ ಬರೆದು ಕಳಿಸುತ್ತಾರೆ. ಇಲ್ಲದಿದ್ದರೆ ಗೊಯೆಂಕಾ ಪ್ರಶಸ್ತಿ ಕನ್ನಡಕ್ಕೆ ಬರಲು ಇಷ್ಟುಕಾಲ ಕಾಯುವ ಅಗತ್ಯವಿರಲಿಲ್ಲ. ನನಗೆ ತಿಳಿದಂತೆ ಕೆಲವರ್ಷಗಳ ಹಿಂದೆ ಖಾದ್ರಿ ಶಾಮಣ್ಣನವರಿಗೆ ಅದು ಬರುವ ಅವಕಾಶವಿತ್ತು. ಆದರೆ ತಮ್ಮ ಪತ್ರಿಕಾ ಸಮೂಹದಲ್ಲಿಯೇ ಕೆಲಸ ಮಾಡುತ್ತಿರುವವರಿಗೆ ಈ ಪ್ರಶಸ್ತಿ ಸಲ್ಲುವುದನ್ನು ರಾಮನಾಥ ಗೊಯೆಂಕಾ ಇಷ್ಟಪಡುತ್ತಿರಲಿಲ್ಲ (ಹಾಗೂ ಒಬ್ಬಿಬ್ಬರಿಗೆ ಸಂದಿರುವುದು ಬೇರೆ ವಿಚಾರ!). ಪ್ರಶಸ್ತಿಗಳು ಬರುವುದಕ್ಕೂ, ತಪ್ಪಿ ಹೋಗುವುದಕ್ಕೂ ನಾನಾ ಕಾರಣಗಳಿರುತ್ತವೆ!

ಇದೆಲ್ಲ ಏನೇ ಇರಲಿ, ನಮ್ಮ ಪ್ರೀತಿಯ 'ಪಾವೆಂ' (ಪಾಡಿಗಾರು ವೆಂಕಟರಮಣಾಚಾರ್ಯ) ಈ ಸಲದ ಗೊಯೆಂಕಾ ಪ್ರಶಸ್ತಿಯನ್ನು ಗಳಿಸಿ ಇಡೀ ನಾಡಿಗೆ ಸಂತೋಷವನ್ನುಂಟು ಮಾಡಿದ್ದಾರೆ. 'ಗೊಯೆಂಕಾ ಪ್ರಶಸ್ತಿ' ನಮ್ಮ ದೇಶದಲ್ಲಿ ಸದ್ಯಕ್ಕೆ ಅತ್ಯಂತ ದೊಡ್ಡ ಪತ್ರಿಕೋದ್ಯಮ ಪ್ರಶಸ್ತಿ; ತುಂಬ ಪ್ರತಿಷ್ಠಿತವಾದುದೂ ಹೌದು. 'ಇಂಡಿಯನ್ ಎಕ್ಸ್‌ಪ್ರೆಸ್' ಪತ್ರಿಕಾ ಸಮೂಹದ ಅಧ್ಯಕ್ಷರಾಗಿದ್ದ ರಾಮನಾಥ ಗೊಯೆಂಕಾ ಅವರ ಮಗ ಭಗ್ವಾನ್‌ದಾಸ್ ಗೊಯೆಂಕಾ (1923–79) ಅವರ ಸ್ಮಾರಕವಾದ ಈ ಪ್ರಶಸ್ತಿಯನ್ನು ನೀಡುವ ಸಲುವಾಗಿಯೇ 1982ರಲ್ಲಿ ಪ್ರತಿಷ್ಠಾನವೊಂದನ್ನು ಸ್ಥಾಪಿಸಲಾಯಿತು. ಪತ್ರಿಕೋದ್ಯೋಗಿಯೊಬ್ಬ ತನ್ನ ಉದ್ಯಮದಲ್ಲಿ ತೋರಬಹುದಾದ ಶ್ರೇಷ್ಠತೆಯನ್ನು ಗಮನಿಸಿ ಈ ಪ್ರಶಸ್ತಿಯನ್ನು ನೀಡಲು ನಿರ್ಧರಿಸಿ ಕ್ರಮ ಕೈಗೊಳ್ಳಲಾಯಿತು. ಈ ಶ್ರೇಷ್ಠತೆ–ಧೈರ್ಯ, ಸಾಹಸ, ಶಕ್ತಿ, ಸಾಮರ್ಥ್ಯ, ವೈಚಾರಿಕತೆ, ಶೈಲಿ, ವಿಶ್ಲೇಷಣೆಯ ಗುಣ, ಸಾಮಾಜಿಕ ಕಳಕಳಿ, ರಾಷ್ಟ್ರೀಯ ಜಾಗೃತಿ, ನವೀನತೆ ಮೊದಲಾದ ಯಾವುದೇ ಗುಣಕ್ಕೆ ಸಂಬಂಧಿಸಿದ್ದಾಗಿರಬಹುದು. ಇದೆಲ್ಲವನ್ನೂ ಗಮನಕ್ಕೆ ತೆಗೆದುಕೊಂಡೇ ಸಮಿತಿ ಆಯ್ಕೆ ಮಾಡುತ್ತದೆ. ಇದುವರೆಗಿನ ಯಾವ ಆಯ್ಕೆಯೂ ಚರ್ಚಾಸ್ಪದವಾಗಲಿಲ್ಲ ಎಂಬುದು ಸಂತೋಷದ ಮಾತು.

ಬಿ. ಡಿ. (ಭಗವಾನ್‌ದಾಸ್) ಗೊಯೆಂಕಾ ಸ್ವತಃ ಒಬ್ಬ ಪತ್ರಿಕೋದ್ಯಮಿಯಾಗಿದ್ದರು. ಇಂಡಿಯನ್ ಅಂಡ್ ಈಸ್ಟರ್ನ್ ನ್ಯೂಸ್ ಪೇಪರ್ಸ್ ಸೊಸೈಟಿಯ ಅಧ್ಯಕ್ಷರೂ ಆಗಿದ್ದರು. ಅವರ ನೆನಪನ್ನು ಶಾಶ್ವತಗೊಳಿಸುವುದರೊಂದಿಗೆ, ಭಾರತೀಯ ಪತ್ರಿಕೋದ್ಯಮದ ಮಟ್ಟವನ್ನು ಉತ್ತಮಗೊಳಿಸಬೇಕೆಂಬ ಉದ್ದೇಶದಿಂದ ರಾಮನಾಥ ಗೊಯೆಂಕಾ ಈ ಪ್ರಶಸ್ತಿಯನ್ನು ಆರಂಭಿಸಿ, ನಮ್ಮ ಪತ್ರಿಕೋದ್ಯಮದ ಒಂದು ಕೊರತೆಯನ್ನು ತುಂಬಿದರು. 1983ರಲ್ಲಿ ಮೊದಲ ಬಾರಿಗೆ ಈ ಪ್ರಶಸ್ತಿಯನ್ನು ಇಂಗ್ಲಿಷ್ ಪತ್ರಕರ್ತ ವಿ.ಕೆ. ನರಸಿಂಹನ್ ಅವರಿಗೆ ನೀಡಲಾಯಿತು. ಭಾರತೀಯ ಭಾಷೆಗಳು ಯಾವಾಗಲೂ ಇಂಗ್ಲಿಷಿನೊಂದಿಗೆ ಸ್ಪರ್ಧಿಸಬೇಕಾದ ಒಂದು ವಿಚಿತ್ರ ವಾತಾವರಣ ನಮ್ಮಲ್ಲಿದೆ. ಇಂಗ್ಲಿಷಿಗಿರುವ ಅನುಕೂಲಗಳು, ಪ್ರತಿಷ್ಠೆ ನಮ್ಮ ಭಾಷೆಗಳಿಗಿಲ್ಲ. ಇದು ಪತ್ರಿಕೋದ್ಯಮಕ್ಕೂ ಹೊರತಾದುದಲ್ಲ ಎಂಬುದನ್ನು ಬಹುಬೇಗನೆ ರಾಮನಾಥ ಗೊಯೆಂಕಾ ಗ್ರಹಿಸಿದರು; ಪ್ರಾದೇಶಿಕ ಭಾಷೆಗಳ ಪತ್ರಕರ್ತರು ಸಹಜವಾದ ಕೆಲವಾರು



ಪ್ರೊ| ಗೋಪಾಲಕೃಷ್ಣ ಅಡಿಗ ಹಾಗೂ ಜಿ. ಟಿ. ನಾರಾಯಣ ರಾಯರೊಡನೆ ಪಾವೆಂ ದಂಪತಿಗಳು.

ಸೀಮಿತಗಳಿಂದ ಇಂಗ್ಲಿಷ್ ಪತ್ರಕರ್ತರೊಡನೆ ಸ್ಪರ್ಧಿಸುವುದು ಕಷ್ಟ ಎನ್ನುವುದನ್ನು ಗಮನಿಸಿದರು. ಆದ್ದರಿಂದ ಮರುವರ್ಷವೇ ಮತ್ತೊಂದು ಪ್ರಶಸ್ತಿಯನ್ನು ಆರಂಭಿಸಿದರು. ಒಂದು ಇಂಗ್ಲಿಷಿಗೆ; ಇನ್ನೊಂದು ಭಾರತೀಯ ಭಾಷೆಗಳಿಗೆ. ಭಾರತೀಯ ಭಾಷೆಗಳಿಗೇ ಎರಡೂ ಪ್ರಶಸ್ತಿ ಲಭಿಸಬಹುದು; ಆದರೆ ಇಂಗ್ಲಿಷಿಗೆ ಮಾತ್ರ ಎರಡೂ ಪ್ರಶಸ್ತಿ ಹೋಗುವಂತಿಲ್ಲ ಎಂದು ನಿರ್ಧಾರವಾಯಿತು: ಇದರಿಂದ ದೇಶಭಾಷೆಗಳ ಪತ್ರಿಕೋದ್ಯಮಕ್ಕೆ ವಿಶೇಷ ಮಾನ್ಯತೆ ದೊರೆತಂತಾಯಿತು.

ದೇಶಭಾಷೆಗಳ ಮೊದಲನೆಯ 1984ರ ಪ್ರಶಸ್ತಿಯನ್ನು ಭೋಪಾಲಿನ ಹಿಂದೀ ಪತ್ರಕರ್ತ ರಾಜ್‌ಕುಮಾರ್ ಕೇಶ್ವಾನಿ ಅವರಿಗೆ ಕೊಡಲಾಯಿತು. ಕೇವಲ ಮೂವತ್ತೈದನೆಯ ವಯಸ್ಸಿನಲ್ಲಿಯೇ ಕೇಶ್ವಾನಿ ಈ ರಾಷ್ಟ್ರೀಯ ಪ್ರಶಸ್ತಿ ಪಡೆದರು! ಜಗತ್ತಿನಲ್ಲಿಯೇ ಒಂದು ದಾಖಲೆಯಾದ ಭೋಪಾಲ್ ದುರಂತವನ್ನು, ಅದು ನಡೆಯುವುದಕ್ಕೆ ನಾಲ್ಕು ವರ್ಷಗಳ ಮೊದಲೇ ಗ್ರಹಿಸಿ ಎಚ್ಚರಿಸಿ ಬರೆದ ಏಕಮಾತ್ರ ಪತ್ರಕರ್ತ ಕೇಶ್ವಾನಿ ಆಗಿದ್ದರು! ಅವರ ಎಚ್ಚರಿಕೆಯನ್ನು ಯೂನಿಯನ್ ಕಾರ್ಬೈಡಿನ ಅಧಿಕಾರಿಗಳಾಗಲಿ, ನಮ್ಮ ದೇಶದ ಸರ್ಕಾರವಾಗಲಿ, ಸಾರ್ವಜನಿಕರಾಗಲಿ ಗಮನಿಸಿದ್ದಿದ್ದರೆ ಆ ಮಹಾ ದುರಂತ ತಪ್ಪುತ್ತಿತ್ತು. ಇತರ ಪತ್ರಕರ್ತರೂ ಸಹ ಕೇಶ್ವಾನಿಯವರ ಮಾತುಗಳನ್ನು ಗಂಭೀರವಾಗಿ ಪರಿಗಣಿಸಲಿಲ್ಲ. ಯೂನಿಯನ್ ಕಾರ್ಬೈಡಿನ ಆಮಿಷಗಳು ಅವರಿಗೆ ಆಕರ್ಷಕವೆನ್ನಿಸಿದ್ದವು! ಕೇಶ್ವಾನಿಯವರಂಥ ದಿಟ್ಟ ಧೀರ ಪತ್ರಕರ್ತರನ್ನು ಹುಡುಕಿ ಆಯ್ಕೆ ಮಾಡಿದ್ದು–ಗೊಯೆಂಕಾ ಪ್ರಶಸ್ತಿ ಸಮಿತಿಯ ಒಂದು ಮಹಾಸಾಧನೆಯಾಗಿತ್ತು.

ಇಂಥದೊಂದು ಮಹತ್ವದ ಪ್ರಶಸ್ತಿಯನ್ನು ಈಗ ಪಾವೆಂ ಪಡೆದಿದ್ದಾರೆ. ಒಂದು ಅರ್ಥದಲ್ಲಿ ಅವರೀಗ ನಿವೃತ್ತರು; ಇನ್ನೊಂದು ಅರ್ಥದಲ್ಲಿ ಅವರಂಥವರಿಗೆ ನಿವೃತ್ತಿ ಎಂಬುದೇ ಇಲ್ಲ! ಅವರು ವೃತ್ತಿಯಲ್ಲಿದ್ದಾಗ ಮಾಡಿಹೋದ ಕೆಲಸ ನಮ್ಮ ಸಮಕಾಲೀನ ಕನ್ನಡ ಪತ್ರಿಕೋದ್ಯಮದಲ್ಲಿ ತುಂಬ ಮಹತ್ವದ್ದು. ಅವರನ್ನು ಗೊಯೆಂಕಾ ಪ್ರಶಸ್ತಿಗೆ ಆಯ್ಕೆ ಮಾಡಿದ್ದು ಸಮಿತಿಯ ನಿಷ್ಪಕ್ಷಪಾತ ಧೋರಣೆಗೆ ಒಂದು ಸಾಕ್ಷಿ. ಕನ್ನಡ ಪತ್ರಿಕೋದ್ಯಮದಲ್ಲಿ ಪಾವೆಂ ಒಂದು ಆದರ್ಶ. ಅವರ ದೃಷ್ಟಿ ಧೋರಣೆ ಶೈಲಿ ನಿರೂಪಣೆಗಳು, ಜೊತೆಗೆ ವಿಚಾರವಂತಿಕೆ ಅನನ್ಯವಾದವು. ಅವರೊಬ್ಬ ನಿಜವಾದ ಬುದ್ಧಿಜೀವಿ. ದಿನಕ್ಕೊಂದು ಮಾತನಾಡುತ್ತ, ವಿರೋಧಗಳಲ್ಲಿ, ಆಭಾಸಗಳಲ್ಲಿ ಪ್ರಸಿದ್ಧಿ ಪಡೆಯುವ ಬುದ್ಧಿಜೀವಿಗಳ ವರ್ಗಕ್ಕೆ ಸೇರಿದವರಲ್ಲ ಅವರು. ಕರ್ನಾಟಕದ ಹತ್ತು ಜನ ಪರಿಶುದ್ಧ ಬುದ್ಧಿಜೀವಿಗಳನ್ನು ಆರಿಸಿದರೆ ಅವರಲ್ಲಿ ಪಾವೆಂ ಖಂಡಿತ ಒಬ್ಬರಾಗಿರುತ್ತಾರೆ. ಅವರು ಪತ್ರಿಕೋದ್ಯೋಗಿ ಮಾತ್ರವಲ್ಲ; ಕವಿ, ಕತೆಕಾರ, ವಿಮರ್ಶಕ, ಪ್ರಬಂಧಕಾರರು ಕೂಡ. ಈ ಗುಣಗಳಿಂದಲೇ ಅವರ ಪತ್ರಿಕೋದ್ಯೋಗಕ್ಕೆ ವಿಶೇಷ ಕಳೆಗಟ್ಟಿದೆ ಎಂದರೆ ಅತಿಶಯೋಕ್ತಿ ಆಗಲಾರದು. ನಮ್ಮ ಅನೇಕ ಪತ್ರಕರ್ತರು ಕಣ್ಣುಪಟ್ಟಿ ಕಟ್ಟಿಕೊಂಡವರು. ಆದ್ದರಿಂದಲೇ ಅವರ ಬರಹಗಳು ಜಡಗೊಂಡಿರುತ್ತವೆ. ಅವುಗಳಲ್ಲಿ ರಸವಿರುವುದಿಲ್ಲ; ಸೊಗಸೂ ಇರುವುದಿಲ್ಲ.

ಪಾಡಿಗಾರು ವೆಂಕಟರಮಣಾಚಾರ್ಯರು ಹುಟ್ಟಿದ್ದು (ಫೆಬ್ರುವರಿ 5, 1915) ಉಡುಪಿಯಲ್ಲಿ. ತಂದೆ ಪಾಡಿಗಾರು ಲಕ್ಷ್ಮೀನಾರಾಯಣ ಆಚಾರ್ಯ; ತಾಯಿ ಸೀತಮ್ಮ. ಪಾವೆಂ ತುಂಬ ಬುದ್ಧಿವಂತರಾಗಿದ್ದರೂ ಬಡತನದ ಬವಣೆಯಿಂದ, ತಮ್ಮ ಶಿಕ್ಷಣವನ್ನು ಎಸ್.ಎಸ್.ಎಲ್.ಸಿ.ಯಿಂದ ಆಚೆಗೆ ಮುಂದುವರಿಸುವುದು ಸಾಧ್ಯವಾಗಲಿಲ್ಲ. ಒಂದು ದೃಷ್ಟಿಯಿಂದ ಇದು ಒಳ್ಳೆಯದೇ ಆಯಿತೆಂದು ತೋರುತ್ತದೆ. ಶಿಕ್ಷಣ ಅವರ ಚಿಂತನೆಗಳನ್ನು 'ಟ್ರಿಂ' ಮಾಡುತ್ತಿತ್ತು; ಶಿಸ್ತಿಗೆ ಒಳಪಡಿಸಿ ಬಾಡಿಸುತ್ತಿತ್ತು; ಪಾವೆಂ ಅವರಿಗೆ ನೇರವಾಗಿ ಬದುಕಿನಿಂದಲೇ ಕಲಿಯುವ ಅವಕಾಶ ಕಡಿಮೆಯಾಗುತ್ತಿತ್ತು.

ಸಂಪುಟ 8 ಸಂಚಿಕೆ 24
ಜೂನ್ 17 – 23, 1990

15 'ಕಸ್ತೂರಿ'ಯ ವಿಶ್ವಕೋಶ

# ಪಾವೆಂ



★ ಬಿ. ಭಾಸ್ಕರ ರಾವ್; ಶಾಂತಾರಾಮ್

# ಪಾವೆಂ

ಬದುಕನ್ನು ರೂಪಿಸಿದ ಶಿಲ್ಪಿ ಅವರು." "ಅವರಿಂದ ಯಾವ ಲೌಕಿಕ ಪ್ರಯೋಜನವೂ ಇಲ್ಲ, ಅವರು ಅಧಿಕಾರದಲ್ಲಿಯೂ ಇಲ್ಲ, ಅಂಥವರಿಗಾಗಿ ಇಷ್ಟು ಕಷ್ಟ ಪಡುತ್ತಿದ್ದೀರಲ್ಲ! ಈ ಹುಚ್ಚಿಗೆ ಏನನ್ನೋಣ!"

"ನಾಮದ ಬಲ ಎಂದರೇನು?" ಮೂರ್ತ ನಿಸ್ವಾರ್ಥ ಸಮಾಜೋಪಯುಕ್ತ ದುಡಿಮೆಯ ಅಮೂರ್ತ ಫಲ ಅಥವಾ ಮೌಲ್ಯವೇ "ನಾಮ" ಇಂಥ ಕೈಂಕರ್ಯದಿಂದ ನಾಮಕ್ಕೆ ಬಲ ಬರುವುದೇ ವಿನಾ ವಿಪರ್ಯಯವಾಗಿ ಅಲ್ಲ, ಪಾವೆಂ ಇಂಥ ನಾಮ ಗಳಿಸಿದ್ದರಿಂದಲೇ ನಮ್ಮ ಸಮಿತಿಯ ಪ್ರಯತ್ನ ನಿರೀಕ್ಷಾತೀತವಾಗಿ. ಪವಾಡವೋ ಎಂಬಂತೆ ಯಶಸ್ವಿ ಆಯಿತು.

10-9-1977ರಂದು ಪಾವೆಂ-ಸನ್ಮಾನ- ಮೈಸೂರಿನಲ್ಲಿ, ಹಿಂದಿನ ಸಂಜೆ ಅವರೊಂದು ಭೋಳ ಪ್ರಶ್ನೆ ಕೇಳಿದರು : "ಈ ಮೊಬಲಗನ್ನು ಯಾವ ಸಮಾಜ ಸೇವಾಕಾರ್ಯಕ್ಕೆ ಮುಡಿಪಾಗಿಡಬೇಕೆಂದು ಸಮಿತಿ ಉದ್ದೇಶಿಸಿದೆ? ಅದರ ಬಗ್ಗೆ ನಾನೇನಾದರೂ ಎರಡು ನುಡಿ ಆಡಬೇಕೇ?"

"ವ್ಯವಹಾರ- ಅಚತುರ ಮಹೋನ್ನತರೇ! ಅದನ್ನು ಪ್ರೀತಿ ಕೃತಜ್ಞತೆಗಳಿಂದ ನಿಮಗೆ ಒಪ್ಪಿಸಲೆಂದು ಸಲ್ಲಿಸಿದವರು ಜನ. ಅವರೆಲ್ಲರ ಏಕೋದ್ದೇಶ : ಆ ಮೊಬಲಗು ನಿಮ್ಮ ಕೈ ಸೇರತಕ್ಕದ್ದು, ಬೇರೆ ಯಾವುದೇ ಕಾರ್ಯಕ್ಕೆ ಮೀಸಲಾಗತಕ್ಕದ್ದಲ್ಲ!"

ಬಡತನದಿಂದ ಕುಗ್ಗಲಿಲ್ಲ, ಹಣ ಬಂದಾಗ ಹಿಗ್ಗಲಿಲ್ಲ, ಇದ್ದದ್ದನ್ನು ಸಮಾಜಕ್ಕೆ ಶರಣಾಗತಿ ಭಾವದಿಂದ ಸಮರ್ಪಿಸಿ ಕೃತಕೃತ್ಯರಾಗುತ್ತಿದ್ದುದು ಇವರ ಸ್ವಭಾವ : "ಹಿಡಿದ ಕೆಲಸವನ್ನು ಪ್ರಾಮಾಣಿಕವಾಗಿ ಪೂರೈಸಬೇಕು. ನೈತಿಕ ಹೊಣೆಯ ಭಾವ ಮತ್ತು ಯಾವ ಕೆಲಸವನ್ನಾದರೂ ಬೇಗ ಕಲಿತು ದಕ್ಷತೆಯಿಂದ ಮಾಡುವ ಒಂದು ಜನ್ಮಸಿದ್ಧ ಚಾಕಚಕ್ಯ ಇವಿಲ್ಲದಿದ್ದರೆ ನಾನು ಎಲ್ಲಿರುತ್ತಿದ್ದೆನೋ? ನಾನು ಯಾರಿಗಾಗಿ ಏನೂ ಮಾಡಿರದಿದ್ದರೂ ನನ್ನ ಮೇಲೆ ಅಯಾಚಿತವಾಗಿ ಅನುಕಂಪ. ಅಭಿಮಾನ. ಪ್ರೀತಿ ತೋರಿಸುವವರು ಧಾರಳವಾಗಿರುವುದು ನನ್ನ ದೈವ."

ಶ್ರೀಮತಿ ಲಕ್ಷ್ಮೀಬಾಯಿ ಆಚಾರ್ಯ "ನನ್ನ ಪತಿ ಪಾವೆಂ" ಲೇಖನದಲ್ಲಿ ಬರೆದಿದ್ದಾರೆ (1977) : "ಆಸ್ಪತ್ರೆಯಲ್ಲಿ ಇವರು ತಮ್ಮ ವಿಕ್ಷಿಪ್ತ ವೃತ್ತಿಯಿಂದ ಬಹುಬೇಗನೆ ಹಿರಿಕಿರಿಯ ಡಾಕ್ಟರ್ ಇಂಟರ್ನಿಗಳಿಗೆಲ್ಲ ಪ್ರಿಯರಾಗಿಬಿಟ್ಟಿದ್ದರು. ಬೆಳಗ್ಗೆ ಡಾಕ್ಟರರು ಇವರನ್ನು ನೋಡಲು ಬಂದರೆ ಇವರೇ ಅವರ ಕ್ಷೇಮಸಮಾಚಾರ ಕೇಳುತ್ತಿದ್ದರು!......ಅವರಿಗೆಲ್ಲ ಇವರ ಕೇಸು ಅಪರೂಪವಾಗಿತ್ತಂತೆ. ಇವರ ನಡವಳಿಕೆ ಇನ್ನಷ್ಟು ವಿಚಿತ್ರವಾಗಿರಬೇಕು. ಇವರನ್ನು ಬದುಕಿಸಬೇಕೆಂಬ ಬಗ್ಗೆ ಅವರಿಗೊಂದು ಹಟ ಹುಟ್ಟಿಬಿಟ್ಟಿತ್ತು, ಹಗಲು ರಾತ್ರಿ ಪ್ರಯತ್ನಿಸುತ್ತಿದ್ದರು. ಒಂದು ಸಲವಂತೂ ಇವರಿನ್ನು ಕೆಲ ಗಂಟೆಗಳಲ್ಲಿ ಸಾಯುತ್ತಾರೆಂಬ ತೀರ್ಮಾನವಾದಾಗ. ಒಬ್ಬ ಎಂ.ಡಿ. ವಿದ್ಯಾರ್ಥಿನಿ ನನ್ನನ್ನು ತಬ್ಬಿಕೊಂಡು ಅತ್ತುಬಿಟ್ಟಳು.

"ಇವರಿಗೆ ಮಾತ್ರ ಯಾವ ಕಾಳಜಿಯೂ ಇದ್ದಂತಿರಲಿಲ್ಲ, ಮಕ್ಕಳನ್ನೆಲ್ಲ ಕರೆಸಿದರು. ಹೇಳುವುದನ್ನು ಹೇಳಿದರು. ಜೀವಂತ ತಿರುಗಿ ಬರುವ ಆಸೆಯಿಲ್ಲವೆಂದು 30 ದಿನಗಳಲ್ಲಿ ಒಂದು ಸಲ ಆಪರೇಶನ್ ರೂಮಿಗೆ ಅರೆಜೀವ ಅವಸ್ಥೆಯಲ್ಲಿ ಇವರನ್ನು ಸಾಗಿಸುತ್ತಿರುವಾಗ ಎಲ್ಲರನ್ನೂ ಕೈಬೀಸಿ ಬೀಳ್ಕೊಂಡಿದ್ದರು. ಆಪರೇಶನ್ ಮುಗಿದು ಎಲ್ಲರೂ ಆಶ್ಚರ್ಯಪಡುವ ಹಾಗೆ ಸಜೀವವಾಗಿ ಹಿಂದೆ ಬಂದರು. ಮಾರನೇ ದಿನವೋ ಏನೋ ವಾರ್ಡಿನಲ್ಲಿ ಎಲುಬಿನ ಗೂಡು ಮತ್ತು ಚರ್ಮ ಮಾತ್ರ ಸಹಿತವಾಗಿ ಮಲಗಿದ್ದ ಇವರ ಹತ್ತಿರ. ಯಾವನೋ ಹಳ್ಳಿಗ ಯಾರನ್ನೋ ಹುಡುಕಿಕೊಂಡು ಬಂದು ಇವರೇ ಅವನೆಂಬ ಭ್ರಾಂತಿಯಿಂದ 'ಭೀಮಪ್ಪ ಅಂದರೆ ನೀನೇ ಏನು?' ಎಂದು ಕೇಳಿದ.

ಇವರು ಕಣ್ಣು ಮಾತ್ರ ಹೊರಳಿಸಿ (ಕೈಕಾಲು ಎತ್ತಲು ತ್ರಾಣವಿರಲಿಲ್ಲ) 'ಏನಪ್ಪಾ, ನನ್ನ ಕಂಡರೆ ಭೀಮನ ಹಾಗೆ ಕಾಣುತ್ತಾ ನಿನಗೆ?' ಎಂದು ಕೇಳಿದರು. ಅವನು ಪೆಚ್ಚಾಗಿ ಹೊರಟುಹೋದ.

"ನನಗೆ ಆಗ ಅಳು ಬಂತು. ಎಂಥಾ ಹೊತ್ತಿನಲ್ಲಿ ತಮಾಷೆ ಇವರದು. ನಿರ್ಮೋಹಿ! ನಿರ್ಮೋಹಿ! ಅವರಿವರ ವಿಷಯದಲ್ಲಿ ಮಾತ್ರವಲ್ಲ, ತನ್ನ ಸ್ವಂತ ಜೀವ-ಸಾವಿನ ವಿಷಯದಲ್ಲಿಯೂ. ಹೌದು. ನಿರ್ಮೋಹಿ! ನಮ್ಮ ಮಕ್ಕಳಲ್ಲಿ ಒಂದು ತನ್ನ ಒಂದೂವರೆ ವಯಸ್ಸಿನಲ್ಲಿ ತೀರಿಕೊಂಡಿತ್ತು, ಇವರು ಅಳಲಿಲ್ಲ, ಆದರೆ ಆ ಮಗು ತೀರಿಕೊಂಡ ಕೆಲ ತಿಂಗಳಲ್ಲಿ ಒಂದು ಸಂಜೆ ಇವರು ಮುಖ ಒಣಗಿಸಿಕೊಂಡು ಮನೆಗೆ ಬಂದರು. ಬಂದು ತಣ್ಣೀರು ಸ್ನಾನ ಮಾಡಿದರು. 'ಊಟ ಬೇಡ' ಎಂದರು. 'ಯಾಕೆ?' ಎಂದೆ. 'ಗಾಂಧಿಯನ್ನು ಕೊಂದರು' ಎಂದರು. ಹಾಗೇ ಮಲಗಿಬಿಟ್ಟರು. ಅವರಿಗೆ ಜ್ವರಬಂತು ; ಮರುದಿನ ಇನ್ನೂ ಹೆಚ್ಚಾಯಿತು. ಸಂಜೆ ರೇಡಿಯೋವಿನಲ್ಲಿ ಗಾಂಧಿಯ ಚಿತಾರೋಹಣದ ಸುದ್ದಿ ಬರುತ್ತಿರುವಾಗ ಇವರು ಗೋಳೋ ಎಂದು ಅತ್ತುಬಿಟ್ಟರು. 'ಯಾರೋ ಏನೋ! ಅವನಿಗಾಗಿ ಹೀಗೆ ಅಳುತ್ತೀರಿ. ನಮ್ಮ ಮಗು ಸತ್ತಾಗ ನಿಮಗೆ ಅಳು ಬರಲಿಲ್ಲ?' ಎಂದೆ. 'ನಿನಗೆ ಗೊತ್ತಿಲ್ಲ ಲಕ್ಷ್ಮೀ ನಿನಗೆ ಗೊತ್ತಿಲ್ಲ, ಗಾಂಧಿ ಅಂದರೆ ಏನು ಅಂತ ನಿನಗೆ ಗೊತ್ತಿಲ್ಲ' ಎಂದು ಮತ್ತೆ ಬಿಕ್ಕತೊಡಗಿದರು. ಹದಿನೈದು ದಿನ ಇವರ ಜ್ವರಬಿಡಲಿಲ್ಲ.

"ಇವರು ಮೋಹಿಯೇ! ನಿರ್ಮೋಹಿಯೇ? ಇವರೊಡನೆ ಬಾಳುವುದು ಸುಲಭವೇ! ಇವರನ್ನು ಪ್ರೀತಿಸದಿರುವುದು ಸುಲಭವೇ?"

-4-

ಕರ್ನಾಟಕ ಸಾಹಿತ್ಯ ಅಕಾಡೆಮಿಯ ಮಹತ್ವದ ನಿರ್ಣಾಯಕ ಸಭೆ. ಆ ಸಾಲಿನ ವಾರ್ಷಿಕ ಪ್ರಶಸ್ತಿಯನ್ನು ಯಾರಿಗೆ ಪ್ರದಾನಿಸುವುದು ಎಂಬ ತೀರ್ಮಾನ ತಳೆಯಬೇಕಾಗಿತ್ತು, ಸದಸ್ಯರಿಂದ ಆ ಮೊದಲೇ ಬಂದಿದ್ದ ಹಲವಾರು ಗಣ್ಯರು ಸಾಹಿತ್ಯ ಕೈಂಕರ್ಯವನ್ನು ಕೂಲಂಕಷವಾಗಿ ಪರಿಶೀಲಿಸಿ ಚರ್ಚಿಸಿದ್ದಾಯಿತು. ಕೊನೆಯ ಸುತ್ತಿನಲ್ಲಿ ಉಳಿದವರಿಬ್ಬರು : ಪಾವೆಂ ಮತ್ತು ಇನ್ನೊಬ್ಬರು.

ಯಾವುದೇ ಮಾನಕವನ್ನು ಅನ್ವಯಿಸಿದರೂ- ಪಾಂಡಿತ್ಯ, ಕೃಷಿ. ಕ್ರಿಯಾಶೀಲತೆ. ಯುವಲೇಖಕರಿಗೆ ಪ್ರೋತ್ಸಾಹ ಮತ್ತು ಪೋಷಣೆ. ಪ್ರಕಟಣೆಗಳ ಮೌಲಿಕತೆ. ಕೊನೆಗೆ ವಯಸ್ಸು ಕೂಡ -ಪಾವೆಂ ಕೊರಳಿಗೇ ಈ ಹಾರ ಸರ್ವಾನುಮತದಿಂದ ಬೀಳಬೇಕಾಗಿತ್ತು, ಆದರೆ ಆ ಇನ್ನೊಬ್ಬರ ಹೆಸರನ್ನು ಸೂಚಿಸಿದ ಅಕಾಡೆಮಿ ಸದಸ್ಯ ಮಾತ್ರ ತಾವು ಹಿಡಿದ ಪಟ್ಟು ಬಿಡಲಿಲ್ಲ -ಅನೇಕ ಅವೈಜ್ಞಾನಿಕ ಮತ್ತು ಅಸಾಹಿತ್ಯಕ ಕಾರಣಗಳನ್ನು ಘೋಷಿಸುತ್ತ ತನ್ನ ಕೋಳಿಯೇ ಗೆಲ್ಲತಕ್ಕದ್ದು ಎಂದು ವಾದಿಸಿದರು. ಕೊನೆಗೂ ತಕ್ಕಡಿ ಪಾವೆಂ ಕಡೆಗೇ ವಾಲಿತು- ಇವರ ಬಹುಶ್ರುತತ್ವ ಹಾಗೂ ಸೇವೆಗಳನ್ನು ಅಕಾಡೆಮಿ ಗೌರವಿಸಿತು. ಸ್ವತಃ ತನ್ನ ಗೌರವವನ್ನು ಕಾಪಾಡಿಕೊಂಡಿತು. ಪಾವೆಂ ವ್ಯಕ್ತಿತ್ವದ ಸುತ್ತ ಹಬ್ಬಿದ್ದ ಪರಿವೇಷ ಹಾಗಿತ್ತು,

ಇದರ ಕಾರಣವನ್ನು ಯು.ಆರ್. ಅನಂತಮೂರ್ತಿಯವರು ಗುರುತಿಸಿದ್ದಾರೆ. "ವಿಸ್ಮಯ ಮತ್ತು ಅನುಮಾನ ಈ ಎರಡು ಶಕ್ತಿಗಳನ್ನೂ ಕೂಡಿಸಿ ಕೊಂಡವರನ್ನು ಕಂಡರೆ ನನಗೆ ಆಶ್ಚರ್ಯ. ಬರೇ ವಿಸ್ಮಯದ ಭೋಳೆ ಸ್ವಭಾವದ ಜನ ತಮ್ಮ ಶಕ್ತಿ ಉತ್ಕಟವಾಗಿದ್ದಾಗ ಅನುಭವ ತನ್ಮಯತೆಯನ್ನು ಉಂಟುಮಾಡಬಲ್ಲ ಕೃತಿಗಳನ್ನು ಕೊಟ್ಟಾರು; ಉಳಿದ ಸಮಯ ಇವರ ಮಾತುಗಳು ಬರೀ ಊದಿಕೊಂಡಿರುತ್ತವೆ. ಅನುಮಾನ ಮಾತ್ರ ಸಾಧ್ಯವಿರುವ ಸಿನಿಕರು ಭಾಷೆಯನ್ನು ಕುಹಕಕ್ಕಾಗಿ ಬಳಸುವಾಗ ಚುರುಕಾಗಿ ರುಚಿಯಾಗಿ ಬರೆಯುತ್ತಾರೆ ನಿಜ. ಆದರೆ ಇಂಥವರು ಏನನ್ನು ಕಂಡಾರು? ಕಾಣಿಸಿಯಾರು? ಪರಚುವ. ಪರಚಿಕೊಳ್ಳುವ ಇವರ ಸುಖ ಕೊನೆಗೂ ದೊಡ್ಡ ಬೋರೇ ಸರಿ. ನನ್ನ ವಾರಿಗೆಯವರಿಗೆ ತಂದೆಯಾಗಬಹುದಾದ ವಯಸ್ಸಿನ ಪಾವೆಂ ತಮ್ಮ ವಿಚಾರದಲ್ಲಿ, ಬರವಣಿಗೆಯಲ್ಲಿ ವಿಸ್ಮಯ ಮತ್ತು ಅನುಮಾನ. ಗಾಂಭೀರ್ಯ ಮತ್ತು ಹಾಸ್ಯ ಒಟ್ಟಾಗಿ ಉಳಿಸಿಕೊಂಡು ಬಂದದ್ದು ನೋಡಿದರೆ ನನಗೆ ಅವರ ಬಗ್ಗೆ ತುಂಬ ಅಭಿಮಾನವೆನ್ನಿಸುತ್ತದೆ. ಪಾಂಪಸ್ ಆಗದಂತೆ ಪಕ್ವವಾಗುತ್ತ ಹೋಗುವ ಗದ್ಯ ಬರೆಯಬಲ್ಲ ಪಾ.ವೆಂ. ಆಚಾರ್ಯರಂಥವರು ಮಾತ್ರ ಹಿರಿಯರಾದರೂ ನಮಗೆ ಗೆಳೆಯರಾಗಿ ಉಳಿಯಬಲ್ಲ ಸೋಜಿಗದ ವ್ಯಕ್ತಿಗಳಾಗುತ್ತಾರೆ".

ಬುದ್ಧಿ-ಭಾವ ಅಥವಾ ಮಿದುಳು-ಹೃದಯ ಇವುಗಳ ಸಂಗತ ಮತ್ತು ಕಲಾತ್ಮಕ ಮೇಳದಿಂದ ಕಡೆಯಲ್ಪಟ್ಟಿತ್ತು ಅವರ ಸಮಗ್ರ ವ್ಯಕ್ತಿತ್ವ. ಇಂಥವರನ್ನು ಕುರಿತೇ ಮಂಕುತಿಮ್ಮ ಈ ನುಡಿ ಬರೆದಿರಬೇಕು : "ಮೃತ್ಯು ನಿನಗಲ್ಪತೆಯೋ!".

# ಹೀಗಿದ್ದರು ನಮ್ಮ

ಪಾಡಿಗಾರು ವೆಂಕಟರಮಣ ಆಚಾರ್ಯರು (6–2–1915—4–5–1992)ಹುಡುಕಿ ಬೆಳಕಿಗೆ ತಂದ ಅಸಂಖ್ಯ ಕನ್ನಡ ಲೇಖಕರ ಪೈಕಿ ನಾನೂ ಒಬ್ಬ.

ನನ್ನ ಕಾಲೇಜ್ ದಿನಗಳ (1942–47) ಎಲ್ಲ ಹುಡುಗರಂತೆ ನಾನು ಕೂಡ ಮೊದಲು ದೊಂಬರಾಟವಾಡಿದ್ದು ಪದ್ಯ ರಚನೆಯ ಮತ್ತು ಬರಿಸುವ ಮಂದಿರದಲ್ಲಿ; ಮುಂದೆ ಹುಚ್ಚಾಟವಾಡಿದ್ದು ಸಣ್ಣ ಕತೆಗಳ ಮಾಯಾಲೋಕದಲ್ಲಿ, ಆದರೆ ಬಲುಬೇಗ ಭ್ರಮೆನಿರಸನಗೊಂಡು ಆ ಕ್ಷೇತ್ರಗಳಿಂದ ಕಂಬಿಕಿತ್ತು ಜನಪ್ರಿಯ ವಿಜ್ಞಾನ ವಾಙ್ಮಯ ರಚಿಸುವ ನೂತನ ಹವ್ಯಾಸಕ್ಕೆ ಕೈಹಾಕಿದೆ (1949) ನನ್ನ ಮೊದಲ ಲೇಖನವೇ. ಆ ಹಿಂದಿನ ಹಲವಾರು ಕವನ ಕತೆಗಳಂತಲ್ಲದೇ, 'ಕರ್ಮವೀರ'ದಲ್ಲಿ ಪ್ರಕಟಣೆಗೆ ಸ್ವೀಕೃತವಾಗಿತ್ತು, ದೀಪಾವಳಿ ವಿಶೇಷಾಂಕಕ್ಕೆ ಬರೆಯಲು ಕರೆ ಬಂತು. ಎಲ್ಲಕ್ಕೂ ಮಿಗಿಲಾಗಿ ಖುದ್ದು ಸಂಪಾದಕರೇ ನನಗೆ ಕಾಗದ ಬರೆದು, ಮುಂದೊಂದು ದಿನ ನನ್ನನ್ನು ಭೇಟಿಯಾಗಿ, ನನ್ನ ಪ್ರಯೋಗವನ್ನು ಪ್ರಶಂಸಿಸಿದರು. ಈ ಅಪ್ರಸಿದ್ಧ ಮತ್ತು ಅನಾಮಧೇಯ ತರುಣನನ್ನು (ವಯಸ್ಸು 23) ಹೀಗೆ ಬೆನ್ನುತಟ್ಟಿ ಹುರಿದುಂಬಿಸಿದವರು ನಮ್ಮ ಪಾವೆಂ.

'ಪರಗುಣ ಪರಮಾಣುವುಮಂ ಗಿರಿಗೈದುರ್ಬುವ' ಸಹೃದಯತೆ ಅವರ ಸಫಲ ಸಾರ್ಥಕ ಸುದೀರ್ಘ ಜೀವನದ ಆಧಾರ ಶ್ರುತಿ. ಅವರೇ ಬರೆದಿದ್ದಾರೆ : "ಬದುಕು ವೈಯಕ್ತಿಕವಾಗಿರುವಂತೆ ಒಂದು ಸಮಷ್ಟಿ ಪ್ರವಾಹವೂ ಹೌದೆಂದೂ ಆ ಸಮಷ್ಟಿಗೆ ಪೂರ್ತಿ ಹೊರತಾದದ್ದು ಅಸಹಜವೆಂದೂ ನನಗೆ ಅನಿಸುವುದರಿಂದ ಸಮಷ್ಟಿಗೆ ಘಾತಕವಾದದ್ದನ್ನು ಮಾಡುವುದು ಕೂಡ ಅನೈಸರ್ಗಿಕವೆಂದು ನಾನು ನಂಬಿದ್ದೇನೆ. ಆ ಕಾರಣದಿಂದ ನನ್ನೊಡನೆ ಸಂಪರ್ಕ ಬಂದ ಜೀವಿಗಳ ದುಃಖದ ಮೊತ್ತವನ್ನು ಹೆಚ್ಚಿಸಿ ಸುಖವನ್ನು ಕಡಿಮೆ ಮಾಡುವ ವರ್ತನೆ ಕೊನೆಗೆ ನನ್ನ ಸುಖವನ್ನೂ ಕುಗ್ಗಿಸುತ್ತದೆಂದು ಮನವರಿಕೆಯಾದ್ದರಿಂದ ನಾನು ಹಾಗೆ ಮಾಡದಿರಲು ಯತ್ನಿಸುತ್ತೇನೆ. ಒಂದು ಮಿತಿಯೊಳಗೆ ಇತರರಿಗಾಗಿ ನಾವು ಪಡುವ ಕಷ್ಟಗಳಲ್ಲಿ ಒಂದು ಸುಖವಿರುವುದರಿಂದ ಅದಕ್ಕೂ ನಾನು ಸಿದ್ಧನೇ. ಇದಕ್ಕೆ ತ್ಯಾಗ ಎಂದು ನಾನು ಹೆಸರಿಡುವುದಿಲ್ಲ" ('ಪಾವೆಂ ಕಸ್ತೂರಿ'ಯಲ್ಲಿ 'ನನ್ನ ಜೀವನದೃಷ್ಟಿ.')

–2–

1974ರ ಕೊನೆಯ ಪಾದ. ಈ ಸಣಕಲ ರೋಗಿ ...ತೆರಡು ತೀವ್ರ ಉದರ ಶಸ್ತ್ರಕ್ರಿಯೆಗಳನ್ನು ಎದುರಿಸಿ ...ತ್ಯುವಿನೊಡನೆ ಹೋರಾಡಿ (ಅಲ್ಲ : ಲಾಂಗೂಲಾಚಾರ್ಯ ವಿನೋದ ಹೂಡಿ) ಪುನರ್ಜನ್ಮ ಪಡೆದರು. ಈ 'ಪವಾಡ'ವನ್ನು ಸಾಧಿಸಿದ ಶಸ್ತ್ರ ವೈದ್ಯ ಡಾ. ಸಿ. ಆರ್. ರಘು ಬರೆದಿದ್ದಾರೆ : "ಆಚಾರ್ಯರದು ಒಂದು ರೀತಿಯಲ್ಲಿ ನಿರ್ಲಿಪ್ತ ಜೀವನ. ಅವರಿಗೆ ಸಾವಿನ ಬಗ್ಗೆ ಅಂಜಿಕೆ ಇರಲಿಲ್ಲ, ರೋಗ ವಿಪತ್ಕಾರಕ ಮಟ್ಟದಲ್ಲಿದ್ದಾಗ್ಯೂ ಅವರು ಏನೂ ಆಗದವರ ಹಾಗೆ ಇದ್ದರು. ಅವರನ್ನು ಶಸ್ತ್ರಕ್ರಿಯೆಗಳಿಗೆ ಕರೆದೊಯ್ಯುವಾಗ ತಮ್ಮ ಸುತ್ತಲಿದ್ದ ಬಂಧುಮಿತ್ರರಿಗೆ ತಮಾಷೆ ಮಾಡಿದ್ದು ನನಗಿನ್ನೂ ನೆನಪಿದೆ 'ನನ್ನನ್ನು ಶ್ಮಶಾನಕ್ಕೆ ಕಳಿಸೋರಹಾಗೆ ನಿಂತಿದೀರಲ್ಲ?'....... ರೋಗಿಯಾಗಿ ಆಚಾರ್ಯರು ಮತ್ತು ಉಪಚಾರಿಕೆಯಾಗಿ ಅವರ ಪತ್ನಿಯ ಸೇವೆಯನ್ನು ನಾನು ಉಲ್ಲೇಖಿಸದಿದ್ದರೆ ಈ ಘಟನೆಯ ಒಳ್ಳೆಯ ಭಾಗವೊಂದನ್ನು ಮರತಂತಾಗುತ್ತದೆ. ಆಚಾರ್ಯರು ಬುದ್ಧಿಜೀವಿ. ಆದರೆ ಬುದ್ಧಿಜೀವಿಗಳಲ್ಲಿ ಕಾಣಬಹುದಾದ ಯಾವ ಅತಿರೇಕವನ್ನೂ ನಾನು ಅವರಲ್ಲಿ ಕಂಡಿಲ್ಲ, ನನ್ನ ಕಿರಿಯ ಸಹೋದ್ಯೋಗಿಯಿಂದ ಹಿಡಿದು ದಾಯಿಯವರೆಗೆ ಯಾರ ಸೂಚನೆಯನ್ನು ಉಪೇಕ್ಷೆ ಮಾಡದೆ ಮಗುವಿನಂತೆ ಅದನ್ನು ಪಾಲಿಸುತ್ತಿದ್ದರು. ತಮ್ಮ ಸಾರ್ವಜನಿಕ ಜೀವನದಲ್ಲಿ ಹೇಗೊ ಹಾಗೆ ಆಸ್ಪತ್ರೆಯ ರೋಗಿಯಾಗಿಯೂ ಅದೇ ಸ್ಥಿರತೆಯನ್ನು ಕಾಪಾಡಿಕೊಂಡರು ಪಾವೆಂ. ಆಚಾರ್ಯರ ಧರ್ಮ ಪತ್ನಿ, ಪತ್ನಿಯಾಗಿ ಸಲ್ಲಿಸಿದ ಸೇವೆ ನನ್ನ ನೆನಪಿನಲ್ಲಿ ಹಸುರಾಗಿದೆ. ಅವರ ಒಳ್ಳೆಯತನ, ಸಹನೆ, ಆರೈಕೆಯಲ್ಲಿಯ ಕಟ್ಟುನಿಟ್ಟು



**ಪಾವೆಂ ಕನ್ನಡದ ಅಪರೂಪದ ಪ್ರತಿಭೆ. ಪಾಂಡಿತ್ಯ, ಅನುಭವ ವಿನಯದಿಂದ ಮಿಶ್ರಗೊಂಡು ರೂಪುಗೊಂಡಿದ್ದ ಅವರ ಬರಹ, ಸಂಶೋಧನೆ ಕನ್ನಡ ಶ್ರೀಮಂತಿಕೆಯನ್ನು ಹೆಚ್ಚಿಸಿದೆ**

**ಜಿ. ಟಿ. ನಾರಾಯಣರಾವ್**

ಎಲ್ಲ ಪ್ರಶಂಸಾರ್ಹ. ಸಾವಿತ್ರಿತ್ವದ ಸಾಕ್ಷಾತ್ಕಾರವನ್ನು ನಾವು ಕಾಣುವುದು ಇಂಥ ಸನ್ನಿವೇಶಗಳಲ್ಲಿಯೇ ಅಲ್ಲವೇ!"

–3–

ದೈಹಿಕವಾಗಿಯೂ ಆರ್ಥಿಕವಾಗಿಯೂ ಅವರೆಂದೂ ಬಲಿಷ್ಠರಾಗಿರಲಿಲ್ಲ, ಆದರೆ ಅವರ ಬೌದ್ಧಿಕ ತೀಕ್ಷ್ಣತೆ ವಿನಯಗಳ ದಿವ್ಯತೆ ಅಂತೆಯೇ ಆತಿಥ್ಯ ದಾನಶೂರತ್ವ ಔದಾರ್ಯಗಳ ಮಧುರತೆ ಅನುಭವಿಸಿದವರೆಲ್ಲರಿಗೂ ಒಂದು ಸಂಗತಿ ಚೆನ್ನಾಗಿ ಗೊತ್ತಿದೆ : "ವಿಸ್ತಾರದಲಿ ಬಾಳು, ವೈಶಾಲ್ಯದಿಂ ಬಾಳು! ಕತ್ತಲೆಯ ಮೊಡಕು ಮೂತಿಗಳ ಸೇರದಿರು" (ಮಂಕುತಿಮ್ಮ).

1976ರ ಕೊನೆಯ ಪಾದ. ಪ್ರೊ, ಗೋಪಾಲಕೃಷ್ಣ ಅಡಿಗರ ಅಧ್ಯಕ್ಷತೆಯಲ್ಲಿ ನಾವು ಕೆಲವರು ಪಾವೆಂ ಅಭಿಮಾನಿಗಳು ಸಭೆ ಸೇರಿ ಈ ಬಹುಶ್ರುತ ಅಜಾತಶತ್ರುವನ್ನು ಸಾರ್ವಜನಿಕವಾಗಿ ಗೌರವಿಸಿ ಇವರಿಗೆ ನಿಧಿ ಅರ್ಪಿಸಬೇಕೆಂದು ತೀರ್ಮಾನಿಸಿದೆವು. ಪಾವೆಂ ಅವರನ್ನು ಈ 'ಬಂಧನ'ಕ್ಕೆ ಬೀಳಿಸುವುದು ಸುಲಭವಲ್ಲವೆಂದು ಸಮಿತಿಯ ಕಾರ್ಯದರ್ಶಿಯಾದ ನನಗೆ ಚೆನ್ನಾಗಿಗೊತ್ತಿತ್ತು, ಆದರೆ ನಿರ್ವಂಚನೆಯ ಮಿತ್ರರ ಸ್ವಯಂಪ್ರೇರಿತ ವಿಜ್ಞಾಪನೆಯ ಬ್ರಹ್ಮಾಸ್ತ್ರವೊಂದೇ ಈ ಲಾಂಗೂಲಾಚಾರ್ಯರನ್ನು 'ಕಪ್ಪಕ್ಕೆ ಕೆಡೆ'ಯಬಲ್ಲ ಸಾಧನವೆಂದೂ ನನಗೆ ತಿಳಿದಿತ್ತು, ಸಮಿತಿಯ ಪರವಾಗಿ ನಾನು ಸಲ್ಲಿಸಿದ ಕೋರಿಕೆಗೆ ಅವರು ಬರೆದ ಮಾರೋಲೆ : "ನೀವೆಲ್ಲ ನನ್ನ ಸಲುವಾಗಿ ಇಷ್ಟೆಲ್ಲ ಖಟಿಪಿಟಿ ಮಾಡುವುದು ನೋಡಿ ನನ್ನ ಮನಸ್ಸು ತುಂಬಿ ಬರುತ್ತದೆ. ಹಾಗೆಯೇ ನನ್ನ ಅಪ್ರಯತ್ನಶೀಲತೆಗಾಗಿ ನಾಚಿಕೆಯೂ ಆಗುತ್ತಿದೆ. ಸತ್ಕಾರ್ಯಕ್ಕೆ ನನ್ನ ಆಶೀರ್ವಾದ ಬೇಡಿದ್ದೀರಿ. ವಯಸ್ಸಿನಲ್ಲಿ ಹಿರಿಯನಾದ ಮಾತ್ರಕ್ಕೆ ಆಶೀರ್ವಾದ ಕೊಡಲು ಹಕ್ಕು ಬರುತ್ತದೆಂಬ ಭ್ರಮೆ ನನಗಿಲ್ಲ, ನಿಮ್ಮ ಭಾವನೆಗಳಿಗೆ ನಾನು ಗೌರವ ಕೊಡುತ್ತೇನೆಂದಷ್ಟೇ ಹೇಳುತ್ತೇನೆ"

ಮುಂದಿನ ದಿನಗಳಲ್ಲಿ ನಮಗೆ ಹಣದ ಹೊಳೆಯೇ ಹರಿದುಬಂದಿತು ಭಾರತದ ಒಳಗಿನಿಂದ ಮಾತ್ರವೇ ಅಲ್ಲ, ದೂರದ ಆಫ್ರಿಕಾ, ಅಮೆರಿಕ, ಇಂಗ್ಲೆಂಡ್ ಮತ್ತು ಜಪಾನ್ ದೇಶಗಳಿಂದ ಕೂಡ! ಪ್ರತಿಯೊಂದು ದೇಣಿಗೆಯ ಹಿಂದೆಯೂ ಒಂದು ಹೃದಯ ಮಿಡಿಯುತ್ತಿತ್ತು : "ನಾನು ಅವರಿಂದ ಅತಿಶಯವಾಗಿ ಪ್ರಭಾವಿತನಾಗಿದ್ದೇನೆ." "ನನ್ನ





ಪಾ. ವೆಂ. ಆಚಾರ್ಯ
ಲೇಖಕ ಮತ್ತು ಪತ್ರಿಕೋದ್ಯಮಿ
(ನಿವೃತ್ತ ಸಂಪಾದಕ, ಕಸ್ತೂರಿ)

82, ಕರ್ನಾಟಕ ಹೌಸಿಂಗ್ ಬೋರ್ಡ್ ಕಾಲನಿ,
ಹುಬ್ಬಳ್ಳಿ - 580032

ಪ್ರಿಯ ಗುಲ್ವಾಡಿಯವರೇ,
ಇತರರಿಗಿಂತ ಭಿನ್ನವಾಗಿದ್ದು ತನ್ನದೇ ಓದುಗರ ಬಳಗ ಸೃಷ್ಟಿಸಿಕೊಳ್ಳುವ ನಿಮ್ಮ ಸಾಹಸವನ್ನು ಮೆಚ್ಚುತ್ತೇನೆ. ಇದು [illegible] ಕೆಲಸ. ಆದರೆ 'ತರಂಗ' ಇದರಲ್ಲಿ ಗೆದ್ದು ಬರುತ್ತದೆಂಬ ವಿಶ್ವಾಸ ನನಗಿದೆ.

ಪಾವೆಂ.
23. 3. 83

## “ಕನ್ನಡಿಗರ ಸಾರ್ವತ್ರಿಕ ಉದ್ಧಾರವಾದಾಗಲೇ ಕನ್ನಡ ಭಾಷೆಯ ಉದ್ಧಾರ ಸಾಧ್ಯ”

# ಪಾ. ವೆಂ. ಆಚಾರ್ಯ

● ಸಂದರ್ಶನ : ಆರೂರು ಲಕ್ಷ್ಮಣ ಶೇಟ್

ಅರೆಬರೆ ಜ್ಞಾನವನ್ನು ದಿಢೀರನೆ ಕಾರಿಕೊಂಡು – 'ಲೇಖಕ' ಅನ್ನುವ ಹಣೆಪಟ್ಟಿ ಹಚ್ಚಿಕೊಂಡು – ಎರವಲು 'ಇಸಂ'ಗಳ ನೆರಳಲ್ಲಿ ಗುಂಪುಕಟ್ಟಿಕೊಂಡು ವಿಜೃಂಭಿಸ ಬಯಸುವ ಬರಹಗಾರರದ್ದು ಒಂದು ವರ್ಗ. ಗಟ್ಟಿ ನೆಲದ ಮೇಲೆ ಸಾಹಿತ್ಯ ಕೃಷಿಯನ್ನು ಆರಂಭಿಸಿ – ಜ್ಞಾನ ವೃದ್ಧಿಗಾಗಿ ಅನವರತ ಶ್ರಮಿಸಿ – ಭಟ್ಟಿ ಇಳಿಸಲ್ಪಟ್ಟ ದಟ್ಟ ವಿಚಾರಗಳಿಗೆ, ಅನುಭವಗಳಿಗೆ ಅಕ್ಷರಗಳ ರೂಪು ನೀಡುವವರದ್ದು ಇನ್ನೊಂದು ವರ್ಗ.

ಪಾಡಿಗಾರು ವೆಂಕಟರಮಣ ಆಚಾರ್ಯರು ಎರಡನೆಯ ವರ್ಗಕ್ಕೆ ಸೇರಿದ ಪ್ರಬುದ್ಧ ಲೇಖಕರು. ನಿರಂತರ ಅಧ್ಯಯನದಿಂದ ವಸ್ತುಗಳನ್ನು ಕಲೆಹಾಕಿ ನಂತರ ಲೇಖನ ಸಿದ್ಧಪಡಿಸುವ ಪಾವೆಂ – ವೈಚಾರಿಕ ಲೇಖನಗಳನ್ನು ಸಿದ್ಧಪಡಿಸುವಾಗ ವಹಿಸುವಷ್ಟೇ ಕಾಳಜಿಯನ್ನು ವಿಡಂಬನಾತ್ಮಕ ಬರಹಗಳನ್ನು ಸೃಷ್ಟಿಸುವಾಗಲೂ ತೆಗೆದುಕೊಳ್ಳುತ್ತಾರೆ. ನಲವತ್ತೈದು ವರ್ಷಗಳಷ್ಟು ದೀರ್ಘ ಅವಧಿಯನ್ನು ಪತ್ರಿಕೋದ್ಯಮದಲ್ಲಿ ಸೇವೆ ಸಲ್ಲಿಸುತ್ತಾ ಕಳೆದಿರುವ ಈ 'ಲಾಂಗೂಲಾಚಾರ್ಯ'ರದ್ದು ವಿಭಿನ್ನ ಅಭಿರುಚಿ; ಗಾಢ ಅಧ್ಯಯನ; ಅಪಾರ ಜ್ಞಾನಸಂಪತ್ತು; ಕನ್ನಡ ಭಾಷೆಯ ಮೇಲೆ ಅಗಾಧ ಪ್ರಭುತ್ವ.

ಮಣಿಪಾಲದ 'ಅಂತರಂಗ' ದಿಂದ 'ಪಾವೆಂ' ಪತ್ರಿಕೋದ್ಯಮ ಆರಂಭ. 1942ರಲ್ಲಿ 'ಪ್ರಿಂಟಿಂಗ್ ಸೂಪರಿಂಟೆಂಡೆಂಟ್' ಆಗಿ 'ಸಂಯುಕ್ತ ಕರ್ನಾಟಕ' ಬಳಗವನ್ನು ಸೇರಿದ 'ಪಾವೆಂ' ನಿವೃತ್ತಿಯ ತನಕವೂ (1974) ಅದನ್ನೇ ತಮ್ಮ ಕಾರ್ಯ ಕ್ಷೇತ್ರವನ್ನಾಗಿಸಿಕೊಂಡಿದ್ದರು. 18 ವರ್ಷಗಳ ಕಾಲ (1956 – 1974) 'ಕಸ್ತೂರಿ' ಮಾಸಿಕದ ಸಂಪಾದಕರಾಗಿ, ಅದನ್ನು ಕನ್ನಡದ ಶ್ರೇಷ್ಠ 'ಡೈಜೆಸ್ಟ್' ಆಗಿ ಪರಿವರ್ತಿಸಿದ 'ಪಾವೆಂ' ಕನ್ನಡ ಪತ್ರಿಕೋದ್ಯಮಕ್ಕೆ ಸಲ್ಲಿಸಿದ ಸೇವೆ ಈ ಪೀಳಿಗೆಯ ಪತ್ರಕರ್ತರಿಗೆ ಪಥದರ್ಶಕ.

1974ರಲ್ಲಿ ನಡೆಸಲ್ಪಟ್ಟ ಶಸ್ತ್ರಚಿಕಿತ್ಸೆಯೊಂದರಲ್ಲಿ 'ಸತ್ತು ಬದುಕಿದ' 'ಪಾವೆಂ' ಅಲ್ಲಿ ಇಲ್ಲಿ – ಬೇರೆ ಬೇರೆ ಪತ್ರಿಕೆಗಳಲ್ಲಿ – ಬರೆದ ಲೇಖನಗಳು ಸಂಗ್ರಾಹ್ಯ. ದೈಹಿಕವಾಗಿ ದುರ್ಬಲರಾಗಿರುವ 'ಪಾವೆಂ' ಹೇಳಬೇಕಾದದ್ದು – ಬರೆಯಬೇಕಾದದ್ದು – ಬಹಳಷ್ಟು ಉಂಟು. ಅವರ ಉದ್ಬೋಧಕ ವಿಚಾರಗಳನ್ನು 'ತರಂಗ'ದ ಓದುಗರಿಗಾಗಿ ತೆರೆದಿಡುತ್ತಿದ್ದೇವೆ :-

● ಚಿರ ಮೌಲ್ಯಗಳು ಯಾವುವು? ಅವುಗಳನ್ನು ನೆಚ್ಚಿಕೊಂಡ ವ್ಯಕ್ತಿ ಈ ಸಮಾಜದಲ್ಲಿ ಎಷ್ಟು ಸುಖಿ?

**ಪಾವೆಂ :** 'ಮೌಲ್ಯ' ಅನ್ನೋದು ಕನಿಷ್ಠ ಪಕ್ಷ ಇಬ್ಬರು ಮನುಷ್ಯರು ಇದ್ದಲ್ಲಿ ಉಂಟಾಗುತ್ತದೆ. ಒಬ್ಬನೇ ಇದ್ದರೆ ಆ ಪ್ರಶ್ನೆ ಏಳುವುದಿಲ್ಲ. ನನ್ನ ದೃಷ್ಟಿಯಲ್ಲಿ ಮೌಲ್ಯ ಎಂದರೆ ಮನುಷ್ಯ-ಮನುಷ್ಯರೊಳಗಿನ ಸಂಬಂಧದಲ್ಲಿ ಇರಬೇಕಾದ ಒಂದು ಕಟ್ಟುಪಾಡು. 'ಧರ್ಮ' ಅನ್ನೋದೂ ಅದೇ. ಮಾನವನ ಒಟ್ಟಂದದ ಏಳ್ಗೆ ಮತ್ತು ಮುನ್ನಡೆಗೆ ಅಗತ್ಯವಾದದ್ದು – ಪೋಷಕವಾದದ್ದು – ಮೌಲ್ಯ. ಇದು ಚಿರಂತನ. ಬೇಕಾದರೆ ಹೀಗೂ ವಿಶ್ಲೇಷಿಸಬಹುದು : ಮನುಷ್ಯ ತನ್ನ ಸುತ್ತಮುತ್ತಲಿನವರಿಗಾಗಿ ತನ್ನ ಸ್ವಾರ್ಥಕ್ಕೆ ಹಾಕಿಕೊಳ್ಳಬೇಕಾದ ಮತ್ತು ತನ್ನ ಮನಸ್ಸು, ಇಂದ್ರಿಯಗಳ ಪ್ರವೃತ್ತಿಗಳಿಗೆ ಹಾಕಬೇಕಾದ ಕಡಿವಾಣವೇ ಮೌಲ್ಯ.

'ಎಷ್ಟು ಸುಖಿ?' ಎಂಬ ಪ್ರಶ್ನೆಗೆ ಸಂಬಂಧಿಸಿದ ಉತ್ತರ ನಮ್ಮ 'ಸುಖ'ದ ಕಲ್ಪನೆಯನ್ನು ಹೊಂದಿಕೊಂಡಿದೆ. 'ಸುಖ' ಎಂಬುದು ವೈಯಕ್ತಿಕ ನೆಮ್ಮದಿ – ವೈಯಕ್ತಿಕವಾಗಿ ತನ್ನ ಅಹಂಕಾರ ಅಥವಾ ಪಿಪಾಸೆಗಳ ಪೂರೈಕೆ – ಅನ್ನುವುದಾದರೆ, ಮೌಲ್ಯಗಳನ್ನು ನಚ್ಚಿಕೊಂಡವ ಸದಾ ದುಃಖಿ! ಮೌಲ್ಯಗಳ ನೆಚ್ಚಿಕೆ ಎಂದರೆ ನಿತ್ಯ ತಾನೇ ತನ್ನೊಡನೆ ನಡೆಸುವ ಹೋರಾಟ. 'ಮೌಲ್ಯಗಳಿಗೆ ಜೋತು ಬಿದ್ದವನಿಗೆ ಸುಖವಿಲ್ಲ' ಅನ್ನೋದಕ್ಕೆ ಇನ್ನೊಂದು ಕಾರಣ: ಆ ಮನುಷ್ಯ ಕ್ಷಣಕ್ಷಣಕ್ಕೂ ಮಾಡಬೇಕಾದ ನಿರ್ಣಯಗಳ ಭಾರ. ಈ ನಿರ್ಣಯ

ಮಾಡುವುದು ಒಂದು ಒಳಿತು ಮತ್ತು ಒಂದು ಶುದ್ಧಾತ್ಮನಾ ಕೆಡುಕುಗಳ ನಡುವೆ ಆದರೆ ಚಿಂತಿಲ್ಲ. ವಾಸ್ತವದಲ್ಲಿ ಹಾಗಾಗುವ ಪ್ರಮೇಯ ವಿರಳ. ಎರಡು ಕೆಡುಕುಗಳಲ್ಲಿ ಒಂದನ್ನಾರಿಸಿಕೊಳ್ಳುವ ಪ್ರಸಂಗ ಬಂದಾಗ ಕೇವಲ ನಿಸ್ವಾರ್ಥಿಗೂ ಎದೆಗುದಿ ಸಹಜ.

● ಇಂದಿನ ಭ್ರಷ್ಟ ವ್ಯವಸ್ಥೆಯಲ್ಲಿ ಸರಳ, ಸಜ್ಜನಿಕೆ, ಪ್ರಾಮಾಣಿಕತೆಗಳಿಗೆ ಏನು ಬೆಲೆ?

**ಪಾವೆಂ:** ಬೆಲೆ ಮತ್ತು ಮೌಲ್ಯ ಎಂದರೆ ಒಂದೇ. ಸರಳ, ಸಜ್ಜನಿಕೆ, ಪ್ರಾಮಾಣಿಕತೆಗಳಿಗೆ ಬೆಲೆಯನ್ನು ನಮ್ಮ ಅಂತರಂಗದ ಸಮಾಧಾನದ ಅಳತೆಗೋಲಿನಲ್ಲಿ ಪ್ರಯೋಜನವನ್ನು ನಿಶ್ಚಯಿಸುವುದಾದರೆ – ಅದಕ್ಕೆ ಭ್ರಷ್ಟ ವ್ಯವಸ್ಥೆ ಏನನ್ನೂ ಮಾಡಲಾರದು. ಇತರರು ನಮ್ಮ ಚರ್ಯೆಗೆ ಕೊಡುವ ಮನ್ನಣೆ ಅಥವಾ ಬೆಂಬಲ ಎನ್ನುವ ದೃಷ್ಟಿಯಿಂದ ಬೆಲೆ ಕಟ್ಟುವುದಾದರೆ – ಭ್ರಷ್ಟ ವ್ಯವಸ್ಥೆಯಲ್ಲಿ ಬೆಲೆ ದೊರೆಯುವುದಿಲ್ಲ ಎನ್ನಬೇಕಾಗುತ್ತದೆ. ನೋಡಿ... ಭ್ರಷ್ಟ ವ್ಯವಸ್ಥೆ ಪ್ರಾಮಾಣಿಕ ಮನುಷ್ಯನ ತಂಟೆಗೆ ಹೋಗುವುದಿಲ್ಲ. ಅದು ಅವನನ್ನು ಹೊರತು ಪಡಿಸಿಯೇ ತನ್ನ ಕಾರ್ಯಗಳನ್ನು ಸಾಧಿಸಿಕೊಳ್ಳುವ ಪ್ರಯತ್ನ ನಡೆಸುತ್ತದೆ.

● ಆದರ್ಶ ಮತ್ತು ವಾಸ್ತವಗಳ ನಡುವಣ ಕಂದಕ ಯುವ ಜನತೆಯನ್ನು ಪಥಭ್ರಾಂತರನ್ನಾಗಿಸುತ್ತಿದೆ. ಪ್ರವಾಹದ ವಿರುದ್ಧ ದಿಕ್ಕಿನಲ್ಲಿ ಈಜಬೇಕೆ? ಅಥವಾ ತತ್ಕಾಲೀನ ಗೆಲುವಿನ ಒಳಹಾದಿ ಹಿಡಿಯಬೇಕೆ?

**ಪಾವೆಂ:** ಈ ಕಂದಕ ಯಾವಾಗಲೂ ಇದ್ದದ್ದೇ. ಅದು ನಮ್ಮದೇ ಸೃಷ್ಟಿ ಅಲ್ಲದಿದ್ದರೂ ಅದರ ಅಗಲ ಮತ್ತು ಆಳ ನಾವದಕ್ಕೆ ಕೊಡುವ ಅವಕಾಶವನ್ನು ಅವಲಂಬಿಸಿದೆ. ಪ್ರವಾಹದ ವಿರುದ್ಧ ಈಜಲು ಸಿದ್ಧವಿರುವುದು ಯುವಕರ ಯೌವನದ ಮುಖ್ಯ ಲಕ್ಷಣ. 'ಅದೆಲ್ಲಾ ಉಪಯೋಗವಿಲ್ಲ' ಎಂದು ಗೋಗರೆಯುವುದು ಮುಪ್ಪಿನ, ಕೈ ಸೋತವರ ಲಕ್ಷಣ. ಅಂಥ ಮುದುಕರಿಂದ ಯಾವ ಬದಲಾವಣೆಯೂ ಸಾಧ್ಯವಾಗುವುದಿಲ್ಲ. ಅವರು ಬೇಕಿದ್ದರೆ – ನೀವಂದಂತೆ – ಗೆಲುವಿನ ಒಳಹಾದಿ ಹಿಡಿಯಬಹುದು. ಆದರೆ 'ಪ್ರವಾಹ ಪತಿತ'ರು ಎಂದೂ ಇತಿಹಾಸದಲ್ಲಿ ತಮ್ಮ ಮುದ್ರೆ ಬಿಟ್ಟು ಹೋಗಿಲ್ಲ.

● 'ಸೃಜನಶೀಲ ಸಾಹಿತ್ಯ' ಎಂಬುದನ್ನು ನೀವು ಹೇಗೆ ಅರ್ಥೈಸುತ್ತೀರಿ? ಕನ್ನಡದಲ್ಲಿ ಅಂತಹ ಸಾಹಿತ್ಯದ ಸೃಷ್ಟಿ ಈಗ ಸಾಕಷ್ಟು ನಡೆಯುತ್ತಿದೆಯೇ?

**ಪಾವೆಂ:** ಪ್ರತಿಭೆ ಇರೋ ಮನುಷ್ಯ ಭಾಷೆಯನ್ನು ತನ್ನ ಮಾಧ್ಯಮವನ್ನಾಗಿಸಿಕೊಂಡು ಸೃಷ್ಟಿಯಾಗುವುದೇ ಸೃಜನಶೀಲ ಸಾಹಿತ್ಯ. 'ಪ್ರತಿಭೆ' ಎಂಬುದು ಪದಾರ್ಥಗಳ ಒಂದು ರಾಶಿಯಲ್ಲಿ ಸಾಮಾನ್ಯರಿಗೆ ಕಾಣಿಸದಂತಹ ಏಕಸೂತ್ರತೆಯನ್ನು ಕಾಣುವ ಶಕ್ತಿ. 'ರವಿ ಕಾಣದುದನು ಕವಿ ಕಂಡ' ಅನ್ನುತ್ತಾರಲ್ಲ...ಹಾಗೆ. ಆ ಶಕ್ತಿಯಿಂದ ಒಬ್ಬ ಸಾಹಿತಿ ಹೊಸತನ್ನು ಸೃಷ್ಟಿಸುತ್ತಾನೆ. ಸಮುದಾಯದ ಒಲವನ್ನು ಗಳಿಸುತ್ತಾನೆ. ಕನ್ನಡದಲ್ಲಿ ಸೃಜನಶೀಲ ಸಾಹಿತ್ಯದ ಸೃಷ್ಟಿ ನಡೆಯುತ್ತಿದೆ. ಆದರೆ – ಎಲ್ಲ ಕಾಲಗಳಲ್ಲೂ ಇದ್ದಂತೆ – ಅದರ ಮಟ್ಟದಲ್ಲಿ ಏರುಪೇರುಗಳು ಇವೆ.

● ಸಾಹಿತ್ಯದಲ್ಲಿ ಬದ್ಧತೆ ಇರಬೇಕೆ?

**ಪಾವೆಂ:** ಆ 'ಬದ್ಧತೆ' ಸತ್ಯಕ್ಕೆ ಮತ್ತು ಮೌಲ್ಯಕ್ಕೆ ಆಗಿದ್ದರೆ ಅದು ಅತಿ ಅಗತ್ಯ. ಆದರೆ ಒಂದು ಸಿದ್ಧ ಸಿದ್ಧಾಂತಕ್ಕೆ ಅಥವಾ ಅಭಿಪ್ರಾಯಕ್ಕೆ ಕಟ್ಟುಬಿದ್ದು ಮಿಕ್ಕುಳಿದ ಮೌಲ್ಯಗಳನ್ನು ನಿರ್ಲಕ್ಷಿಸುವ ಬದ್ಧತೆ ತನ್ನನ್ನು ತಾನೇ ಸೋಲಿಸಿಕೊಳ್ಳುತ್ತದೆ. ಪ್ರಾಮಾಣಿಕವಲ್ಲದ ಅಭಿವ್ಯಕ್ತಿ ಅಪಥ್ಯ.

● ಕನ್ನಡದ ಪ್ರಬುದ್ಧ ಮಾಸಿಕವೊಂದರ ಮುಂಚೂಣಿಯಲ್ಲಿದ್ದು ನಾಡಿನ ಸಾಹಿತ್ಯಾಸಕ್ತರ ಒಲವನ್ನು ಗಳಿಸಿದವರು ನೀವು. ಪತ್ರಕರ್ತನಾಗಿ ನೀವು ಕಂಡುಕೊಂಡ 'ಸತ್ಯ' ಯಾವುದು?

**ಪಾವೆಂ:** ಪತ್ರಕರ್ತನಿಗೆ ಬೇರೆಯೇ ಆದ ಒಂದು 'ಸತ್ಯ' ಎಂದೇನೂ ಇಲ್ಲ. ನಾನು ನನ್ನ ಜವಾಬ್ದಾರಿಯನ್ನು ನನ್ನ ಮನಸ್ಸಿಗೆ ಸರಿಕಂಡ ಮೌಲ್ಯಗಳಿಗೆ ಅನುಸಾರವಾಗಿ ಪೂರೈಸಲು ಯತ್ನಿಸಿದೆ. ಗುರುತಿಸಿದವರಿಂದ – ಅರ್ಥೈಸಿಕೊಂಡವರಿಂದ – ಅದಕ್ಕೆ ಮನ್ನಣೆಯೂ ದೊರೆತಿದೆ.

> **ಅತಿ ಸವ್ಯಸಾಚಿ**
>
> ಪಾವೆಂ ಹಲವು ವಿಷಯಗಳ ಮೇಲೆ ಸಮಗ್ರ ರೀತಿಯಲ್ಲಿ, ಅಧಿಕಾರಯುಕ್ತರಾಗಿ ಬರೆಯಬಲ್ಲವರು. ಅದಕ್ಕಾಗಿ ಅವರು ಅನೇಕ ಗುಪ್ತನಾಮಗಳಲ್ಲಿ (ಲಾಂಗೂಲಾಚಾರ್ಯ, ಮುರಲೀಧರ, ರಾಧಾಕೃಷ್ಣ ರಾವ್ ಇತ್ಯಾದಿ) ಬರೆದರು. ಲೇಖಕರ ಬೆಂಬತ್ತುವುದರಲ್ಲಿ ಅವರು ಬೇತಾಳರೇ ಸರಿ. ಲೇಖಕರು ಯಾವ ಯಾವ ಪುಸ್ತಕ ಓದಬೇಕು, ಅದು ಎಲ್ಲಿ ಸಿಗುತ್ತದೆ ಎಂಬ ಮಾಹಿತಿಯನ್ನೂ ಅವರೇ ಒದಗಿಸುತ್ತಿದ್ದರು. ಲೇಖನಕ್ಕೆ ಪೂರ್ಣ ಆಕಾರ ಕೊಡಲು ಶ್ರಮಿಸುತ್ತಿದ್ದರು. ಇಂಥ ಬಹುಮುಖಿ ಪ್ರತಿಭೆಯ ಸಂಪಾದಕರು ಬಲು ಅಪರೂಪ.

● ಸಂಪಾದಕನಾದವನು ಓದುಗನ ಮನೋಮಟ್ಟವನ್ನು ಎತ್ತರಿಸಿ, ಚಿಂತನ ಧಾಟಿಯನ್ನು ಬದಲಿಸಬೇಕೆ? ಅಥವಾ 'ಗಿಮಿಕ್ಸ್'ಗಳ ಮೊರೆಹೊಕ್ಕು ಪ್ರಸಾರವನ್ನು ಹೆಚ್ಚಿಸಿಕೊಳ್ಳಬೇಕೆ?

**ಪಾವೆಂ:** ಓದುಗರ ಮನೋಮಟ್ಟವನ್ನು ಎತ್ತರಿಸುವ ದಿಸೆಯಲ್ಲಿ ಸಂಪಾದಕನಾದವನು ಪ್ರಯತ್ನಿಸಬೇಕು. ಚಿಂತನದ ಧಾಟಿಯನ್ನು – ಅದು ಎಷ್ಟರಮಟ್ಟಿಗೆ ಹಾದಿ ತಪ್ಪಿದೆ ಅನ್ನಿಸುತ್ತದೋ ಅಷ್ಟರಮಟ್ಟಿಗೆ – ಬದಲಿಸಲು ಯತ್ನಿಸಬೇಕು. 'ಗಿಮಿಕ್ಸ್' ಬೇಡವೆನ್ನಲಾದೀತೆ? ಪ್ರಸಾರ ಸಂಖ್ಯೆಯ ಹೆಚ್ಚಳಕ್ಕೆ ಮಸಾಲಾ ಸೂತ್ರಗಳ ಅನುಸರಣೆ ಕೆಲವೊಮ್ಮೆ ಅನಿವಾರ್ಯ. ಮಾಡುವ ಊಟದಲ್ಲಿ ಶೇಕಡಾ ನೂರು ಪೋಷಕಾಂಶಗಳೇ ಇರಲು ಸಾಧ್ಯವಿಲ್ಲ. ಕೆಲಮಟ್ಟಿಗೆ ಕಸ ಇರಲೇಬೇಕಾಗುತ್ತದೆ. ವಿಸರ್ಜನೆಗೂ ಅದು ಸಹಕಾರಿ. ಕಸ ವಿಷವಾಗದಂತೆ ನೋಡಿಕೊಳ್ಳಬೇಕು – ಅಷ್ಟೆ!

● 'ಪತ್ರಿಕಾ ಸ್ವಾತಂತ್ರ್ಯ' ಎಂದರೆ ಪತ್ರಿಕೆಯ ಮಾಲಕನ ಸ್ವಾತಂತ್ರ್ಯವೆ ಅಥವಾ ಸಂಪಾದಕನ ಲೇಖನಿಯ ಸ್ವಾತಂತ್ರ್ಯವೆ? ಈ ದೇಶದಲ್ಲಿ ಪತ್ರಕರ್ತ ಎಷ್ಟು ಸ್ವತಂತ್ರ?

**ಪಾವೆಂ:** ಮೌಲ್ಯದ ಅನುಸಾರವಾಗಿ ಹೋಗುವುದಾದರೆ ಮಾಲಕನ ಸ್ವಾತಂತ್ರ್ಯ ಮತ್ತು ಸಂಪಾದಕನ ಸ್ವಾತಂತ್ರ್ಯ ಬೇರೆ ಬೇರೆಯಾಗಿರಲು ಸಾಧ್ಯವಿಲ್ಲ. ಇದು ಒಂದೇ ನಾಣ್ಯದ ಎರಡು ಮುಖ. ಇದು ಆದರ್ಶದ ಮಾತಾಯಿತು. ವಾಸ್ತವದಲ್ಲಿ ಯಾವ ದೇಶದಲ್ಲೂ – ಯಾವನೇ ಮಾಲಕ ಅಥವಾ ಪತ್ರಕರ್ತ – ಈ ಆದರ್ಶ ಸ್ವಾತಂತ್ರ್ಯವನ್ನು ಅನುಭವಿಸಿಲ್ಲ. ಈ ವಿಷಮ ವ್ಯವಸ್ಥೆಯನ್ನು ಆಡುಂಬೊಲವನ್ನಾಗಿಸಿಕೊಂಡಿರುವ ಶಕ್ತಿಗಳೂ ಕುಚೇಷ್ಟೆಗಾಗಿ ಈ ಪ್ರಶ್ನೆಯನ್ನು ಕೇಳುವುದುಂಟು. ಅದರ ಸೂಕ್ಷ್ಮ ಇಷ್ಟೆ: ಸ್ವಾತಂತ್ರ್ಯ ಮಾಲಕನಿಗೂ ಬೇಡ; ಸಂಪಾದಕನಿಗೂ ಬೇಡ; ನಮ್ಮ ಪಕ್ಷಕ್ಕೋ – ಸರಕಾರಕ್ಕೋ – ನಿಮ್ಮ ಮೂಗುದಾರವನ್ನು ಹಿಡಿದೆಳೆಯುವ ಅಧಿಕಾರ ಸಿಕ್ಕರೆ ಸಾಕು, ಇದು ಮಾತ್ರ ಅಪಾಯಕಾರಿ ಪ್ರವೃತ್ತಿ.

ನನಗನ್ನಿಸುತ್ತೆ: ಯಾರಿಗೂ ಸ್ವಾತಂತ್ರ್ಯ ಇಲ್ಲದಿರುವುದಕ್ಕಿಂತ ಮಾಲಕನಿಗಾದರೂ ಅದು ಇರುವುದು ಒಳಿತು. ಎರಡು ಕೆಡುಕುಗಳ ನಡುವೆ ಒಂದನ್ನಾರಿಸಬೇಕಾಗಿ ಬಂದಾಗ ಕಡಿಮೆ ಅಪಾಯಕಾರಿಯಾದ ಕೆಡುಕನ್ನು ಆರಿಸುವುದೇ ಲೇಸು...ಏನಂತೀರಿ?

● ಪತ್ರಿಕಾ ಮಾಧ್ಯಮಕ್ಕೆ 'ನೀತಿ ಸಂಹಿತೆ' ಎಂಬ ಅಂಕುಶ ಎಷ್ಟು ಅಗತ್ಯ?

**ಪಾವೆಂ:** ನಿಜ...ನೀತಿ ಸಂಹಿತೆ ಬೇಕು. ಆದರೆ, ಅದರ ರೂಪುರೇಖೆಗಳನ್ನು ಆ ವೃತ್ತಿಯಲ್ಲಿರುವ ಪರಿಣತರೇ ನಿರ್ಧರಿಸಬೇಕು. ಮಾಧ್ಯಮದ ಬಗೆಗೆ ನಿಕೃಷ್ಟ ಭಾವನೆ ತಳೆದಿರುವವರು ಹಾಗೂ ದುರಾಗ್ರಹವುಳ್ಳವರು 'ನೀತಿ ಸಂಹಿತೆ'ಯನ್ನು ರೂಪಿಸುವ ನೈತಿಕ ಹಕ್ಕನ್ನು ಕಳೆದುಕೊಳ್ಳುತ್ತಾರೆ. ಪತ್ರಿಕಾ ಜಗತ್ತಿನಲ್ಲಿರುವ ಅನುಭವಿಗಳು – ಸವ್ಯಸಾಚಿಗಳು – ರೂಪಿಸುವ 'ನೀತಿ ಸಂಹಿತೆ' ಅಂಕುಶವೊ-ಬಂಧನವೊ – ಆಗುವ ಸಂಭವ ಇಲ್ಲ.

● ಬೃಹತ್ ಹೋರಾಟವೊಂದು ಘಟಿಸಿದ ನಂತರವೂ ಕರ್ನಾಟಕದಲ್ಲಿ ಕನ್ನಡ ಭಾಷೆಯ ಸ್ಥಿತಿ-ಗತಿ ಸುಧಾರಿಸಿಲ್ಲ. ಇದಕ್ಕೆ ಕಾರಣ ಏನು? ಪರಿಹಾರ ಏನು?

**ಪಾವೆಂ:** ಭಾಷೆಯ ಸ್ಥಿತಿಗತಿ ಸುಧಾರಿಸದಿರಲು ಕಾರಣ: ಕನ್ನಡಿಗರಲ್ಲಿ ಭಾಷಾಭಿಮಾನ ಎನ್ನುವ ಅಮೂರ್ತ ಭಾವನೆಯ ಕೊರತೆ ಮಾತ್ರವಲ್ಲ; ಸಾಹಸ ಪ್ರವೃತ್ತಿ ಹಾಗೂ ವಿಸ್ತರಣ ಪ್ರವೃತ್ತಿಗಳ ಅಭಾವವೂ ಹೌದು. ಕನ್ನಡಿಗರ ಪುನರುಜ್ಜೀವನದ ಇತಿಹಾಸವನ್ನು ಗಮನಿಸುವಾಗ ಅದು ಯಾವಾಗಲೂ ಇನ್ನೊಂದು ಭಾಷೆಯ ಅಥವಾ ಭಾಷಿಕರ ದಬ್ಬಾಳಿಕೆಗೆ ಪ್ರತಿಕ್ರಿಯೆಯಾಗಿ ಬಂದದ್ದು ಸ್ಪಷ್ಟವಾಗುತ್ತದೆ. ಅದು ಒಂದು ಬಗೆಯ 'ನೆಗೆಟಿವ್' ಅಭಿಮಾನ. ಕನ್ನಡಿಗರ ಗತ ವೈಭವದ 'ಗತ' ಆಗಿರುವುದು ಇದಕ್ಕೆ ಕಾರಣವಾಗಿರಬಹುದು.

ಸಂಸ್ಕೃತದ ಸ್ಥಾನಮಾನವನ್ನು ನಿರ್ಣಯಿಸಲೋಸುಗ ನೇಮಿಸಲ್ಪಟ್ಟ ಸಮಿತಿಗೆ – ಕನ್ನಡದ ಸ್ಥಾನಮಾನದ ಬಗ್ಗೆ ಕಳಕಳಿ ಇರುವ ಒಂದು ಗುಂಪಿನಿಂದಲೂ, ಸಂಸ್ಕೃತದ ಬಗ್ಗೆ ವಿರೋಧ ಇರುವ ಇನ್ನೊಂದು ಗುಂಪಿನಿಂದಲೂ, ಬಂದ ವಿರೋಧದ ಪರಿಣಾಮವಾಗಿ 'ಗೋಕಾಕ್ ವರದಿ' ಹುಟ್ಟಿತು. ಅದು 'ಕೆಸರಿನಲ್ಲಿ ಹುಟ್ಟಿದ ಕಮಲ'ವಾದರೂ ನಿರ್ಣಯ ಸಮರ್ಪಕವಾದದ್ದೇ. ಕರ್ನಾಟಕದಲ್ಲಿ – ಬೇರಾವ ರಾಜ್ಯದಲ್ಲಿ ಇಲ್ಲದಿದ್ದಷ್ಟು – ತಮ್ಮ ಪ್ರತ್ಯೇಕತೆಯ ಬಗ್ಗೆ ಪ್ರಜ್ಞೆ ಉಳ್ಳಂತಹ ಅಲ್ಪ ಸಂಖ್ಯಾಕ ಭಾಷಿಕರಿದ್ದಾರೆ. 'ಇಷ್ಟು ದಿನ ನಿಮ್ಮ ಎದೆಯ ಮೇಲೆ ನಾವು ನಡೆದಿದ್ದೇವೆ. ಈಗ್ಯಾಕೆ ನಿಮ್ಮ ಗಲಾಟೆ?' – ಎನ್ನುತ್ತಾರೆ ಆ ಭಾಷೆಗಳ ಜನ. 'ಇಂಗ್ಲಿಷ್ ಲಾಬಿ'ಗಳದ್ದು ಮತ್ತೊಂದು ತಲೆಬಿಸಿ. ಇಂಗ್ಲಿಷ್ ಮಾಧ್ಯಮ ಶಾಲೆಗಳಿಗೆ ಮಕ್ಕಳನ್ನು ಸೇರಿಸಿ 'ಧನ್ಯ'ರಾದೆವೆಂದು ಬೀಗುವ ಮಧ್ಯಮವರ್ಗದ ಮೂರ್ಖರು ಇನ್ನೊಂದೆಡೆ.

ಇದಕ್ಕೆಲ್ಲ ಇರುವ ಏಕೈಕ ಪರಿಹಾರ: ಕನ್ನಡಿಗರು ಒಂದು ಸಮಷ್ಟಿಯಲ್ಲಿ ತಮ್ಮ ಏಳಿಗೆಗೆ ಕ್ಷಾತ್ರಪೂರ್ವಕವಾದ ಪ್ರಯತ್ನಗಳಲ್ಲಿ ತೊಡಗುವುದು. ಕನ್ನಡಿಗರ ಸಾರ್ವತ್ರಿಕ ಉದ್ಧಾರವಾದಾಗ ಮಾತ್ರ ಅವರ ಭಾಷೆಯ ಉದ್ಧಾರ ಸಾಧ್ಯ. ●

# ಅಚ್ಚು ಮೊಳೆಗಾರರಾಗಿ ಬಂದು ಅವರು ಪತ್ರಿಕಾರಂಗದಲ್ಲಿ ಅಚ್ಚೊತ್ತಿದ್ದರು!


## ಸುದ್ದಿಮನೆ ಕತೆ

ಸುದ್ದೀಶ

vbhat@vijaykarnataka.com


ಅವರು ಸುದ್ದಿಮನೆಯೊಳಗೆ ನಡೆದು ಬಂದಿದ್ದು ಮುದ್ರಣ ವಿಭಾಗದ ಮೇಲ್ವಿಚಾರಕರಾಗಿ ಅಚ್ಚುಮೊಳೆ ಜೋಡಿಸುವ ವಿಭಾಗದಲ್ಲಿ ಒಂದು ಪಾಳಿಯ ಮುಖ್ಯಸ್ಥರಾಗಿ, ಅನಂತರ ಅವರು ಪತ್ರಿಕೆಯ ಸಂಪಾದಕರಾಗುವ ತನಕ ಬೆಳೆದರು. ಈ ನಾಡು ಹೆಮ್ಮೆ ಪಡುವಂಥ, ಅಭಿಮಾನದಿಂದ ಬೀಗುವಂಥ ಪತ್ರಕರ್ತರಾದರು. ಪತ್ರಿಕೋದ್ಯಮದಲ್ಲಿ ಅತ್ಯುತ್ತಮ ಹಾಗೂ ವಿಶಿಷ್ಟ ಸೇವೆಗೆ ನೀಡಲಾಗುವ ಬಿ.ಡಿ. ಗೋಯಂಕಾ ಪ್ರಶಸ್ತಿಗೂ ಭಾಜನರಾದರು. ಇಂದಿಗೂ ಯಾವುದೇ ಪತ್ರಿಕೆಯ ಸುದ್ದಿಮನೆಯಲ್ಲಿ ಅವರ ನೆನಪು ಅಚ್ಚಳಿಯದೇ ದಾಖಲಾಗಿರುತ್ತದೆ.

ಪಾಡಿಗಾರು ವೆಂಕಟರಮಣ ಆಚಾರ್ಯ ಅರ್ಥಾತ್ ಪಾ. ವೆಂ. ಆಚಾರ್ಯ ಎಂದೇ ಅವರು ಪರಿಚಿತ. ಇನ್ನೂ ಚುಟುಕಾಗಿ ಪಾವೆಂ ಅಂದರೂ ಆದೀತು. ಕನ್ನಡ ಪತ್ರಿಕೋದ್ಯಮದ ಧೀಮಂತರಲ್ಲಿ ಅಗ್ರಪಂಕ್ತಿಯಲ್ಲಿ ನಿಲ್ಲುವ ಇವರು, ಪತ್ರಿಕೋದ್ಯಮವನ್ನು ಶಾಸ್ತ್ರೀಯವಾಗಿ ಓದಿದವರಲ್ಲ. ಪತ್ರಿಕೋದ್ಯಮವೇನೂ ವಿದ್ಯಾಭ್ಯಾಸವನ್ನೂ ಸರಿಯಾಗಿ ಮುಗಿಸಿದವರಲ್ಲ. ಕೈಗೆ ಸಿಕ್ಕ ಪುಸ್ತಕಗಳನ್ನು ಓದಿ, ಓದಿನ ಗೀಳನ್ನು ಅಂಟಿಸಿಕೊಂಡು, ಆ ಮೂಲಕವೇ ಜ್ಞಾನಾರ್ಜನೆ ಮಾಡಿಕೊಂಡು ಅಕ್ಷರಲೋಕವಾದ ಪತ್ರಿಕೋದ್ಯಮಕ್ಕೆ ಬಂದವರು. ಈ ಕ್ಷೇತ್ರಕ್ಕೆ ಬರಲು ಅವರಿಗಿದ್ದ ಅರ್ಹತೆ ಅದೊಂದೇ. ಆಸಕ್ತಿ, ಪರಿಶ್ರಮ, ಶಿಸ್ತು, ಶ್ರದ್ಧೆಯಿದ್ದರೆ ಎಂಥ ಎತ್ತರ ಏರಬಹುದೆಂಬುದಕ್ಕೆ ಪಾವೆಂ ಒಂದು ಉತ್ತಮ ನಿದರ್ಶನ. ಕನ್ನಡದ ಏಕೈಕ ಡೈಜೆಸ್ಟ್ ಎಂದೇ ಕರೆಯಿಸಿಕೊಳ್ಳುವ 'ಕಸ್ತೂರಿ' ಮಾಸಪತ್ರಿಕೆಯನ್ನು ಪಾವೆಂ ಕಟ್ಟಿ ಬೆಳೆಸಿದ ರೀತಿ ಅನನ್ಯ. 'ಕಸ್ತೂರಿ' ಕನ್ನಡಿಗರ ಮನೆಮಾತಾಗುವಂಥ ಪತ್ರಿಕೆಯಾಗುವಂತೆ ರೂಪಿಸುವಲ್ಲಿ ಪಾವೆಂ ಶ್ರಮ ನಿಜಕ್ಕೂ ಅದ್ಭುತ.

ಪಾವೆಂ ಉಡುಪಿಯ ಸಮೀಪದ ಪಾಡಿಗಾರಿನಲ್ಲಿ ಹುಟ್ಟಿದ್ದು(1915). ಮನೆಯಲ್ಲಿ ವಿದ್ವತ್ತು, ಪಾಂಡಿತ್ಯದ ಪರಂಪರೆ. ಆದರೆ ಕಿತ್ತು ತಿನ್ನುವ ಬಡತನ. ಓದಿನಲ್ಲಿ ಆಸಕ್ತಿಯಿದ್ದರೂ ಬಡತನದಿಂದ ಜರ್ಜರಿತವಾಗಿದ್ದ ಕುಟುಂಬದಿಂದ ಏನನ್ನೂ ನಿರೀಕ್ಷಿಸುವ ಹಾಗಿರಲಿಲ್ಲ. ಪಾವೆಂ ಮೊದಲಿನಿಂದಲೂ ಓದಿನಲ್ಲಿ ಮುಂದು. ಎಸ್‌ಎಸ್‌ಎಲ್‌ಸಿಯಲ್ಲಿ ಶಾಲೆಗೇ ಮೊದಲ ಸ್ಥಾನ ಪಡೆದಿದ್ದರು. ಆದರೆ ಕಾಲೇಜು ಮೆಟ್ಟಿಲು ಏರಲಾಗಲಿಲ್ಲ. ಆ ದಿನಗಳಲ್ಲಿ ಅವರ ವಿದ್ಯಾಭ್ಯಾಸಕ್ಕೆ ಸಹಾಯ ಮಾಡಲು ಯಾರೂ ಮುಂದೆ ಬರಲಿಲ್ಲ. ತಂದೆಯಿಂದ ಈ ವಿಷಯದಲ್ಲಿ ಏನನ್ನೂ ನಿರೀಕ್ಷಿಸುವಂತಿರಲಿಲ್ಲ. ಕೆಲವು ಸಂಬಂಧಿಕರನ್ನು ಭೇಟಿ ಮಾಡಿ ಮುಂದಿನ ಓದಿಗೆ ಸಹಾಯ ಮಾಡುವಂತೆ ಪಾವೆಂ ವಿನಂತಿಸಿಕೊಂಡರು. ಆದರೆ ಯಾರಿಂದಲೂ ನಿರೀಕ್ಷಿತ ಪ್ರತಿಕ್ರಿಯೆ ಬರಲಿಲ್ಲ.

ಹೀಗಾಗಿ ಪಾವೆಂ ವಿದ್ಯಾಭ್ಯಾಸ ನಿಲ್ಲಿಸುವುದು ಅನಿವಾರ್ಯವಾಯಿತು. ಆದರೆ ಅವರು ಓದನ್ನು ನಿಲ್ಲಿಸಲಿಲ್ಲ. ಮನೆಯಲ್ಲಿ ಒಬ್ಬರೇ ಕುಳಿತು ಕೈಗೆ ಸಿಕ್ಕ ಪುಸ್ತಕಗಳನ್ನು ಓದಲಾರಂಭಿಸಿದರು. ಓದನ್ನೇ ದೈನಂದಿನ ಕಾಯಕವಾಗಿಸಿಕೊಂಡರು. ಓದಿದ್ದೆಲ್ಲವನ್ನೂ ಟಿಪ್ಪಣಿ ರೂಪದಲ್ಲಿ ಬರೆದಿಟ್ಟುಕೊಳ್ಳುತ್ತಿದ್ದರು. (ಈ ಟಿಪ್ಪಣಿಗಳನ್ನು ಪಾವೆಂ ಕೊನೆತನಕವೂ ಇಟ್ಟುಕೊಂಡಿದ್ದರು.) ಈ ಓದಿಗೆ ಶಿಸ್ತನ್ನು ಅಳವಡಿಸಿಕೊಂಡ ಪಾವೆಂ, ಕೆಲವು ಆಸಕ್ತ ವಿಷಯಗಳ ಮೇಲೆ ಹೆಚ್ಚಿನ ಅಧ್ಯಯನ ಕೈಗೊಂಡರು. ಆ ಪೈಕಿ ಭಾಷಾ ಅಧ್ಯಯನವೂ ಒಂದು. ರವೀಂದ್ರನಾಥ ಟಾಗೋರರ 'ಗೀತಾಂಜಲಿ' ಯನ್ನು ಓದಬೇಕೆಂದು ಪಾವೆಂ ಬಂಗಾಳಿ ಭಾಷೆ ಕಲಿತರು. ಅದನ್ನು ಕನ್ನಡಕ್ಕೆ ಅನುವಾದಿಸಬೇಕೆಂಬ ಯೋಚನೆ ಸುಳಿದಿದ್ದೂ ಆಗಲೇ.

ಆದರೆ ಈ ಓದಿನಿಂದಲೇ ಹೊಟ್ಟೆ ತುಂಬುತ್ತಿರಲಿಲ್ಲ. ಕೆಲಸವಿಲ್ಲದೇ ದಿನ ದೂಡುವುದು ಕಷ್ಟವಾಗಿತ್ತು. ವಿದ್ಯಾಭ್ಯಾಸವಿಲ್ಲದ್ದರಿಂದ ದೊಡ್ಡ ಕೆಲಸವನ್ನು ನಿರೀಕ್ಷಿಸುವಂತಿರಲಿಲ್ಲ. ಉಡುಪಿಯಲ್ಲಿ ಕನ್ನಡ ಪ್ರಾಥಮಿಕ ಶಾಲೆಯಲ್ಲಿ ಮಾಸ್ತರರಾಗಿ ಕೆಲಸಕ್ಕೆ ಸೇರಿದರು. ತಿಂಗಳಿಗೆ ಆರೇಳು ರೂಪಾಯಿ ಸಿಗುತ್ತಿತ್ತು. ಆ ಹಣದಿಂದಲೇ ಜೀವನೋಪಾಯ ಕಂಡುಕೊಳ್ಳಬೇಕಾಗುತ್ತಿತ್ತು. ಶಾಲೆಯಲ್ಲಿ ಮಾಸ್ತರಿಕೆ ಮುಗಿಸಿದ ಬಳಿಕ ಬಿಡುವಿನ ವೇಳೆಯಲ್ಲಿ ಅಂಗಡಿಯಲ್ಲಿ ಲೆಕ್ಕ ಬರೆಯುವ ಕೆಲಸಕ್ಕೆ ಸೇರಿಕೊಂಡಿದ್ದರು. ಪ್ರತಿದಿನ ಎರಡು ಗಂಟೆ ಲೆಕ್ಕ ಬರೆದರೆ ಕೈ ಖರ್ಚಿಗೆ, ಪುಸ್ತಕ ಖರೀದಿಗೆ ಸಾಕಾಗುವಷ್ಟು ಹಣ ಸಿಗುತ್ತಿತ್ತು. ಜತೆಗೆ ಸ್ಥಳೀಯ ಪ್ರಿಂಟಿಂಗ್ ಪ್ರೆಸ್‌ನಲ್ಲಿ ಅಚ್ಚು ಮೊಳೆ ಜೋಡಿಸುವ ಕೆಲಸವನ್ನು ಸಹ ಕಲಿತರು. ಈ ಎಲ್ಲ ಕೆಲಸ- ಕಾರ್ಯಗಳ ಮಧ್ಯೆ ಪಾವೆಂ ಕಳೆದು ಹೋಗಲಿಲ್ಲ. ಓದನ್ನು ಬಿಡಲಿಲ್ಲ. ಅದರ ಮಧ್ಯದಲ್ಲಿಯೇ ಬರವಣಿಗೆಯನ್ನೂ ಆರಂಭಿಸಿದರು.



ಆ ಸಂದರ್ಭದಲ್ಲಿ 'ಅಂತರಂಗ' ಎಂಬ ಪತ್ರಿಕೆ ಸಾಕಷ್ಟು ಜನಪ್ರಿಯವಾಗಿತ್ತು. ಮಾಸ್ತರಿಕೆ ಮುಗಿಸಿ ಅವರು ಪತ್ರಿಕೆಯಲ್ಲಿ ನಾಲ್ಕೈದು ಗಂಟೆಗಳ ಕಾಲ ಕೆಲಸ ಮಾಡುತ್ತಿದ್ದರು. ಆರಂಭದಲ್ಲಿ ಬರವಣಿಗೆಗಿಂತ ಹೆಚ್ಚಾಗಿ ಅಚ್ಚು ಮೊಳೆ ಜೋಡಿಸುವ ಕೆಲಸದಲ್ಲೇ ನಿರತರಾಗಿರುತ್ತಿದ್ದರು. ಪಾವೆಂ ಅವರೇ ಹೇಳಿದಂತೆ, ''ಅಚ್ಚುಮೊಳೆ ಜೋಡಿಸುವ ಕೆಲಸವನ್ನು ನಾನು ಬಹಳ ಪ್ರೀತಿಸುತ್ತಿದ್ದೆ. ಹಾಗೆ ನೋಡಿದರೆ ಅದನ್ನು ನಾನು ಕೆಲಸವೆಂದು ಭಾವಿಸಿರಲಿಲ್ಲ. ಅದೂ ನನಗೆ ಅಧ್ಯಯನಕ್ಕೆ ಪೂರಕ ಕೆಲಸವೇ ಆಗಿತ್ತು. ಅಚ್ಚು ಮಾಡುತ್ತಲೇ ಕನ್ನಡದ ಅನೇಕ ಸಾಹಿತಿಗಳ, ಲೇಖಕರ ಬರಹಗಳನ್ನು ಓದುವ ಅವಕಾಶ ಸಿಗುತ್ತಿತ್ತು. ಇದು ನನ್ನ ಜ್ಞಾನಾರ್ಜನೆಗೆ ನೆರವಾಯಿತು''.

1942ರಲ್ಲಿ ಪಾವೆಂ ಹುಬ್ಬಳ್ಳಿಗೆ ಬಂದರು. ಆ ಸಮಯದಲ್ಲಿ 'ಸಂಯುಕ್ತ ಕರ್ನಾಟಕ' ಜನಪ್ರಿಯವಾಗಿತ್ತು. ಸ್ವಾತಂತ್ರ್ಯ ಹೋರಾಟದಲ್ಲಿ ತೊಡಗಿಸಿಕೊಂಡಿತ್ತು. ಕಪ್ಪನೆಯ, ಕೃಶ ದೇಹದ ಪಾವೆಂ, ಸಂಯುಕ್ತ ಕರ್ನಾಟಕದ ಸುದ್ದಿಮನೆಯೊಳಗೆ ಕೆಲಸ ಅರಸಿಕೊಂಡು ಬಂದಾಗ, ಅವರು ಆ ಪತ್ರಿಕಾ ಸಂಸ್ಥೆಯಲ್ಲಿ ಉನ್ನತ ಸ್ಥಾನಕ್ಕೇರಬಹುದೆಂದು ಯಾರೂ ನಿರೀಕ್ಷಿಸಿರಲಿಲ್ಲ. ಹಾಗಂತ ಸಿಕ್ಕಿದ್ದು ಪತ್ರಕರ್ತನ ಕೆಲಸವೇನೂ ಅಲ್ಲ. ಅಚ್ಚುಮೊಳೆ ಜೋಡಿಸುವ ಕೆಲಸ. ಲೇಖನವನ್ನು ಓದುವಷ್ಟೇ ಸುಲಲಿತವಾಗಿ ಶೀಘ್ರವಾಗಿ ಅವರು ಮೊಳೆ ಜೋಡಿಸುತ್ತಿದ್ದರು. ಇದನ್ನು ಕಂಡು ಅವರಿಗೆ ಆ ವಿಭಾಗದ ಮೇಲ್ವಿಚಾರಕನನ್ನಾಗಿ (ಫೋರ್‌ಮನ್) ಬಡ್ತಿ ನೀಡಲಾಯಿತು.

ಬಿಡುವಿನ ವೇಳೆಯಲ್ಲಿ ಪಾವೆಂ ಬರೆಯುತ್ತಿದ್ದರು. ದಿನಪತ್ರಿಕೆಗಳಿಗಿಂತ ಅವರ ಒಲವು ವಾರಪತ್ರಿಕೆಯೆಡೆಗಿತ್ತು. ಹೆಚ್ಚಾಗಿ ವರದಿಗಳಿಗಿಂತ ಲೇಖನಗಳತ್ತ ಅವರಿಗೆ ಆಸಕ್ತಿ. ಹೀಗಾಗಿ ಅವರ ಬರಹಗಳು 'ಕರ್ಮವೀರ' ವಾರಪತ್ರಿಕೆಯಲ್ಲಿ ಪ್ರಕಟವಾಗುತ್ತಿತ್ತು. ಆರಂಭದಲ್ಲಿ ಹಾಸ್ಯ, ಲಘು ವಿಡಂಬನೆ, ಹರಟೆಗಳನ್ನು ಪಾವೆಂ ಬರೆಯುತ್ತಿದ್ದರು. ತಮ್ಮ ಹೆಸರಿನಲ್ಲಿ ಬರೆಯಲು ತುಸು ಸಂಕೋಚ. ಆಗ ಹುಟ್ಟಿದವನೇ ಲಾಂಗೂಲಾಚಾರ್ಯ. ಈ ಹೆಸರಿನಲ್ಲಿ ಬರೆಯುವವರು ಯಾರೆಂಬ ಬಗ್ಗೆ ಆ ದಿನಗಳಲ್ಲಿ ಓದುಗರಿಗೆ ಅತೀವ ಕುತೂಹಲವಿತ್ತು. ಅನಂತರ ಪಾವೆಂ ಪುಸ್ತಕ ವಿಮರ್ಶೆ, ರಾಜಕೀಯ ವಿಶ್ಲೇಷಣೆ, ಅಂತಾರಾಷ್ಟ್ರೀಯ ವಿದ್ಯಮಾನಗಳ ಬಗ್ಗೆ ಬರೆಯಲಾರಂಭಿಸಿದರು. ಅಷ್ಟೊತ್ತಿಗೆ ಪಾವೆಂ ಅವರ ಬರಹ ಸಾಮರ್ಥ್ಯ ಪ್ರಕಟವಾಗಿತ್ತು. ಅವರು'ಕರ್ಮವೀರ'ದ ಉಪಸಂಪಾದಕರಾಗಿ, ಬಳಿಕ ಸಹಾಯಕ ಸಂಪಾದಕರಾದರು.

1956 ರಲ್ಲಿ 'ಕಸ್ತೂರಿ' ಡೈಜೆಸ್ಟ್ ಆರಂಭವಾದಾಗ ಯಾರನ್ನು ಸಂಪಾದಕನನ್ನಾಗಿ ಮಾಡಬೇಕೆಂದು ಆಡಳಿತ ಮಂಡಳಿ ಯೋಚಿಸುವಾಗ ಪಾವೆಂ ಹೊರತಾಗಿ ಬೇರೆ ಯಾವ ಹೆಸರೂ ಚರ್ಚೆಯಾಗಲೇ ಇಲ್ಲ. ಅಸಲಿಗೆ ಪಾವೆಂ ಅವರಿಗಾಗಿಯೇ, ಅವರ ಒತ್ತಾಸೆ, ಕಲ್ಪನೆಯನ್ನು ಸಾಕಾರಗೊಳಿಸಲೆಂದೇ 'ಕಸ್ತೂರಿ' ಆರಂಭವಾಯಿತು. ಪ್ರಥಮ ಸಂಚಿಕೆಯಿಂದಲೇ 'ಕಸ್ತೂರಿ'ಗೆ ಪಾವೆಂ ಅದೆಂಥ ಭದ್ರ ಬುನಾದಿ ಹಾಕಿದರೆಂದರೆ, ಇದು ಇಂದಿಗೂ ಕನ್ನಡಿಗರ ಅಚ್ಚು ಮೆಚ್ಚಿನ ಮಾಸಿಕವಾಗಿ ಉಳಿದುಕೊಂಡಿದೆ. ಇಂದಿಗೂ ಸಹ ಈ ಪತ್ರಿಕೆಯ ಎಲ್ಲ ಸಂಚಿಕೆಗಳನ್ನು ಕಾಯ್ದಿರಿಸುವ ಪರಿಪಾಠ ಜಾರಿಯಲ್ಲಿದೆ. 'ಕಸ್ತೂರಿ' ಓದುವುದು, ಕೈಯಲ್ಲಿ ಹಿಡಿದುಕೊಳ್ಳುವುದು, ಇದರಲ್ಲಿ ಪ್ರಕಟವಾಗುವ ಲೇಖನಗಳನ್ನು ನಾಲ್ಕು ಜನರ ಮುಂದೆ ಪ್ರಸ್ತಾಪಿಸುವುದು ಪ್ರತಿಷ್ಠೆಯ ವಿಷಯವೆಂದೇ ಭಾವಿಸಲಾಗುತ್ತಿತ್ತು.

ಅದರಲ್ಲಿ ಪ್ರಕಟವಾಗುವ ಲೇಖನಗಳು ಹಾಗಿರುತ್ತಿದ್ದವು. ಪಾವೆಂ ಅಂಥ ಲೇಖನಗಳನ್ನೇ ಬರೆಸುತ್ತಿದ್ದರು. ಅದಕ್ಕಿಂತ ಮುಖ್ಯವಾಗಿ ತಾವೇ ಬರೆಯುತ್ತಿದ್ದರು. ಪಾವೆಂ, ಪಿ.ವಿ. ಆಚಾರ್ಯ, ಪಾ.ವೆಂ. ಆಚಾರ್ಯ, ರಾಧಾಕೃಷ್ಣ ರಾವ್, ಮುರಲೀಧರ, ಲಾಂಗೂಲಾಚಾರ್ಯ ಮುಂತಾದ ಹೆಸರುಗಳಿಂದ ಬರೆಯುತ್ತಿದ್ದರು. ಒಂದೇ ಸಂಚಿಕೆಯಲ್ಲಿ ಆರೇಳು ಬೇರೆ ಬೇರೆ ಹೆಸರುಗಳಲ್ಲಿ ಬರೆದಿದ್ದೂ ಉಂಟು. ಪ್ರತಿ ಲೇಖನದ ಧಾಟಿ, ಶೈಲಿ, ನಿರೂಪಣೆ ಬೇರೆ ಬೇರೆಯಾಗಿರುತ್ತಿದ್ದುದರಿಂದ ಓದುಗರಿಗೆ ಅನುಮಾನ ಮೂಡುತ್ತಿರಲಿಲ್ಲ. ವಿಡಂಬನೆ, ಹರಟೆಗೆ ಲಾಂಗೂಲಾಚಾರ್ಯರಾದರೆ, ವಿಜ್ಞಾನ ಲೇಖನಗಳಿಗೆ ರಾಧಾಕೃಷ್ಣರಾವ್ ಆಗುತ್ತಿದ್ದ ಪಾವೆಂ, ವಿಚಾರಪ್ರಚೋದಕ ಬರಹಗಳಿಗೆ ಪಿ. ವಿ. ಆಚಾರ್ಯರಾಗುತ್ತಿದ್ದರು. 'ಪದಾರ್ಥ ಚಿಂತಾಮಣಿ'ಯಂಥ ಅಂಕಣದಲ್ಲಿ ಅವರು ಪಾವೆಂ ಅಂತಾರಾಷ್ಟ್ರೀಯ ವಿದ್ಯಮಾನಗಳಲ್ಲಿ ಇನ್ನ್ಯಾವುದೋ ಹೆಸರು.

'ಕಸ್ತೂರಿ'ಗೆ ಸತತ ಹದಿನೆಂಟು ವರ್ಷಗಳ ಕಾಲ ಸಂಪಾದಕರಾಗಿದ್ದ ಪಾವೆಂ, ಪತ್ರಿಕೆಯನ್ನು ಮೀರಿ ಬೆಳೆದಿದ್ದು ಅವರ ಸಾಧನೆ. ಪಾವೆಂ ಹಾಗೂ ಕಸ್ತೂರಿ ಬೇರೆ ಬೇರೆ ಅಲ್ಲ. ಇಂದಿಗೂ ಸಹ ಕಸ್ತೂರಿ ನೆನಪಾದರೆ ಪಾವೆಂ, ಪಾವೆಂ ನೆನಪಾದರೆ ಕಸ್ತೂರಿ. ಒಬ್ಬ ಸಂಪಾದಕ ಪತ್ರಿಕೆಯಲ್ಲಿ ಆವರಿಸುವ, ಪತ್ರಿಕೆಯನ್ನು ಬಿಟ್ಟು, ಈ ಲೋಕವನ್ನೇ ಅಗಲಿ ಅವೆಷ್ಟೋ ವರ್ಷಗಳ ನಂತರವೂ ಆವಾಹಿಸಿಕೊಳ್ಳುವ ಪರಿಯನ್ನು ಯೋಚಿಸುವಾಗಲೆಲ್ಲ ಪಾವೆಂ ನೆನಪಾಗುತ್ತಾರೆ.




... ರಾಮನು ಕಾಡಿಗೆ



ಹುಲಿ ಇಲಿಯಾಯಿತೆ?

## ಅನ್ಯಾಯದ ಪರಮಾವಧಿ

**ಮೀರ್‌ಸಾದಿಕರು** ಕೇವಲ ಟೀಪೂ ಸುಲ್ತಾನನ ಕಾಲದಲ್ಲಿ ಮಾತ್ರ ಇರಲಿಲ್ಲ. ಸಾರ್ವಜನಿಕ ಜೀವನದ ನೈತಿಕ ಬಲ ದಿವಾಳಿ ಆಗಿರುವ ಈ ದೇಶದಲ್ಲಿ ನಾಯಕರ ಹೆಸರಲ್ಲಿ ರಕ್ತಬೀಜಾಸುರ ದ್ರೋಹಿಗಳ ಸಂತಾನವೇ ಹೇರಳವಾಗುತ್ತಿದೆ. ದೇಶದ ಹಿತಕ್ಕಿಂತ ಪಕ್ಷದ ಅಧಿಕಾರವೇ ದೊಡ್ಡದಾಗಿರುವ ಅರ್ಬುದ ರೋಗ ಬೆಳೆಯುತ್ತಿದೆ. ಪಕ್ಷ ರಾಜಕೀಯ ದೇಶಾಭಿವೃದ್ಧಿಗೆ ಪಕ್ಷವಾತ ಹಿಡಿಸಿದೆ.

ಮೊದಲು ಕಾಶ್ಮೀರ. ಈಗ ಆಂಧ್ರ. ಶಾಸಕರಿಗೆ ಪ್ರಜಾಪ್ರಭುತ್ವದಲ್ಲಿ ಖಂಡಿತ ನಂಬಿಕೆ ನಶಿಸಿ ಹೋಗಿದೆ. ಮೂಕ ಪ್ರಜೆಗಳ ಮೂಲಭೂತ ಹಕ್ಕುಗಳ ಕೊಲೆ ನಡೆದಿದೆ. ಯಾರ ಮೇಲೆ ಅತ್ಯಾಚಾರ ನಡೆಯಿತೋ ಅವರಿಗೇ ತಮ್ಮ ಅನಿಸಿಕೆ ಹೇಳಲಾರದಂತೆ ಉಸಿರು ಕಟ್ಟಿಸುವ ಚಾಣಕ್ಯ ತಂತ್ರ. ಅನ್ಯಾಯದ ಪರಮಾವಧಿ.

ಜನತೆ ಆರಿಸಿ ಕಳಿಸಿದ ಪ್ರತಿನಿಧಿಗಳನ್ನು, ನಾಯಕರನ್ನು ಹೀಗೆ ದಿನಬೆಳಗಾದರೆ ಎತ್ತಂಗಡಿ ಮಾಡುವ ಕಾರಸ್ಥಾನ ದೇಶದ ಹಿತಕ್ಕೆ ಮಾರಕ. ರಾಜ್ಯಪಾಲರು ಗುಲಾಮರಂತೆ ಅಸಾಂವಿಧಾನಿಕ ರೀತಿಯಲ್ಲಿ ಸರಕಾರ ಉರುಳಿಸಿ, ಹಿಂಸೆ, ಕ್ರೌರ್ಯ, ಶಾಂತಿಭಂಗಗಳಿಗೆ ಕಾರಣರಾಗುತ್ತಿದ್ದಾರೆ. ಪದೇ ಪದೇ ನಡೆಯುವ ಕುಟಿಲ ಪ್ರಕರಣಗಳು ಜನತೆಯ ನಂಬಿಕೆಗೆ ಕೊಡುವ ಲತ್ತೆ. ಕೊಳೆತು, ನಾರುತ್ತ ಅಸ್ಥಿರವಾಗಿರುವ ರಾಜಕೀಯ ರಂಗ ರಾಷ್ಟ್ರದ ಅಧೋಗತಿಗೆ ಸಾಕ್ಷಿ.

ಕಾಶ್ಮೀರದಲ್ಲಾಗಲಿ, ಆಂಧ್ರದಲ್ಲಾಗಲಿ ಈ ರೀತಿ ಅಲ್ಲೋಲ ಕಲ್ಲೋಲ ಮಾಡುವ ಅಗತ್ಯವಾದರೂ ಏನಿತ್ತು? ಈ ಎರಡೂ ರಾಜ್ಯಗಳಿಗಿಂತ ಮಹಾರಾಷ್ಟ್ರ ರಾಜಕೀಯ ಮಲೆತು ಹೋಗಿದೆ. ಭಿವಂಡಿ ಹತ್ಯಾಕಾಂಡ ಇನ್ನೂ ಜ್ವಾಲಾಮುಖಿಯಾಗಿಯೇ ಉಳಿದಿದೆ. ಉತ್ತರ ಪ್ರದೇಶ ರಣರಂಗವಾಗಿದೆ. ಅಸ್ಸಾಂ, ಪಂಜಾಬುಗಳು ನಿಶ್ಚೇಷ್ಟಿತವಾಗಿವೆ. ದೇಶದ ತುಂಬ ಅಶಾಂತಿ, ದುರ್ಭಿಕ್ಷ, ಸಂಕಟ. ಎಲ್ಲಿದೆ ಸ್ವಾತಂತ್ರ್ಯ? ಎಲ್ಲಿದೆ ಸಮಾನತೆ? ಎಲ್ಲಿದೆ ಸಂವಿಧಾನ?

ಇತಿಹಾಸ ಈ ಘಟನೆಗಳನ್ನೆಂದೂ ಮನ್ನಿಸದು.

● **ಸಂಪಾದಕ**

## ರಸಾಯನ

ಇಂಥ ಒಂದು ಇಟಾಲಿಯನ್ ಕಥೆಯನ್ನು ನಾನು ಓದಿದ್ದೇನೆ. ಬಹುಶಃ ಅದು ಮೊರೇವಿಯನ ಕಥೆ. ಗಂಡ ಸ್ವಲ್ಪ ಕುಡುಕ. ಆಗಾಗ್ಗೆ ಕುಡಿದು ಬಂದು ಹೆಂಡತಿಯನ್ನ ಮೈಮುಖ ನೋಡದೆ ಬಡಿಯುತ್ತಿದ್ದ. ಆಂಭ್ರಣೆ ಇಳಿದ ಮೇಲೆ ಅವಳನ್ನ ಓಲೈಸಿ ಮೆಚ್ಚು ಕೊಟ್ಟು ಸಿನಿಮಾಕ್ಕೋ ಬಟ್ಟೆ ಅಂಗಡಿಗೋ ಕರೆದೊಯ್ಯುತ್ತಿದ್ದ. ಕಥೆಯ ಸ್ವಾರಸ್ಯ ಇದರಲ್ಲಿ ಇರುವುದಲ್ಲ. ನೆರೆ ಬಿಡಾರದಾಕೆ ಇದನ್ನ ನೋಡಿ ನೋಡಿ ಸೋಜಿಗಪಡುತ್ತಾಳೆ. ಅವಳ ಗಂಡನೋ ಬಲು ನಾಗರಿಕ. ಎಂದೂ ಹೆಂಡತಿಯ ಮೇಲೆ ಕೈ ಬಿಡಿ ನಾಲಿಗೆ ಕೂಡ ಎತ್ತಿದವನಲ್ಲ. ಒಂದು ದಿನ ಏಕಾಏಕಿ ಇವಳಿಗೆ ತನ್ನ ಗಂಡ ತನ್ನನ್ನ ಹೊಡೆದರೆ ಎಷ್ಟು ಚೆನ್ನಾಗಿತ್ತು ಅನಿಸತೊಡಗುತ್ತದೆ. ಪೆಟ್ಟು ಬಿದ್ದರೇನು, ಆಮೇಲೆ ಬರುವ ಲಲ್ಲೆ, ಉಪಚಾರ, ಮೆಚ್ಚು ಬಹಳ ಉತ್ತೇಜಕವಾಗಿರುವುದಿಲ್ಲವೇ ? ತನ್ನ ಗಂಡ ಹೊಡೆಯುವುದಿಲ್ಲ, ಆದರೆ ನೆರೆಮನೆಯವನ ಹಾಗೆ ಹುಚ್ಚೆದ್ದು ಓಲೈಸುವುದೂ ಇಲ್ಲ. ಎಲ್ಲ ಶುದ್ಧ ನಾಗರಿಕ ವರ್ತನೆ. ಶುದ್ಧ ಬೋರು ! ಹೇಗಾದರೂ ಗಂಡನ್ನ ಕೆರಳಿಸಿ ಹೊಡೆಸಿಕೊಳ್ಳಬೇಕು ಅಂತ ಅವಳಿಗೆ ಹಂಬಲ ಹುಟ್ಟುತ್ತದೆ. ಬೇಕೆಂದೇ ಜಗಳ ಹೂಡುವುದು, ಗಂಡನ್ನ ಅಲಕ್ಷ್ಯ ಮಾಡುವುದು— ಮೊದಲಾದ ಪ್ರಚೋದನೆಗಳನ್ನು ಆರಂಭಿಸುತ್ತಾಳೆ. ಆ ಶುಂಭನಿಗೆ ಇದೆಲ್ಲ ಅಷ್ಟು ಸುಲಭವಾಗಿ ಅರ್ಥವಾದೀತೇ ? ಬಡಪಾಯಿ ಇವಳಿಗೆ ಈಗೀಗ ಏನಾಗಿದೆ ಅಂತ ತಲೆ ಕೆರೆದುಕೊಳ್ಳುತ್ತಾನೆ. ಕಥೆ ಹೇಗೆ ಕೊನೆಗೊಳ್ಳುತ್ತದೆ ಅಂತ ನನಗೀಗ ನೆನಪಾಗುವುದಿಲ್ಲ. ಹೊಡೆಯಲಾರದ ಶುದ್ಧ ಷಂಡ ಗಂಡನ್ನ ಅವಳು ಬಿಟ್ಟೇ ಹೋದಳೋ ? ಅಥವಾ ಕೊನೆಗೆ ಅವನು ಅವಳ ಇಷ್ಟಾರ್ಥವನ್ನು ನೆರವೇರಿಸಿದನೋ ? ಅಥವಾ ತಾಳಲಾರದೆ ಒಂದು ದಿನ ಕೈರುಚಿ ತೋರಿಸಿ, ಆಮೇಲೆ ಓಲೈಸದೆ ಅವಳನ್ನು ಇಮ್ಮಡಿ ನಿರಾಶೆಗೆ ಗುರಿ ಮಾಡಿದನೊ ? ಸಾಮಾನ್ಯವಾಗಿ ಅರಸಿಕರು ಹೆಂಡಂದಿರ ಚಿತ್ತಲಹರಿಗಳನ್ನು ಅರ್ಥಮಾಡಿಕೊಳ್ಳುವುದೇ ಇಲ್ಲ. ಅವರಿಗೆ ಮುದ್ದು ಬೇಕೆನಿಸಿದಾಗ ಗುದ್ದು ಕೊಡುತ್ತಾರೆ. ಗುದ್ದು ಬೇಕೆನಿಸಿದಾಗ ಮುದ್ದು ಕೊಡುತ್ತಾರೆ.

ಒಂದು ವೈಚಿತ್ರ್ಯವೆಂದರೆ ಪ್ರೇಮ ಅಥವಾ ಕಾಮಕ್ಕೂ ಹಿಂಸೆಗೂ ಇರುವ ನಂಟು. ಇಂಗ್ಲಂಡಿನಲ್ಲಿ ಮಂತ್ರಿ ಪ್ರೊಫ್ಯುಮೋ ಅವನ ಕಾಮಾತಿಚಾರದ ಕೋಲಾಹಲ ಎದ್ದಾಗ, ಕಾಮಿನಿಯೊಬ್ಬಳಿಂದ ಉನ್ನತಾಧಿಕಾರದಲ್ಲಿದ್ದ ಕಾಮಿಗಳು ಚಾಟಿಯೇಟು ಹೊಡೆಸಿಕೊಳ್ಳುತ್ತಿದ್ದ ಸಂಗತಿ ಬೆಳಕಿಗೆ ಬಂತು. ಈ ಕೊರಡೆ ಪೂಜೆಗಾಗಿ ಭಾಮಿನಿಗೆ ಕೈತುಂಬ ದಕ್ಷಿಣೆ ಸಿಗುತ್ತಿತ್ತಂತೆ. ತದ್ವಿರುದ್ಧವಾದ ಹಂಬಲವನ್ನು ನಾವು ಜನ್ನನ ಯಶೋಧರ ಚರಿತ್ರೆಯ ರಾಣಿ ಅಮೃತಮತಿಯಲ್ಲಿ ಕಾಣುತ್ತೇವೆ. ಆ ಕಾಮಿನಿ ಮುಮ್ಮಡಿ ಮೊಡಂಕನಾದ ಅವಳ ಪ್ರೇಮಿಕ ಆನೆ ಮಾವುತನ ಬಡಿಗೆಯಿಂದ ಪೂಜೆ ಮಾಡಿಸಿಕೊಂಡು ಆನೆ ಮಹಾಲಿನಲ್ಲಿ "ಕೇರೆಯಂತೆ ಪೊರಳ್ದಳ್." ಮರುದಿನ ಗಂಡ ಕಮಲದ ಮೊಗ್ಗಿನಿಂದ ಲೀಲಾತಾಡನ ಮಾಡಿದಾಗ ಅವಳೇ ನೋವಿನಿಂದ ಮೂರ್ಛೆಹೋದಳು. ಇಂಥವರು ಒಲ್ಲದ ಗಂಡನ ಮೆಲ್ಲನ ಸ್ಪರ್ಶಕ್ಕಿಂತ ಮೆಚ್ಚಿದ ಮಿಂಡನ ಹಗ್ಗದ ಪೆಟ್ಟನ್ನು ಸವಿಯಾಗಿ ಭಾವಿಸುತ್ತಾರೆ. ಆಧುನಿಕ ಮನಶ್ಶಾಸ್ತ್ರ ಪರಿಭಾಷೆಯಲ್ಲಿ ಹೇಳುವುದಾದರೆ ಅಮೃತಮತಿ ಮಾಸೋಕಿಸ್ಟ್ (masochist) ಪ್ರಣಯಿನಿಯಾಗಿದ್ದಳು. ಅವಳ ರಾಜ ಪತಿ ಅವಳಿಗೆ ತೀರ ಮೆತ್ತನ್ನ ಗಂಡನಾಗಿದ್ದ. ಅವಳಿಗೆ ಹೆಚ್ಚು ಗಂಡಸ್ತನ ತೋರಿಸುವವ ಬೇಕಾಗಿದ್ದ. ಮೊಡಂಕನಾದರೂ ಮಾವುತನಿಗೆ ಹೆಣ್ಣನ್ನು ಹೇಗೆ ಆಳಬೇಕೆಂದು ಗೊತ್ತಿತ್ತು. ಕೊಂಕಣದೆಮ್ಮೆಗೆ ಕೊರಡೆಯೇಟು ಅನ್ನುತ್ತಾರಲ್ಲ. ಎಮ್ಮೆಗೂ ರಾಜವನಿತೆಗೂ ಸಂಸ್ಕೃತದಲ್ಲಿ ಒಂದೇ ಹೆಸರು—ಮಹಿಷಿ— ಇರುವುದು ಇದೇ ಕಾರಣಕ್ಕೋ ಏನೋ. ಹಿರಿಯ ಮಹಿಳೆಯೊಬ್ಬಳು ದಿನಾ ಗಡ್ಡ ಬೋಳಿಸಿಕೊಳ್ಳುತ್ತಿದ್ದ ನನಗೆ, "ಹೆಂಗಸರ ಹಾಗೆ ಸದಾ ನಯವಾದ ಕೆನ್ನೆಯಲ್ಲಿರುತ್ತೀಯಲ್ಲಾ ? ಗಂಡಸರಿಗೆ ಸ್ವಲ್ಪ ಗಡ್ಡಮೀಸೆ ಇದ್ದರೇ ಚಂದ !" ಅಂದಿದ್ದರು. ಹಾಗೆ ಗಂಡಸರು ಅಷ್ಟಿಷ್ಟು ಹಿಂಸಕರಾಗಿದ್ದರೇನೇ ಹೆಂಗಸರಿಗೆ ಇಷ್ಟವೇನೋ.

ನ್ಯಾಯಾಲಯಗಳಲ್ಲಿ ಕೂಡ ಹೆಂಡತಿಯನ್ನು ಹೊಡೆಯುವವರು ಬಂದಿದ್ದಾರೆ. ವಕೀಲರೊಬ್ಬರು ಸಾಕ್ಷಿದಾರನನ್ನು ದಬಾಯಿಸುತ್ತ, "ಅಧಿಕ ಪ್ರಸಂಗದ ಉತ್ತರ ಬೇಡ ! ಕೇಳಿದ್ದಕ್ಕೆ ಹೌದು, ಅಲ್ಲ—ಇಷ್ಟೇ ಉತ್ತರ ಕೊಡಬೇಕು— ತಿಳಿಯಿತೆ ?" ಎಂದು ತಾಕೀತು ಮಾಡಿದರು. "ತಿಳಿಯಿತು, ಮಹಾಸ್ವಾಮಿ ! ಆದರೆ ಎಲ್ಲ ಪ್ರಶ್ನೆಗಳಿಗೆ ಹೌದು, ಇಲ್ಲ ಅಂತ ಉತ್ತರ ಕೊಡಕ್ಕೆ ಬರಲ್ಲ" ಅಂದ ಸಾಕ್ಷಿದಾರ ವಿನಯವಾಗಿ. "ಬರುತ್ತೆ !" ಅಂತ ವಕೀಲರು. "ಹಾಗಾದರೆ ನಾನು ನಿಮಗೊಂದು ಪ್ರಶ್ನೆ ಕೇಳುತ್ತೇನೆ. ನೀವು ಹೌದು ಅಥವಾ ಇಲ್ಲ ಅಂತ ಉತ್ತರ ಕೊಡಿ," ಅಂದ ಸಾಕ್ಷಿದಾರ. ವಕೀಲರು "ಕೇಳು !" ಅಂತ ಹೆದ್ದತನದಿಂದ ಗರ್ಜಿಸಿದರು. "ಹಾಗಾದರೆ ಹೇಳಿ ಸ್ವಾಮಿ, ನೀವು ಈಗ ನಿಮ್ಮ ಹೆಂಡತೀನ ಹೊಡೆಯೋದು ಬಿಟ್ಟಿದ್ದೀರಾ ?" ಅಂತ ಘಾಟಿ ಸಾಕ್ಷಿದಾರ ಮೆತ್ತಗೆ ಕೇಳಿದ.

ನನ್ನ ಸ್ನೇಹಿತರ ಮನೇಲಿ ಕೆಲಸ ಮಾಡುತ್ತಿದ್ದ ಒಬ್ಬ ಒಕ್ಕಲಗಿತ್ತಿ ಒಂದು ದಿನ ಕೈಕಾಲು ಬೆನ್ನುಗಳಲ್ಲಿ ಬಾಸುಂಡೆ ಎಬ್ಬಿಸಿಕೊಂಡು ಬಂದಿದ್ದಳು. ಅವರ ಕಾಲೇಜು ಕುವರಿ ಮಗಳು "ಏನಾಯಿತೇ ?" ಅಂತ ಕೇಳಿದಳು. "ಗಂಡ ನಿನ್ನೆ ರಾತ್ರಿ ಕುಡಿದು ಬಂದು ಹೊಡೆದ ತಾಯಿ" ಅಂದಳು ಕೆಲಸಗಿತ್ತಿ. "ಅಯ್ಯೋ ಪಾಪ ! ಅವನನ್ನ ನೀನು ಯಾಕೆ ಬಿಡೋದಿಲ್ಲ ? ಹ್ಯಾಗೂ ನಿನ್ನ ಹೊಟ್ಟೆ ನೀ ಹೊರೆದುಕೊಳ್ಳುತ್ತೀ. ಅವನೇನು ನಿನಗೆ ಕಾಸು ಕೊಡೋದಿಲ್ಲ ಅಂತೀ" ಅಂದಳು ನನ್ನ ಮಿತ್ರ ಪುತ್ರಿ.

"ನಿಂಗೊತ್ತಿಲ್ಲ ತಾಯಿ. ಹೆಂಡ ಕುಡಿದು ಬಂದು ಬೈದ, ಹೊಡೆದ ಅಂತ ಗಂಡನ್ನ ಬಿಡೋದುಂಟೆ ? ಬೇರೆ ಗಂಡ ಅಷ್ಟು ಸುಲಭದಲ್ಲಿ ಸಿಗುತಾನೆ ಅಂತೀಯಾ ? ನಂದೇ ತಪ್ಪು. ಅವ ಕುಡಿದು ಬಂದು ದುಡ್ಡು ಕೇಳಿದ. ನಾನು ಸ್ವಲ್ಪ ಕೊಟ್ಟು ಬಿಡಬೇಕಿತ್ತು. ನಾನು ಮೊಂಡು ಹಿಡಿದೆ. ಅವನ್ನ ಬೈದೆ. ಹೋಗಲಿ ಬಿಡಿ. ಇವತ್ತು ರೈಟಾಗಿ ಮನೇಗೆ ಬರ್ತಾನೆ. ಎಲ್ಲ ಸರಿಹೋಗುತ್ತೆ." ●



● ಲಾಂಗೂಲಾಚಾರ್ಯ
(ಪಾವೆಂ)

ಪಾ. ವೆಂ. ಆಚಾರ್ಯರು ನಿಧನರಾಗುವ ಕೆಲವೇ ದಿನಗಳ ಮೊದಲು 'ತರಂಗ'ಕ್ಕೆ ಕಳಿಸಿಕೊಟ್ಟಿದ್ದ ಈ ಹಾಸ್ಯ ಲೇಖನವನ್ನು ಅವರ ನೆನಪಿನೊಂದಿಗೆ ಇಲ್ಲಿ ಪ್ರಕಟಿಸುತ್ತಿದ್ದೇವೆ.

—ಸಂಪಾದಕ

# ನೀವು ಹೆಂಡ್ತೀನ ಹೊಡ್ಡೆಯೋದು ಬಿಟ್ಟಿದ್ದೀರಾ?



ನೀವು ಭಾರತೀಯರೆ? ಮದುವೆಯಾದ ಗಂಡಸರೆ? ಹಾಗಾದರೆ ನೀವು ಹೆಂಡತಿಯನ್ನು ಹೊಡೆಯುತ್ತೀರಿ; ಹೊಡೆದಿರಲೇಬೇಕು. ಎರಡು ಸಲ ವಿವಾಹ ವಿಚ್ಛೇದ ಪಡೆದ ಮಹಿಳಾಮಣಿಯೊಬ್ಬಳು ಹೀಗೆಂದು ಮಹಿಳಾ ಪತ್ರಿಕೆಯೊಂದರಲ್ಲಿ ಬರೆದಿದ್ದಾಳೆ.

ಎಂದಿನ ಹಾಗೆ, ಇಬ್ಬರು ಹೆಂಗಸರು ಒಂದು ಸಂಗತಿಯಲ್ಲಿ ಒಂದೇ ಮತ ಹೊಂದಿರಲು ಸಾಧ್ಯವಿಲ್ಲ. ಆದ್ದರಿಂದ ಈ ದ್ವೈ–ವಿಚ್ಛೇದಕ ಮಹಿಳೆಯ ಹೇಳಿಕೆಯನ್ನು ಖಂಡಿಸಿ–ಅಥವಾ ಛೇದಿಸಿ–ಒಮ್ಮೆಯೂ ವಿಚ್ಛೇದ ಪಡೆಯದ ಮಹಿಳೆಯೊಬ್ಬಳು ಸಂಪಾದಕರಿಗೆ ಬರೆದಿದ್ದಾಳೆ. ಅವಳ ಮನೆತನದಲ್ಲಿ ಡಜನ್ ಮಿಕ್ಕಿ ದಂ-ಪತಿಗಳಿದ್ದಾರಂತೆ. ಒಬ್ಬರೂ ಒಮ್ಮೆಯೂ ತಮ್ಮ ಹೆಂಡಂದಿರ ಮೇಲೆ ಕೈಯೆತ್ತಿದ ಉದಾಹರಣೆ ಇಲ್ಲವಂತೆ.

ನಾನು ಆ ದ್ವಿ-ವಿಚ್ಛೇದಿತ ಮಹಿಳೆಯಾಗಿದ್ದರೆ ಇದಕ್ಕೆ ಉತ್ತರ ಕೊಡದೆ ಬಿಡುತ್ತಿರಲಿಲ್ಲ. "ಅಮ್ಮಾ! ನೀನು ಹೇಳೋದು ನಿಜ ಇರಬಹುದು. ಆದರೆ ನಿನ್ನ ಈ ಗಂಡಂದಿರಲ್ಲಿ ತಮ್ಮ ದಂ-ಗಳನ್ನು ಹೊಡೆಯೋವಷ್ಟು ದಂ ಇರಲಿಕ್ಕಿಲ್ಲ. ಆದ್ದರಿಂದ ಅವರನ್ನು ಪತಿಗಳೆಂದು ನಾನು ಒಪ್ಪೋದಿಲ್ಲ. ಮತ್ತು ನನ್ನ ಡೆಫಿನಿಷನ್ ಪ್ರಕಾರ ಅವರು ಭಾರತೀಯರೇ ಅಲ್ಲ !"

ಹೆಂಡತಿಯನ್ನು ಹೊಡೆಯುವ ಈ ಪ್ರಶ್ನೆ ಬಹಳ ಹಳೆಯದು. ಅನಾದಿ ಎಂದರೂ ಸಲ್ಲುವುದು. ಇನ್ನೂ ಮನುಷ್ಯ ಬಟ್ಟೆ ನೇಯಲು ಉಡಲು ಕಲಿಯದಿದ್ದ ಕಾಲದಲ್ಲಿ ಕೂಡ ಅನಾಗರಿಕ ಮಾನವ ಹೆಂಡತಿಯನ್ನು ಜುಟ್ಟು ಹಿಡಿದು ದರದರ ಎಳೆಯುತ್ತ ಮರದ ಗದೆಯಿಂದ ಅವಳನ್ನು ಬಡಿಯುತ್ತಿದ್ದನೆಂದು ನರವಂಶ ಶಾಸ್ತ್ರಜ್ಞರು ಹೇಳುತ್ತಾರೆ. ಋಗ್ವೇದ ಕಾಲದಲ್ಲಿ ಒಬ್ಬ ಜುಗಾರಿಕೋರ ಹೆಂಡತಿಯನ್ನ ಮಾರಿದನೆಂದು ಗೊತ್ತಾಗಿದೆ. ಮಾರುವಷ್ಟು ಮುಂದು ವರಿದವನು ಅದಕ್ಕಿಂತ ಮುಂಚೆ ಅವಳನ್ನ ಹೊಡೆಯ ದಿರುತ್ತಿದ್ದನೆ? ಹೊಡೆದು ಜುಗಾರಿಗೆ ಹಣ ಕೇಳಿರಬೇಕು. ಅವಳು ಕೊಟ್ಟಿರಲಿಕ್ಕಿಲ್ಲ. ಆಮೇಲೆ ಅವಳನ್ನ ಮಾರಿ ಕೊಂಡಿರಬೇಕು.

"ಹೆಂಡತಿಯ ದಂಡಿಸಲಾರಿ। ಭೂ।ಮಂಡಲಕ್ಕೆ ಒಡೆಯ ನೀನ್ ಹ್ಯಾಂಗಾದ್ಯೋ?" ಎಂದು ಒಬ್ಬ ದಾಸವರೇಣ್ಯರು ಕೇಳಿದ್ದಾರೆ. ಇದು ಸುಮಾರು ಹದಿನಾರನೇ ಶತಮಾನದಲ್ಲಿ. ಅಂದರೆ ಆಗ ಹೆಂಡತಿಯನ್ನ ಹೊಡೆಯಲಾರದವನು ಭೂಮಂಡಲಕ್ಕೆ ಒಡೆಯನಾಗುವುದು ಸಾಧ್ಯವಿರಲಿಲ್ಲ ಎಂದಂತಾಯಿತು. ಮಂಡಲಾಧಿಪತಿಗಳು ಈ ಸಲುವಾಗಿಯೇ ಅಷ್ಟೊಂದು ಹೆಂಡಂದಿರನ್ನ ಅಂತಃಪುರದಲ್ಲಿ ಸಾಕುತ್ತಿದ್ದಿರ ಬೇಕು. ಸರದಿಯ ಮೇಲೆ ಅವರನ್ನು ಹೊಡೆಯುತ್ತಿದ್ದಿರಬೇಕು. ಒಬ್ಬಳೇ ರಾಣಿ ಅಥವಾ ಉಪರಾಣಿಯನ್ನು ದಿನವೂ ಮನದಣಿಯೆ ಹೊಡೆದರೆ ಅವಳ ರೂಪ ಉಳಿದೀತೇ? ಅವಳು ಉಳಿದಾಳೇ?

ಹೆಂಡತಿಯನ್ನ ಹೊಡೆಯುವುದು ಗಂಡನ ಹಕ್ಕು ಅಂತ ಮಾತ್ರವಲ್ಲ, ಅವಳಿಗೂ ಅದು ಒಳ್ಳೇದು ಅನ್ನುವ ನಂಬಿಕೆ ಒಂದು ಕಾಲದಲ್ಲಿತ್ತೆಂದು ನನಗೆ ಮನವರಿಕೆಯಾಗಿದೆ. ಅದು ಸಾರ್ವತ್ರಿಕವೂ ಆಗಿತ್ತು. ಒಂದು ಸಂಸ್ಕೃತ ಸುಭಾಷಿತ (ಹೆಂಡತಿಯನ್ನ ಹೊಡೆಯಲು ಹೇಳಿಕೊಡುವ ಶ್ಲೋಕವನ್ನ ಸುಭಾಷಿತ ಅಂತ ಒಪ್ಪಲು ನೀವು ಒಪ್ಪುವು ದಾದರೆ!) ಮತ್ತು ಒಂದು ಇಂಗ್ಲಿಷ್ ಲಿಮರಿಕ್ ಒಂದರ ಭಾಷಾಂತರ ಇನ್ನೊಂದು ಎನ್ನುವಷ್ಟು ಸಮಾನವಾಗಿವೆ. ಮರ್ದಿಸುತ್ತ ಇದ್ದರೇನೆ ಗುಣವರ್ಧನವಂತೆ.

ಹೆಂಡತಿಯನ್ನ ಹೊಡೆಯುವುದಕ್ಕೆ ಯಾವಾಗಲೂ ಅವಳ ತಪ್ಪು ಅಥವಾ ಅವಳ ಮೇಲಿನ ಸಿಟ್ಟು ಕೂಡ ಕಾರಣವಾಗಿರಬೇಕಿಲ್ಲ. ಅದು ನಿಮ್ಮ ತಂದೆ ತಾಯಿಗಳ ಮೇಲಿನ ಸಿಟ್ಟನ್ನು ಪ್ರಕಟಪಡಿಸುವ ಒಂದು ವಿಧಾನವಾಗಿರ ಬಹುದು. ಅಥವಾ ಅಕ್ಕತಂಗಿಯರ ಮೇಲಿನ, ಅಷ್ಟೇ ಏಕೆ, ನಿಮ್ಮ ಆಫೀಸಿನ ಬಾಸ್‌ನ ಮೇಲಿನ ಸಿಟ್ಟಿನ ಪ್ರಕಟನೆಯೂ ಆಗಬಹುದು. ಇದನ್ನ ನಾನು ಟ್ರಾನ್ಸ್‌ಫರ್ಡ್ ಎಪಿಥೆಟ್ ದಂಡನೆ ಅಂತ ಕರೆಯುತ್ತೇನೆ. ಹೆಂಡತಿ ಮನೆಗೆ ಹೊಸಬ ಳಾಗಿದ್ದಾಗ, ಒಟ್ಟು ಕುಟುಂಬವಾಗಿದ್ದಾಗ, ಮನೆಗೆ ಬಂದೊಡನೆ ಅವಳ ಮೇಲೆ ದೂರು ಹೇಳುವ ಹಿರಿಯರೋ ಅಕ್ಕತಂಗಿಯರೋ ಇರುವಾಗ ಈ ಟ್ರಾನ್ಸ್‌ಫರ್ಡ್ ಎಪಿಥೆಟ್ ಅಲಂಕಾರದ ಸಿಟ್ಟು ಹಿಂಸಾರೂಪದಲ್ಲಿ ವ್ಯಕ್ತವಾಗುತ್ತದೆ. "ಹಾಗಾದರೆ ಅವಳನ್ನ ಕೊಂದುಹಾಕಿ ಬಿಡುತ್ತೇನೆ. ಎಲ್ಲರಿಗೆ ಸಂತೋಷವಾಗಲಿ!" ಎಂದು ಬಾಯಿಬಿಟ್ಟು ಅಥವಾ ಕೇವಲ ಹಾವಭಾವಗಳಿಂದ ವ್ಯಕ್ತಪಡಿಸುವುದರೊಡನೆ ಬಹಳ ಸಪ್ಪಳವಾಗುವಂತೆ ನೀವು ಹೆಂಡತಿಯನ್ನು ಹೊಡೆಯುತ್ತೀರಿ. ನೀವು ಹೇಳಿರಿ ಬಿಡಿರಿ. ನಿಮ್ಮ ಹೆಂಡತಿಗೆ ಈ ಪೆಟ್ಟಿನ ನಿಜವಾದ ಗುರಿ ಯಾರೆಂದು ಗೊತ್ತಿರುತ್ತದೆ. "ಸ್ತ್ರೀಣಾಂ ಅಶಿಕ್ಷಿತ ಪಟುತ್ವ" ಪ್ರಸಿದ್ಧವೇ ಅಲ್ಲವೇ? ಅವಳಾದರೂ ಈ ಟ್ರಾನ್ಸ್‌ಫರ್ಡ್ ಶಿಕ್ಷೆಯಲ್ಲಿ ಅ-ಪ್ರವೀಣಳಲ್ಲ. ನಿಮ್ಮ ಮೇಲಿನ ಕೋಪವನ್ನು ಮಕ್ಕಳ ಮೇಲೆ ತೀರಿಸಿಕೊಳ್ಳುವ ವಿದ್ಯೆ ಅವಳಿಗೆ ಗೊತ್ತಿಲ್ಲದ್ದೇ? ಇಂಥ ಪ್ರತಿಯೊಂದು ಪೆಟ್ಟು ಪ್ರೀತಿಯನ್ನು ಒಂದು ತೂಕ ಹೆಚ್ಚಿಸುತ್ತೆ ಅಂತ ಅವಳ ಅನುಭವಕ್ಕೆ ಬರಲು ತಡ ಹಿಡಿಯುವುದಿಲ್ಲ. ಸ್ವಲ್ಪ ಸಮಯದಲ್ಲೇ ಅವಳು ಬೇಕೆಂದೇ ತನ್ನ ಮೇಲೆ ದೂರು ಬರುವ ಹಾಗೆ ಮಾಡುತ್ತಾಳೆ. ಬೇಗನೆ ನೀವು ಬೇರೆ ಮನೆ ಮಾಡುತ್ತೀರಿ.

ನನಗೆ ಗೊತ್ತಿದ್ದ ಮಹನೀಯರೊಬ್ಬರು ಶೀಘ್ರ ಕೋಪಿಗಳು. ಸಣ್ಣಪುಟ್ಟ ಮಾತಿಗೆ ಹೆಂಡತಿಯನ್ನ ಬಾಸುಂಡೆ ಬರುವ ಹಾಗೆ ಹೊಡೆಯುವವರು. ಸಿಟ್ಟು ಇಳಿದ ಮೇಲೆ ಪಶ್ಚಾತ್ತಾಪಪಟ್ಟು ಕೆಲವೇಳೆ ಎಣ್ಣೆ ತಿಕ್ಕಿ ಉಪಚಾರ ಮಾಡುವವರು. ರಾತ್ರಿ ನಾಟಕಕ್ಕೆ ಕರೆದು ಕೊಂಡು ಹೋಗುವವರು ಅಥವಾ ಮಲ್ಲಿಗೆ ಹೂ ತಂದು ಮುಡಿಸುವವರು.

**ಹೆಂಡತಿಯನ್ನು ಹೊಡೆಯದ ಗಂಡಸರೂ ಪ್ರಪಂಚದಲ್ಲಿದ್ದಾರೆಯೆ? ಇದ್ದರೆ ಅವರೆಂತಹ ಗಂಡಂದಿರು. ಹೊಡೆತದ ಹಿನ್ನೆಲೆ, ವೈವಿಧ್ಯ, ಹೊಡೆತದ ಉತ್ತರಾವಸ್ಥೆ... ಎಷ್ಟು ಸ್ವಾರಸ್ಯಕರ ಅನುಭವ ಎನ್ನುವುದನ್ನು ಕೇಳಿ...**

# ಪ್ರಕಾಂಡ ಪಂಡಿತ ಪಾವೆಂ

**ಕನ್ನಡನಾಡಿನ ಪ್ರಸಿದ್ಧ ಹರಟೆಗಾರ, ಲಾಂಗೂಲಾಚಾರ್ಯ ಅಂಕಿತನಾಮದಲ್ಲಿ ಅಸಂಖ್ಯಾತ ನಗೆಹರಟೆಗಳನ್ನು ರಚಿಸಿದ ಪಾಡಿಗಾರ ವೆಂಕಟರಮಣಾಚಾರ್ಯರು (ಪಾವೆಂ) ಇಂದು ಜೀವಂತವಿದ್ದಿದ್ದರೆ 90 ವರ್ಷಗಳನ್ನು ಪೂರೈಸು ತ್ತಿದ್ದರು. ಈ ಸಂದರ್ಭದಲ್ಲಿ ಅವರ ಜೀವನ ಕೊನೆಯ ದಿನಗಳನ್ನು ಹಿರಿಯ ಪತ್ರಕರ್ತ ಮತ್ತಿಹಳ್ಳಿ ನಾಗರಾಜರಾವ್ ನೆನಪಿಸಿಕೊಂಡಿದ್ದಾರೆ.**



ಪಾವೆಂ ಅವರು ಕನ್ನಡ ಸಾಹಿತ್ಯಕ್ಕೆ ಹಲವಾರು ಪ್ರಾಕಾರಗಳಲ್ಲಿ ಕೊಡುಗೆಯನ್ನು ನೀಡಿದ್ದಾರೆ. ಹರಟೆಗಳು, ನಗೆ ಬರಹಗಳು ಮಾತ್ರವಲ್ಲದೆ ಜಗದ್ವಿಖ್ಯಾತ ವ್ಯಕ್ತಿಗಳ ಚರಿತ್ರೆ, ದೇಶ, ವಿದೇಶಗಳ ಪರಿಚಯ, ಜಗತ್ತಿನಲ್ಲಿ ನಡೆದ ವೈಚಿತ್ರ್ಯಗಳು, ಭಾರತದ ಆಗುಹೋಗುಗಳು, ವೈಜ್ಞಾನಿಕ ವಿಚಾರಗಳನ್ನು ಕುರಿತು ಸಾವಿರಾರು ಪುಟಗಳಷ್ಟು ಲೇಖನಗಳನ್ನು ಬರೆದಿದ್ದಾರೆ. ಪಾ.ವೆಂ.ಅವರ ಸಮಗ್ರ ಸಾಹಿತ್ಯ 16 ಸಂಪುಟಗಳಲ್ಲಿ ಶ್ರೀನಿವಾಸ ಹಾವನೂರರ ಸಂಪಾದಕತ್ವದಲ್ಲಿ ಪ್ರಕಟವಾಗಿರುತ್ತದೆ.

ಆದರೆ ಅವರು ಕೊನೆಯ ದಿನಗಳನ್ನು ಹೇಗೆ ಕಳೆದರು ಎಂಬ ಬಗ್ಗೆ ಇದುವರೆಗೆ ಪ್ರಕಟವಾದ ಅವರ ಬಗೆಗಿನ ವ್ಯಕ್ತಿಚಿತ್ರಗಳಲ್ಲಿ ಎಲ್ಲಿಯೂ ಬೆಳಕು ಕಂಡಿಲ್ಲ. ತಮಗೆ ದೊರೆತ ರಾಷ್ಟ್ರಮಟ್ಟದ ಪ್ರಶಸ್ತಿಯನ್ನು ಸ್ವೀಕರಿಸುವ ಮೊದಲೇ ಅವರು ಕಣ್ಣುಮುಚ್ಚಿದ್ದು ಅವರ ದುರ್ದೈವ. ಅವರೊಡನೆ ನನಗೆ ನಾಲ್ಕು ದಶಕಗಳ ಒಡನಾಟವಿತ್ತು.

ನಾನು ಮತ್ತು ಪಾ.ವೆಂ.ಅವರು ಹೆಚ್ಚು ಕಡಿಮೆ ಒಂದೇ ಕಾಲಕ್ಕೆ ಸಂಯುಕ್ತ ಕರ್ನಾಟಕ ಗುಂಪಿನ ಪತ್ರಿಕೆಯನ್ನು ಸೇರಿದೆವು. ಪಾ.ವೆಂ.ಗಿಂತಲೂ ನಾನು ಎಂಟು ವರ್ಷ ಸಣ್ಣವನು. ನ್ಯಾಯವಾಗಿ ಅವರು 1973ರಲ್ಲಿ ನಿವೃತ್ತರಾಗಬೇಕಾಗಿತ್ತು. ಎಲ್ಲವೂ ಸರಿಯಾಗಿದ್ದರೆ ಅವರೇ ಕಸ್ತೂರಿಯ ಸಂಪಾದಕಾಗಿ ಮುಂದುವರಿಯುತ್ತಿದ್ದರೊ ಏನೊ! ಅನಾರೋಗ್ಯ ಅಡ್ಡ ಬಂದಿದ್ದರಿಂದ ಅದು ಸಾಧ್ಯವಾಗಲಿಲ್ಲ.

ಪಾ.ವೆಂ. ಕೇವಲ 'ಎಸ್‌ಎಸ್‌ಎಲ್‌ಸಿವರೆಗೆ ಓದಿದ್ದರೂ ಆಗಾಧ ಪಾಂಡಿತ್ಯವಿತ್ತು. ಅವರು ತಿಳಿದುಕೊಳ್ಳದ ವಿಷಯಗಳಿರಲಿಲ್ಲ. ಅವರೊಬ್ಬ ಜ್ಞಾನದ ಖನಿಯಾಗಿದ್ದರು.

ಸುಮ್ಮನೆ ಕೂಡುವುದು ಪಾ.ವೆಂ. ಜಾಯಮಾನವಲ್ಲ. ನಿವೃತ್ತಿಯ ನಂತರವೂ ತಾವು ಕಟ್ಟಿ ಬೆಳೆಸಿದ ಕಸ್ತೂರಿಯ ಗುಣಮಟ್ಟ ಕಾಯ್ದುಕೊಳ್ಳಲು ಪ್ರತಿ ತಿಂಗಳು ಲೇಖನವನ್ನು ಬರೆದರು. ಪದಾರ್ಥ ಚಿಂತಾಮಣಿ ಎಂಬ ಸ್ಥಿರ ಶೀರ್ಷಿಕೆಯನ್ನು ಕೊನೆಯವರೆಗೂ ಮುಂದುವರಿಸಿದರು. ಇದಲ್ಲದೆ 'ತುಷಾರ'ವನ್ನೊಳಗೊಂಡು ಅನೇಕ ಕನ್ನಡ ಮಾಸಿಕಗಳಿಗೆ ನಿಯಮಿತವಾಗಿ ಬರೆದರು. ನಿವೃತ್ತಿಯ ನಂತರವೂ ಅವರಿಗೆ ಅನೇಕ ಸನ್ಮಾನಗಳು ಬಂದವು. ಒಮ್ಮೆ ದಕ್ಷಿಣ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ಕೂಡ ವಹಿಸಿದ್ದರು.

1970ರಲ್ಲಿ ನಾನು ಹುಬ್ಬಳ್ಳಿಯ ವಿಶ್ವೇಶ್ವರಯ್ಯ ಬಡಾವಣೆಯ ಹೌಸಿಂಗ್ ಬೋರ್ಡ್ ಮನೆಗೆ ವಾಸಕ್ಕೆ ಬಂದೆ. ಅದೇ ಬಡಾವಣೆಗೆ ಪಾವೆಂ ಅವರು ತಮ್ಮ ಪತ್ನಿ ಲಕ್ಷ್ಮಿಬಾಯಿ ಹಾಗೂ ಮಗನ ಜತೆ ಬಂದರು. ಅವರು, ನನ್ನ ಪತ್ನಿ ಸುಚೇತಾ ಹಾಡುತ್ತಿದ್ದ ಕರ್ನಾಟಕ ಸಂಗೀತವನ್ನು ಕೇಳಲು ನಮ್ಮ ಮನೆಗೆ ಆಗಾಗ ಬರುತ್ತಿದ್ದರು.

1992ರಲ್ಲಿ ರಾಷ್ಟ್ರಮಟ್ಟದ ಪ್ರತಿಷ್ಠಿತ ಪತ್ರಿಕೋದ್ಯಮ ಪ್ರಶಸ್ತಿಯಾದ 'ಭಗವಾನ ದಾಸ ಗೋಯೆಂಕಾ ಪತ್ರಿಕೋದ್ಯಮ ಪ್ರಶಸ್ತಿ' ಪಾ.ವೆಂ.ಅವರನ್ನು ಅರಸಿಕೊಂಡು ಬಂದಿತು. ಈ ಪ್ರಶಸ್ತಿ ಪ್ರಥಮ ಬಾರಿಗೆ ಕನ್ನಡದ ಪತ್ರಕರ್ತನೊಬ್ಬನಿಗೆ ಲಭಿಸಿತ್ತು. ಅದನ್ನು ಸ್ವೀಕರಿಸಲು ಮುಂಬಯಿಗೆ ಹೋಗಿದ್ದ ಪಾ.ವೆಂ. ಅನಿವಾರ್ಯ ಕಾರಣಗಳಿಂದ ಕಾರ್ಯಕ್ರಮ ರದ್ದಾಗಿದ್ದರಿಂದ ಬರಿಗೈಯಿಂದ ಹಿಂತಿರುಗಬೇಕಾಯಿತು.

ಈ ಪ್ರಶಸ್ತಿ ಪ್ರದಾನಕ್ಕೆ 1992ರ ಮಾರ್ಚ್ ತಿಂಗಳಲ್ಲಿ ದಿನ ಗೊತ್ತುಪಡಿಸಲಾಗಿತ್ತು. ಪಾ.ವೆಂ. ಅವರನ್ನು ಮುಂಬಯಿವರೆಗೂ ವಿಮಾನದಲ್ಲಿ ಕರೆತರಲು ಪತ್ರಿಕೆಯವರು ಸಿದ್ಧರಿದ್ದರು. ಅದಕ್ಕೆ ಅವರು ಇಷ್ಟಪಡದೆ ರೈಲಿನಲ್ಲಿ ಪ್ರಯಾಣ ಬೆಳೆಸಿದರು. ಮೂರು ದಿನಗಳ ಮೊದಲೇ ಅವರು ಮುಂಬಯಿ ತಲುಪಿದರು. ಕಾರ್ಯಕ್ರಮದ ಮುನ್ನಾ ದಿನ ದಿ. ಭಗವಾನದಾಸ ಮಾವ (ಪತ್ನಿ ಸರೋಜಳ ತಂದೆ) ತೀರಿಕೊಂಡ ಹಿನ್ನೆಲೆಯಲ್ಲಿ ಸಮಾರಂಭವನ್ನು ರದ್ದುಪಡಿಸಲಾಗಿದೆ ಎಂದು ಅವರಿಗೆ ತಿಳಿಸಲಾಯಿತು. ಪ್ರತಿಷ್ಠಿತ ಪ್ರಶಸ್ತಿಯನ್ನು ಸ್ವೀಕರಿಸಲು ಅತಿ ಹುರುಪಿನಿಂದ ಮುಂಬಯಿಗೆ ಬಂದಿದ್ದ ಅವರಿಗೆ ತೀವ್ರ ನಿರಾಸೆಯಾಯಿತು.

ಮುಂದೆ ಪ್ರಶಸ್ತಿಯನ್ನು ಸ್ವತಃ ಸ್ವೀಕರಿಸುವ ಅದೃಷ್ಟ ಅವರಿಗಿರಲಿಲ್ಲ. ಹಲವಾರು ತಿಂಗಳ ನಂತರ ಪ್ರಶಸ್ತಿ ಪ್ರದಾನ ಸಮಾರಂಭಕ್ಕೆ ಹೊಸದೊಂದು ದಿನವನ್ನು ಗೊತ್ತು ಮಾಡಿದಾಗ ಅದನ್ನು ಸ್ವೀಕರಿಸಲು ಪಾ.ವೆಂ. ಅವರೇ ಇರಲಿಲ್ಲ. 1992ರ ಮೇ 4ರಂದು ಅವರು ಕೊನೆಯುಸಿರೆಳೆದರು.

ಮುಂಬಯಿಯಿಂದ ಬರಿಗೈಯಿಂದ ಹಿಂತಿರುಗಿದ ಪಾ.ವೆಂ. ಅವರ ಆರೋಗ್ಯ ಹದಗೆಟ್ಟಿತು. ಸುಮಾರು 18 ವರ್ಷಗಳ ಹಿಂದೆ ಜಟಿಲವಾದ ಶಸ್ತ್ರಚಿಕಿತ್ಸೆಯಿಂದ ಪುನರ್ಜನ್ಮ ತಾಳಿದ್ದ ಅವರ ಆರೋಗ್ಯ ದಿನೇ ದಿನೆ ಕ್ಷೀಣಿಸತೊಡಗಿತು. ಅವರು ಈ ರೀತಿ ಅಸ್ವಸ್ಥರಿರುವಾಗಲೇ ಮಿಂಚಿನ ಬಳ್ಳಿಯ ಪ್ರಕಾಶಕರಾದ ಸಹೋದ್ಯೋಗಿ ಪತ್ರಕರ್ತ ಸುರೇಂದ್ರ ದಾನಿಯವರು ಪಾ.ವೆಂ.ರವರ ಲೇಖನಗಳ ಸಂಗ್ರಹ 'ಮುಂಜಾವು' ಎಂಬ ಪುಸ್ತಕದ ಬಿಡುಗಡೆ ಸಮಾರಂಭವನ್ನು ಹುಬ್ಬಳ್ಳಿಯ ಶಂಕರ ಮಠದಲ್ಲಿ ವಿಮರ್ಶಕ ದಿ. ಹಾ.ಮಾ. ನಾಯಕರ ಅಧ್ಯಕ್ಷತೆಯಲ್ಲಿ ಏರ್ಪಡಿಸಿದ್ದರು. ಅವರು ಇದಕ್ಕೆ ಹಾಜರಾಗಲು ಒಮ್ಮೆಲೇ ನಿರ್ಧರಿಸಿ ನನಗೂ ಅವರ ಅಭಿಮಾನಿಗಳಾದ ಕೆ.ವಿ. ಪೈ (ಪ್ರಸಿದ್ಧ ಎಲ್.ಐ.ಸಿ. ಏಜೆಂಟ್) ಇವರಿಗೂ ಹೇಳಿ ಕಳಿಸಿದರು. ನಾವಿಬ್ಬರೂ ಅವರನ್ನು ಕಾರ್ಯಕ್ರಮಕ್ಕೆ ಕರೆದುಕೊಂಡು ಬಂದೆವು. . ಕೈಕಾಲುಗಳು ನಡುಗುತ್ತಿದ್ದರೂ ನಿಂತುಕೊಂಡೇ 5-10 ನಿಮಿಷ ಮಾತಾಡಿದರು.

ಕಾರ್ಯ ಮುಗಿದ ನಂತರ ಅವರನ್ನು ನಾನು ಹುಬ್ಬಳ್ಳಿಯ ವಿವೇಕಾನಂದ ಆಸ್ಪತ್ರೆಗೆ ದಾಖಲಿಸಿದೆ. ಅಲ್ಲಿ ಒಂದು ವಾರವಷ್ಟೇ ಇದ್ದರು. ಅವರಲ್ಲಿನ ಜ್ಯೋತಿ ನಂದಿ ಹೋಯಿತು. ಕನ್ನಡ ಸಾಹಿತ್ಯ ಲೋಕದ ನಕ್ಷತ್ರವೊಂದು ಕಣ್ಮರೆಯಾಗಿ ಎಲ್ಲರನ್ನೂ ಶೋಕದಲ್ಲಿ ಮುಳುಗಿಸಿತು.

ಪ್ರಶಸ್ತಿ ಪ್ರದಾನ ಸಮಾರಂಭಕ್ಕೆ ಆಚಾರ್ಯರ ಮನೆಯವರಾರೂ ಹೋಗಲಿಲ್ಲ. ಒಂದು ಲಕ್ಷ ರೂ.ಗಳ ಚೆಕ್ ಮಗ ಮುರುಳಿಯ ಕೈಗೆ ಅಂಚೆಯ ಮೂಲಕ ಸೇರಿತು. ತಂದೆಯನ್ನು ಕಳೆದುಕೊಂಡ ಆತನಿಗೆ ಪ್ರಶಸ್ತಿಯ ಬಗ್ಗೆ ಆಸ್ಥೆ ಇರಲಿಲ್ಲ. ಪ್ರಶಸ್ತಿಗೆ ಸಂಬಂಧಿಸಿದ ಫಲಕ, ಶಾಲು, ಕರಂಡಕಗಳನ್ನು ಪತ್ರಿಕೆಯವರು ಮುಂಬಯಿಯಿಂದ ಬೆಂಗಳೂರಿನ ಕಚೇರಿಗೆ ಕಳಿಸಿಕೊಟ್ಟರು. ಆಚಾರ್ಯರ ಮೊಮ್ಮಗನೊಬ್ಬ ಎಷ್ಟೋ ಸಮಯದ ನಂತರ ಅವುಗಳನ್ನು ಹುಬ್ಬಳ್ಳಿಯ ಮನೆಗೆ ಸೇರಿಸಿದ.

# ಆಚಾರ್ಯರ್ ಪಾವೆಂ, ಪದಶರಧಿಯ ನಾವೆಂ!



**ಪಾಡಿಗಾರು ವೆಂಕಟರಮಣ ಆಚಾರ್ಯರು ಹುಟ್ಟಿ ಈ ವರ್ಷಕ್ಕೆ ನೂರು ತುಂಬಿರುವ ಸಂದರ್ಭದಲ್ಲಿ ಉಡುಪಿಯಲ್ಲಿ ಸಂಸ್ಮರಣ ಕಾರ್ಯಕ್ರಮಗಳು ನಡೆಯುತ್ತಿವೆ. ಲಕ್ಷ್ಮಿಯ ಅವಕೃಪೆಗೆ ಒಳಗಾದರೂ ಸರಸ್ವತಿಯ ಮಾನಸಪುತ್ರನಾಗಿ, ಪತ್ರಿಕಾರಂಗದ ಭೀಷ್ಮನಾಗಿ ಕನ್ನಡದ ಪಂಡಿತ-ಪಾಮರರಿಬ್ಬರಿಗೂ ಸಮಾನವಾಗಿ ದಕ್ಕಿದ ಪಾವೆಂ ಬರೆದದ್ದನ್ನೆಲ್ಲ ಒಟ್ಟುಹಾಕಿದರೆ ಅದು ಹತ್ತುಸಾವಿರ ಪುಟಗಳಷ್ಟು ದೊಡ್ಡ ಸಂಪತ್ತು! ಸಾವಿರದೈನೂರಕ್ಕೂ ಮಿಕ್ಕಿ ಹರಟೆಲೇಖನಗಳನ್ನು ಬರೆದ ಪಾವೆಂ ಆಚಾರ್ಯರು ಕಾವ್ಯ, ಅನುವಾದ, ವಿಜ್ಞಾನ, ಇತಿಹಾಸ, ರಾಜಕಾರಣ, ಭಾಷಾಶಾಸ್ತ್ರ - ಹೀಗೆ ಯಾವುದನ್ನೂ ಬಿಟ್ಟವರಲ್ಲ. ಮುಳುಗಿದಲ್ಲೆಲ್ಲ ಮುತ್ತುಗಳನ್ನೇ ಆಯ್ದುತಂದ ಛಲದಂಕಮಲ್ಲ ಬೇರೆ. ಪಾವೆಂ ಈಗ ಇದ್ದಿದ್ದರೆ ಹೇಗಿರುತ್ತಿದ್ದರು? ನಮ್ಮ ಪ್ರಶ್ನೆಗಳಿಗೆ ಹೇಗೆ ಉತ್ತರಿಸುತ್ತಿದ್ದರು? ಕನಸಿನಲ್ಲಿ ನಡೆದ ಒಂದು ಸಂದರ್ಶನ ಇಲ್ಲಿದೆ.**

■ರೋಹಿತ್ ಚಕ್ರತೀರ್ಥ

**ಆಚಾರ್ಯರೇ, ನಿಮ್ಮ ಹುಟ್ಟು ಎಲ್ಲಾಯಿತು? ಬಾಲ್ಯ ಹೇಗೆ ಕಳೆಯಿತು? ಹೇಳುತ್ತೀರಾ?**

ಹುಟ್ಟು ಮಲೆಘಟ್ಟ ಸೋಪಾನ ಕೆಳಪಟ್ಟಿಯಲಿ, ಉರುಳು ಮೂರೇ ಉರುಳು ಕಡಲ ಕುದಿತದ ಎಣ್ಣೆ ಕೊಪ್ಪರಿಗೆಗೆ! ಅಲಂಕಾರ ಬಿಟ್ಟು ಹೇಳುವುದಾದರೆ ನಾನು ಹುಟ್ಟಿದ್ದು ಉಡುಪಿಯಲ್ಲಿ. ಪಾಡಿಗಾರು ಅಂತ ಅಲ್ಲೊಂದು ಸಣ್ಣ ಊರು. ಉಡುಪಿಯವರೇ ಆದ ನಿಮಗೆ ಅದು ಗೊತ್ತಿರಬಹುದು. ಅಲ್ಲಿ ಫೆಬ್ರವರಿ 6, 1915ರಲ್ಲಿ ನಾನು ಹುಟ್ಟಿದೆ. ಹಸುವಿನ ಕೊಟ್ಟಿಗೆಯಲ್ಲಿ ಏಸು ಹುಟ್ಟಿದಾಗ ನಕ್ಷತ್ರವಾದರೂ ಬೆಳಗಿತು, ನನಗೆ ಅಂತಹ ಭಾಗ್ಯವೂ ಇರಲಿಲ್ಲ. ಬಡ ಮಾಧ್ವ ಕುಟುಂಬದಲ್ಲಿ ಅವ-ತರಿಸಿದ ಸಾಮಾನ್ಯಜನ್ಮ ನನ್ನದು. ಬಾಲ್ಯವನ್ನು ಬಡತನದಲ್ಲೇ ಕಳೆದೆ. ಎಸ್ಸೆಸ್ಸೆಲ್ಸಿ ಮುಗಿಸಿದ ಮೇಲೆ ಮುಂದೆ ಓದಿಸಲು ಅಪ್ಪನಿಗೆ ಸಾಧ್ಯವಿರಲಿಲ್ಲವಾದ್ದರಿಂದ ಹೋಟೇಲ್ ಮಾಣಿಯಾದೆ. ಶಾಲೆಯಲ್ಲಿ ಮಾಸ್ತರಿಕೆ ಮಾಡಿದೆ. ಅಂಗಡಿಗಳಲ್ಲಿ ಲೆಕ್ಕಪತ್ರ ಬರೆದೆ. ಉದರನಿಮಿತ್ತಂ ಬಹುಕೃತವೇಷಗಳನ್ನು ಧರಿಸಿದೆ. ಕೊನೆಗೆ ನಮ್ಮ ಕುಟುಂಬ ಉಡುಪಿ ಬಿಟ್ಟು ಹುಬ್ಬಳ್ಳಿಗೆ ವಲಸೆ ಹೋದಾಗ, ಅದಕ್ಕಂಟಿಕೊಂಡ ನಾನೂ ಹುಬ್ಬಳ್ಳಿವಾಸಿಯಾದೆ.

**ಮತ್ತೆ ಈ ಪತ್ರಿಕಾ ವ್ಯವಸಾಯ ಎಲ್ಲ ಹೇಗೆ ಶುರುವಾದದ್ದು?**

ನಾನು ಲೋಕಶಿಕ್ಷಣ ಟ್ರಸ್ಟ್ ಸೇರಿದ ಮೇಲೆ ನನ್ನ ಬರವಣಿಗೆಯ ಗ್ರಾಫ್ ಶುರುವಾಯಿತು ಅಂತ ಕೆಲವರು ಹೇಳುತ್ತಾರೆ. ಆದರೆ, ಅದಕ್ಕೆ ಮೊದಲೇ ಮಣಿಪಾಲದಲ್ಲಿರುವಾಗ ಪೈಗಳ ಪ್ರೆಸ್ಸಿಂದ ಬರುತ್ತಿದ್ದ 'ಅಂತರಂಗ' ಎಂಬ ಪತ್ರಿಕೆಯನ್ನು ರೂಪಿಸಿದ ಕಿಲಾಡಿ ನಾನೇ! ಇದು 1938ರ ಮಾತು. ಹೀನಸುಳಿ ಎಷ್ಟು ಬೋಳಿಸಿದರೂ ಹೋಗದು ಎನ್ನುತ್ತಾರೆ, ಹಾಗೆ ನೋಡಿ, ಈ ಬರವಣಿಗೆಯ ಹುಚ್ಚು ಜೀವನಪೂರ್ತಿ ಕಚ್ಚಿಹಿಡಿಯಿತು. ಹುಬ್ಬಳ್ಳಿಗೆ ಬಂದಮೇಲೆ ಲೋಕಶಿಕ್ಷಣ ಟ್ರಸ್ಟಿನ ಸಂಪರ್ಕ ಬಂತು. ಅಲ್ಲಿನ ಪ್ರೆಸ್ಸಿನ ಮೇಲ್ವಿಚಾರಕನಾಗಿ ಸೇರಿಸಿಕೊಂಡರು. ಬರವಣಿಗೆಯೂ ಗೊತ್ತು ಎಂದು ಆ ಕಲೆಯನ್ನೂ ಪ್ರದರ್ಶಿಸಿದ ಮೇಲೆ ಕರ್ಮವೀರದಲ್ಲಿ ಸಹಾಯಕ ಸಂಪಾದಕನಾಗಿ ಇಟ್ಟುಕೊಂಡರು. ರೀಡರ್ಸ್ ಡೈಜೆಸ್ಟಿನ ಮಾದರಿಯಲ್ಲಿ ಕನ್ನಡದಲ್ಲೂ ಒಂದು ಡೈಜೆಸ್ಟು ಬರಬೇಕು ಎಂದು ಸಂಕಲ್ಪಿಸಿ 1956ರಲ್ಲಿ ಕಸ್ತೂರಿ ಪ್ರಾರಂಭಿಸಿದಾಗ, ಅದರ ಮೊದಲ ಬೆಳೆ ತೆಗೆಯಲು ನೇಗಿಲು ಹೊತ್ತವನು ನಾನೇ. ಮುಂದೆ 18 ವರ್ಷಗಳ ಕಾಲ ಅದರ ಸಂಪಾದಕನಾಗಿ ಕೆಲಸ ಮಾಡಿದೆ. ಬಗೆಬಗೆಯ ಲೇಖಕರನ್ನು ಹುರಿದುಂಬಿಸಿ ಬರೆಸಿದೆ. ಸಾಲ ತಂದು ತುಂಬಿದ್ದೂ ಸಾಲದಾಗ ನಾನೇ ಲಾಂಗೂಲಾಚಾರ್ಯನಾಗಿ ಮುರಲೀಧರನಾಗಿ ರಾಧಾಕೃಷ್ಣನಾಗಿ ಬಗೆಬಗೆಯ ಅವತಾರವೆತ್ತಿದೆ. ಹೇಗೂ ದಶಾವತಾರ ಮೆರೆದ ವೆಂಕಟರಮಣ ನೋಡಿ!

**ನೀವಷ್ಟೇ ಅವತಾರ ಎತ್ತಿದ್ದಲ್ಲ, ಹಲವು ಪ್ರತಿಭೆಗಳು ಕನ್ನಡದಲ್ಲಿ ಹುಟ್ಟಿಬರುವಂತೆ ಮಾಡಿದಿರಿ. ಕೃಷ್ಣಾನಂದ ಕಾಮತ್, ಜಿ.ಟಿ.ನಾರಾಯಣರಾಯರು, ಸಂತೋಷ ಕುಮಾರ ಗುಲ್ವಾಡಿಯವರು - ಹೀಗೆ ಕನ್ನಡದಲ್ಲಿ ಬೆಳೆದ ದೊಡ್ಡದೊಡ್ಡ ಹೆಸರುಗಳೆಲ್ಲ ನಿಮಗೆ ಋಣಿಯಾಗಿದ್ದರು.**

ಅದು ಅವರ ದೊಡ್ಡತನ. ಅವರಿಗೆಲ್ಲ ನಾನು ದ್ರೋಣಾಚಾರ್ಯನಂತೆ ದೂರದಲ್ಲಿ ನಿಂತು ಪ್ರೇರೇಪಿಸಿದ ಗುರು ಅಷ್ಟೆ. ಸಾಧನೆ ಎಲ್ಲ ಅವರದ್ದೇ! ಖುಷಿಯ ವಿಚಾರವೆಂದರೆ ಈ ನನ್ನ ಶಿಷ್ಯರು ನಾನು ಕೇಳದೇ ಇದ್ದರೂ ಹೆಬ್ಬೆರಳು ಕತ್ತರಿಸಿಕೊಡಲು ತಯಾರಾಗಿದ್ದರು ಎನ್ನುವುದು. ನಾರಾಯಣರಾಯರು ಅವರದ್ದೇ ಶೈಲಿಯಲ್ಲಿ

ಪಾವೆಂ ಪೆಸರ್ ಕೇಳಿ ಬಲ್ಲೆಯೇಂ? ಪರಿಶುದ್ಧ  
ಜೀವನಕೆ ತಾಣವನ್, ಕರ್ತವ್ಯ ಮೇರವನ್,  
ಸೇವಾಪರಾಯಣನ್, ಪರಗುಣೋತ್ತೇಜಕನ್  
ಭಾವಪ್ರಪಂಚದಾ ಮಾಂತ್ರಿಕನ್ ಅತ್ರಿಸೂನು

ಅಂತತಮ್ಮದೊಂದುಕೃತಿಯಲ್ಲಿಬರೆದುಅದನ್ನುನನಗೆಅರ್ಪಿಸಿದರು. ಅಲ್ಲದೆ ಗೋಪಾಲಕೃಷ್ಣ ಅಡಿಗರು ಮುಂತಾದ ದೊಡ್ಡವರನ್ನು ಸೇರಿಸಿ ನನ್ನ ಹೆಸರಲ್ಲಿ ಸ್ಮರಣಸಂಚಿಕೆ ತಂದರು. 1977ರ ಸಮಯ ಅದು. ಅಷ್ಟರಲ್ಲಾಗಲೇ ಎರಡೆರಡು ಶಸ್ತ್ರಚಿಕಿತ್ಸೆ ಮಾಡಿಸಿಕೊಂಡು ದೈಹಿಕವಾಗಿ



ಆರ್ಥಿಕವಾಗಿ ಹೈರಾಣಾಗಿದ್ದ ನನಗೆ ಭರವಸೆಯ ಬೆಳಕಿನಂತೆ ಇಪ್ಪತ್ತೇಳು ಸಾವಿರ ರುಪಾಯಿಯ ಸಂಚಿ ಒಪ್ಪಿಸಿದರು. ದ್ರೋಣನಿಗೆ ಏಕಲವ್ಯ ಹೆಬ್ಬೆರಳು ಕತ್ತರಿಸಿಕೊಟ್ಟದ್ದು ಇದರ ಮುಂದೆ ಏನು ದೊಡ್ಡ ಕಾಣಿಕೆ!

**ನಿಮ್ಮ ಬರವಣಿಗೆಯತ್ತ ಹೊರಳುವುದಾದರೆ, ನೀವು ಪುಂಖಾನುಪುಂಖವಾಗಿ ವಿಜ್ಞಾನಲೇಖನಗಳನ್ನು ಬರೆದಿರಿ. ಇದಕ್ಕೆ ಪ್ರೇರಣೆ ಏನು? ವಿಜ್ಞಾನಿಯಾಗುವ ಆಸೆ ಏನಾದರೂ ಇತ್ತಾ?**

ಬೇಡ, ದಮ್ಮಯ್ಯ! ಓ ವಿಜ್ಞಾನಿ,  
ಈ ಅಲರ ಪಕಳೆಯನು ತೂಗದಿರು ನನ್ನೆದುರು  
ನಿನ್ನ ಅತ್ಯಾಧುನಿಕ ತ್ರಾಸಿನಲಿ;  
ಹೇಳದಿರು ಅದರ ನಿರ್ದಿಷ್ಟ ಭಾರವ ನನಗೆ  
ನಿನ್ನ ಮೆಟ್ರಿಕ್ ತೂಕದಲ್ಲಿ  
ದಶಾಂಶ ಚುಕ್ಕಿಯ ಬಲಗಡೆಗೆ  
ಪಂಚಮಸ್ಥಾನಪರ್ಯಂತ ಬಾಗಿಸಿ ಸರಿಮಾಡಿ!

ಎಂದು ಬರೆದುಕೊಂಡವನು ನಾನು. ಹಾಗಾಗಿ ಈ ಮನುಷ್ಯನಿಗೆ ವಿಜ್ಞಾನ ಎಂದರೆ ಅಲರ್ಜಿ ಅಂತ ನನ್ನ ಓರಗೆಯ ಕೆಲಮಿತ್ರರು ತೀರ್ಮಾನಿಸಿದ್ದುಂಟು. ಆದರೆ, ವಿಷಯ ಗೊತ್ತುಂಟೋ. ನನಗೆ ಒಳಗೊಳಗೆ ವಿಜ್ಞಾನಿಯಾಗಬೇಕಂತ ಇದ್ದದ್ದು ನಿಜ! ಆದರೆ, ಬಡತನದ ಕಾರಣದಿಂದ ಓದು ಒಕ್ಕಾಲಾಗಿ ಬುದ್ಧಿ ಮುಕ್ಕಾಲಕ್ಕೇ ನಿಂತುಹೋದದ್ದರಿಂದ ವಿಜ್ಞಾನವನ್ನು ದೂರದ ಬೆಟ್ಟ ಎಂಬಂತೆ ಆರಾಧಿಸುವುದಕ್ಕೆ ತೃಪ್ತಿಪಡಬೇಕಾಯಿತಷ್ಟೆ. ಆದರೇನಂತೆ, ಅದರ ಕೋನಕೋನಗಳನ್ನು ತಿರುಗಿಸಿಮುರುಗಿಸಿ ಸಾವಿರಾರು ಲೇಖನಗಳನ್ನು ಬರೆದು ಸೇಡು ತೀರಿಸಿಕೊಂಡೆ ಎಂಬ ತೃಪ್ತಿಯುಂಟು. ಇನ್ನು ಅದಕ್ಕೆ ಪಟ್ಟ ಕಷ್ಟ ಕೇಳುತ್ತೀರೋ, ದೇವರಿಗೇ ಪ್ರೀತಿ! ಆ ಕಾಲಕ್ಕೆ ನಮಗೆ ಗೂಗಲೇಶ್ವರ ಎಲ್ಲಿ ಸಿಗಬೇಕು? ಎಲ್ಲಿಂದಲೋ ತರಿಸುವ ಸೈಂಟಿಫಿಕ್ ಅಮೆರಿಕನ್‌ನಂತಹ ಪತ್ರಿಕೆಯನ್ನು ಇಟ್ಟುಕೊಂಡು, ಯಾವ್ಯಾವುದೋ ಗ್ರಂಥಾಲಯಗಳಿಗೆ ಎಡತಾಕಿಕೊಂಡು, ಪಂಡಿತರ ಬೆನ್ನುಬಿದ್ದು ಕಾಡಿಬೇಡಿ ವಿಷಯಸಂಗ್ರಹಣೆ ಮಾಡಿ ಬರೆಯಬೇಕು. ಅದಕ್ಕೇ ನೋಡಿ, ನನ್ನ ವಿಜ್ಞಾನಲೇಖನಗಳಲ್ಲಿ ಅಲ್ಲಿಲ್ಲಿ ಒಂದೆರಡು ಪ್ರಮಾದಗಳು ನುಸುಳಿರಬಹುದು. ಆ ಮಿತಿಯ ಪರಿವೆ ನನಗುಂಟು. ಆದರೆ, ಬರೆಯುವದನ್ನಷ್ಟೂ ಸೋಸಿ ಜರಡಿಹಿಡಿದು ಚಿನ್ನ ಶುದ್ಧೀಕರಿಸಿ ತೆಗೆದಷ್ಟು ಶ್ರಮಹಾಕಿ ಬರೆದಿದ್ದೇನೆ ಎಂದು ಹೇಳಬಲ್ಲೆ. ಇನ್ನು ಅಂತಹ ಬರಹಗಳು ಕಸ್ತೂರಿಗೆ ಅನಿವಾರ್ಯವೂ ಆಗಿತ್ತಲ್ಲ, ಪತ್ರಕರ್ತನಾದ ಮೇಲೆ ಕಾಶಿಯ ಗಂಗೆಯಲ್ಲಿ, ಊರ ಹೊಂಡದಲ್ಲಿ ಏಕಪ್ರಕಾರ ಮುಳುಗು ಹಾಕಲು ಕಲಿಯಬೇಕಲ್ಲ!

**ಇದರ ಬಗ್ಗೆ ಇನ್ನೊಂದಿಷ್ಟು ಹೇಳಬೇಕೆನಿಸುತ್ತದೆ. ಉದಾಹರಣೆಗೆ, ನೀವು 1960ರಲ್ಲಿ ಕಾಲರಾಯನ ಕುಟಿಲತನ ಎನ್ನುವ ಒಂದು ವಿಜ್ಞಾನಲೇಖನ ಬರೆದಿರಿ. ಸಾಪೇಕ್ಷ ಸಿದ್ಧಾಂತದ ಅನ್ವಯಗಳ ಬಗ್ಗೆ ಬರೆದ ಬರಹ ಅದು. ಓದಿ ನೋಡಿದರೆ ಇದ್ಯಾರೋ ಭೌತಶಾಸ್ತ್ರದ ಸ್ನಾತಕೋತ್ತರ ಪದವೀಧರ ಬರೆದಿರಬೇಕು ಎನ್ನುವ ಅನುಮಾನ ಬರುವಂತಿದೆ. ಇಂತಹ ತಾಳ್ಮೆ, ವಿಷಯಜ್ಞಾನ, ಸರಳತೆಯ ಸಿದ್ಧಿ ಹೇಗೆ ಸಾಧ್ಯವಾಯಿತು?**

ಅನಂತಮೂರ್ತಿಗಳು ಒಂದು ಮಾತು ಎಲ್ಲೋ ಬರೆದಿದ್ದಾರೆ ನನ್ನ ಮೇಲೆ. ವಿಸ್ಮಯ ಮತ್ತು ಅನುಮಾನ - ಈ ಎರಡೂ ಶಕ್ತಿಗಳನ್ನು ಕೂಡಿಸಿಕೊಂಡವರನ್ನು ಕಂಡರೆ ನನಗೆ ಆಶ್ಚರ್ಯ. ಬರಿ ವಿಸ್ಮಯದ ಬೋಳೆ ಸ್ವಭಾವದ ಜನ ತಮ್ಮ ಶಕ್ತಿ ಉತ್ಕಟವಾಗಿದ್ದಾಗ ಅನುಭವದ ತನ್ಮಯತೆಯನ್ನು ಉಂಟುಮಾಡಬಲ್ಲ ಕೃತಿಗಳನ್ನು ಕೊಟ್ಟಾರು; ಉಳಿದ ಸಮಯ ಇವರ ಮಾತುಗಳು ಬರೀ ಊದಿಕೊಂಡಿಡುತ್ತವೆ. ಅನುಮಾನ ಮಾತ್ರ ಸಾಧ್ಯವಿರುವ ಸಿನಿಕರು ಭಾಷೆಯನ್ನು ಕುಹಕಕ್ಕಾಗಿ ಬಳಸುವಾಗ ಚುರುಕಾಗಿ ರುಚಿಯಾಗಿ ಬರೆಯುತ್ತಾರೆ. ಆದರೆ ಇಂಥವರು ಏನನ್ನು ಕಂಡಾರು? ಕಾಣಿಸಿಯಾರು? ಪರಚುವ, ಪರಚಿಕೊಳ್ಳುವ ಇವರ ಸುಖ ಕೊನೆಗೂ ದೊಡ್ಡ ಬೋರೇ ಸರಿ. ನನ್ನ ವಾರಿಗೆಯವರಿಗೆ ತಂದೆಯಾಗಬಹುದಾದ ವಯಸ್ಸಿನ ಪಾವೆಂ ತಮ್ಮ ವಿಚಾರದಲ್ಲಿ ಬರವಣಿಗೆಯಲ್ಲಿ ವಿಸ್ಮಯ ಮತ್ತು ಅನುಮಾನ, ಗಾಂಭೀರ್ಯ ಮತ್ತು ಹಾಸ್ಯ ಒಟ್ಟಾಗಿ ಉಳಿಸಿಕೊಂಡು ಬಂದದ್ದು ನೋಡಿದರೆ ನನಗೆ ಅವರ ಬಗ್ಗೆ ತುಂಬ ಅಭಿಮಾನವೆನ್ನಿಸುತ್ತದೆ. - ಅಂತ. ಬಹುಶಃ ಅವರು ನನ್ನ ವಿಜ್ಞಾನ ಲೇಖನಗಳನ್ನು ನೋಡಿ ಈ ಮಾತು ಆಡಿದ್ದಾರೋ ಅನ್ನುವಷ್ಟು ಅವು ಹೊಂದಿಕೊಳ್ಳಾವೆ. ನಿಮಗೆ ವಿಜ್ಞಾನ ಇರಲಿ ಏನೇ ಇರಲಿ, ಬರೆಯುವಾಗ ಅನುಮಾನ ಮತ್ತು ವಿಸ್ಮಯ ಎರಡೂ ಇರಬೇಕಾಗ್ತದೆ. ಆಗ ಮಾತ್ರ ವಿಷಯಕ್ಕೆ ಪ್ರಾಮಾಣಿಕನಾಗಿರುವ ಶಿಸ್ತು ಮೂಡಲಿಕ್ಕೆ ಸಾಧ್ಯ.

**ಇನ್ನು ನಿಮ್ಮ ಪದಾರ್ಥ ಚಿಂತಾಮಣಿ ಕಡೆ ಬರೋಣ ಆಚಾರ್ಯರೇ. ಇದರ ಕಲ್ಪನೆಯಾದರೂ ನಿಮಗೆ ಹೇಗೆ ಬಂತೂಂತ!**

ಹೇಳಿಕೇಳಿ ನಾನೊಬ್ಬ ಪತ್ರಿಕೋದ್ಯೋಗಿ, ದಿನನಿತ್ಯ ಪದಗಳೊಡನೆ ಸಹಜೀವನ ನಡೆಸುವವನು. ಶಬ್ದಗಳ ಬಗ್ಗೆ ಮೊದಲಿಂದಲೂ ಕುತೂಹಲ ಇಟ್ಟುಕೊಂಡಿದ್ದ ನನಗೆ ನಿತ್ಯಜೀವನದಲ್ಲಿ ಪದಗಳಿಗೂ ಅರ್ಥಗಳಿಗೂ ಇರುವ ಸಂಬಂಧಗಳನ್ನು ಹಿಂಜಿನೋಡುವ ಹವ್ಯಾಸ ಬಹಳ ಪೂರ್ವದಲ್ಲೇ ಗೀಳಾಗಿ ಅಮರಿಕೊಂಡಿತು.

2ನೇ ಪುಟಕ್ಕೆ

ಓದುವ ಲೋಕಕೊಂದು ಓದುವ ವಿರಾಮ

# ವಿರಾಮ

ವಿಶ್ವವಾಣಿ
07.02.2016

ಆಸೆಯೆಂಬ ತಳ ಒಡೆದ ದೋಣಿಯಲಿ
ದೂರತೀರಯಾನ
ಯಾರ ಲೀಲೆಗೋ ಯಾರೋ ಏನೋ
ಗುರಿ ಇರದೆ ಬಿಟ್ಟ ಬಾಣ
-ಗೋಪಾಲಕೃಷ್ಣ ಅಡಿಗ

# ಪದ ಯಾತ್ರಿ ಪಾವೆಂ

## ಕನ್ನಡದ ಕಸ್ತೂರಿ



ಭಾಷೆಯ ಬಗೆಗಿನ ಶ್ರದ್ಧೆ ಹಾಗೂ ಬದುಕಿನ ಬಗ್ಗೆ ಇದ್ದ ಪ್ರೀತಿಯಿಂದ ಬೆರಗುಹುಟ್ಟಿಸುವ ಬಹುಮುಖಿ ಪ್ರತಿಭೆ ಪಾವೆಂ ಆಚಾರ್ಯ ಅವರದ್ದು. ಅವರು ಹುಟ್ಟಿ ಈಗ ನೂರು ವರ್ಷ. ಪರ್ತಕರ್ತ, ಕವಿ, ಕತೆಗಾರ, ವಿದ್ವಾಂಸ ಎಲ್ಲವೂ ಆಗಿದ್ದ ಅವರ 'ಪದ'ಯಾತ್ರೆಯನ್ನು ಒಂದು ಜಾಣ ಪದದಲ್ಲಿ ಹಿಡಿಯುವುದು ಕಷ್ಟ. ಹಾಗೆ ಹಿಡಿಯಲೇಬೇಕೆಂದರೆ ಕನ್ನಡದ 'ಕಸ್ತೂರಿ'ಎನ್ನಬಹುದು.

ವಿಶ್ವೇಶ್ವರ ಭಟ್

ಪಕ್ಷಿಗಳು ಒಂದು ಕಾಳನ್ನು ಹುಡುಕಿಕೊಂಡು ನೂರಾರು ಮೈಲಿ ಹಾರಿಹೋಗಿ ಗೂಡು ಸೇರುತ್ತವೆ. ಪಾವೆಂ ಆಚಾರ್ಯರು ಒಂದು ಪದದ ಸರಿಯಾದ ಅರ್ಥ ತಿಳಿಯಲು ನೂರಾರು ಮೈಲಿ ಹೋಗಿ ಬರುತ್ತಿದ್ದರು. ಅದು ಪ್ರಾದೇಶಿಕ ನುಡಿಗಟ್ಟಾಗಿದ್ದರೆ, ಅದೇ ಪ್ರದೇಶಕ್ಕೆ ಹೋಗಿ ನಾಲ್ಕು ಜನರನ್ನು ಕೇಳಿ ಸರಿಯಾದ ಅರ್ಥ ತಿಳಿದು ಬರೆಯುತ್ತಿದ್ದರು. ಯಾರೋ ಒಬ್ಬಿಬ್ಬರು ಹೇಳಿದರೆ, ಅದೇ ನಿಜವೆಂಬ ತೀರ್ಮಾನಕ್ಕೆ ಬರುತ್ತಿರಲಿಲ್ಲ. ವಿದ್ವಾಂಸರು, ಸಂಸ್ಕೃತ ಪಂಡಿತರು, ಭಾಷಾತಜ್ಞರನ್ನು ಕೇಳುತ್ತಿದ್ದರು. ಇವರೆಲ್ಲರ ಅಭಿಪ್ರಾಯ ಪಡೆದ ನಂತರವೇ ತಮ್ಮ ಪ್ರಸಿದ್ಧ 'ಪದಾರ್ಥ ಚಿಂತಾಮಣಿ' ಅಂಕಣದಲ್ಲಿ ಬರೆಯುತ್ತಿದ್ದರು. ಒಂದು ಪದದ ಅರ್ಥ ಹುಡುಕಲು ಅವರು ಅದೆಷ್ಟು ಊರುಗಳನ್ನು ಅಲೆದಿದ್ದರೋ?!

ಒಮ್ಮೆ ಕೆಲಸದ ನಿಮಿತ್ತ ಬೆಂಗಳೂರಿಗೆ ಬಂದಿದ್ದರು. ಬಂದ ಕೆಲಸ ಮುಗಿದ ಬಳಿಕ, ತಮ್ಮ ಡೈರಿಯನ್ನು ತಡಕಾಡುವಾಗ, ಬೆಂಗಳೂರಿಗೆ ಹೋದಾಗ ಈ ಪದಗಳ ಅರ್ಥವನ್ನು ಬಲ್ಲವರಿಂದ ಕೇಳಿ ತಿಳಿಯಬೇಕು ಎಂದು ಪಟ್ಟಿ ಮಾಡಿಕೊಂಡ ಟಿಪ್ಪಣಿ ಸಿಕ್ಕಿತು. ಆ ಪೈಕಿ ಮಾತಾವಿತಾಯ್ ಎಂಬ ಪದವೂ ಒಂದಾಗಿತ್ತು. 'ಸಂಯುಕ್ತ ಕರ್ನಾಟಕ' ಕಾರ್ಯಾಲಯದಲ್ಲಿ ಕೆಲವು ಸಹೋದ್ಯೋಗಿಗಳನ್ನು ಕೇಳಿದಾಗ ಯಾರಿಂದಲೂ ಸಮರ್ಪಕ ಉತ್ತರ ದೊರೆತಿರಲಿಲ್ಲ. ವೇಮಗಲ್ ಗುಂಡಾಚಾರ್ ಅವರನ್ನು ಕೇಳಿದರೆ ಅವರು ಹೇಳಿಯಾರು ಎಂದು ಯಾರೋ ಹೇಳಿದರು. ಆದರೆ ಗುಂಡಾಚಾರ್ ಹಿರಿಯೂರಿನಲ್ಲಿ ನೆಲೆಸಿದ್ದಾರೆಂಬ ವಿಷಯ ತಿಳಿಯಿತು. ಬೆಂಗಳೂರಿನಿಂದ ವಾಪಸ್ ಹುಬ್ಬಳ್ಳಿಗೆ ಹೋಗುವಾಗ ಹಿರಿಯೂರಿನಲ್ಲಿ ಇಳಿದು ಗುಂಡಾಚಾರ್ ಅವರನ್ನು ಕಂಡು ಆ ಪದದ ಅರ್ಥವನ್ನು ಅವರೊಂದಿಗೆ ಚರ್ಚಿಸಿ ತಿಳಿಯಲು ಪಾವೆಂ ತೀರ್ಮಾನಿಸಿದರು.

ಸರಿ. ಹಿರಿಯೂರು ಬಸ್ ನಿಲ್ದಾಣದಲ್ಲಿ ಇಳಿದು, ಗುಂಡಾಚಾರ್ ಮನೆಯ ವಿಳಾಸ ಪತ್ತೆ ಮಾಡಿದರು. ಬಹಳ ಪ್ರಯಾಸಪಟ್ಟು ಅವರ ಮನೆಗೆ ಹೋಗಿ ಬಾಗಿಲು ಬಡಿದರೆ, ಅವರು ಮನೆಯಲ್ಲಿ ಇಲ್ಲವೆಂದೂ, ಕಳ್ಳಂಬೆಳ್ಳಕ್ಕೆ ಹೋಗಿದ್ದಾರೆಂದೂ ತಿಳಿಯಿತು. ಅಲ್ಲದೇ ಅವರು ಮರುದಿನ ಬರುತ್ತಾರೆಂದೂ ತಿಳಿಯಿತು.

ಪಾವೆಂ ಹುಬ್ಬಳ್ಳಿಗೆ ಹೊರಟು ಹೋಗಬಹುದಿತ್ತು. ಆದರೆ ಆ ಪದದ ಅರ್ಥ ಅವರಿಗೆ ದಕ್ಕುತ್ತಿರಲಿಲ್ಲ. ಗುಂಡಾಚಾರ್ ಅವರ ಮಗನಿಗೆ ತಾವು ಬಂದ ಕಾರಣವನ್ನು ಹೇಳಿದರು. ಒಂದು ಪದದ ಅರ್ಥವನ್ನು ತಿಳಿಯಲು ಇಷ್ಟು ದೂರದಿಂದ ಬಂದಿದ್ದಾರಲ್ಲ ಎಂದು ಆಶ್ಚರ್ಯವಾಗಿರಬೇಕು. 'ಕಸ್ತೂರಿ' ಮಾಸಿಕದಲ್ಲಿ ಪಾವೆಂ ಬರೆಯುತ್ತಿದ್ದ 'ಪದಾರ್ಥ ಚಿಂತಾಮಣಿ' ಅಂಕಣದ ಓದುಗರಾಗಿದ್ದ ಗುಂಡಾಚಾರ್ ಅವರ ಮಗ, ತಮ್ಮ ಮನೆಯಲ್ಲೇ ಉಳಿಯುವಂತೆ ಹೇಳಿದ. ಪಾವೆಂ ಆ ರಾತ್ರಿ ಅವರ ಮನೆಯಲ್ಲಿಯೇ ತಂಗಿದರು.

ಮರುದಿನ ಸಾಯಂಕಾಲ ಗುಂಡಾಚಾರ್ ಕಳ್ಳಂಬೆಳ್ಳದಿಂದ ತಮ್ಮ ಮನೆಗೆ ಮರಳಿದರು. ಪಾವೆಂ ಬರಹಗಳನ್ನು ಓದಿದ್ದ ಗುಂಡಾಚಾರ್‌ಗೆ ತಮ್ಮ ಮನೆಗೆ ಆಗಮಿಸಿರುವ ಅತಿಥಿಯನ್ನು ಕಂಡು ಸೋಜಿಗವಾಯಿತು. ಸೋಜಿಗವಾಯಿತಷ್ಟೇ ಅಲ್ಲ, ಅವರ ಬಗ್ಗೆ ಗೌರವ ಇಮ್ಮಡಿಯಾಯಿತು. 'ನಿಮ್ಮ ಪದಾರ್ಥ ಚಿಂತಾಮಣಿ ಅಂಕಣವನ್ನು ತಪ್ಪದೇ ಓದುವವರಲ್ಲಿ ನಾನೂ ಒಬ್ಬ. ಆದರೆ ಒಂದು ಪದದ ಅರ್ಥ ತಿಳಿಯಲು ನೀವು ಇಷ್ಟೆಲ್ಲ ಶ್ರಮ ಪಡುತ್ತೀರಿ ಎಂಬುದು ಗೊತ್ತಿರಲಿಲ್ಲ' ಎಂದು ಗುಂಡಾಚಾರ್ ಪ್ರಶಂಸಿಸಿದರು.

ಅದಕ್ಕೆ ಪಾವೆಂ 'ಒಂದು ಪದದ ಅರ್ಥವನ್ನು ನಾನು ತಿಳಿದುಕೊಂಡು, ಬೇರೆಯವರಿಗೆ ತಿಳಿಸುವ ಕಾಯಕ ಪವಿತ್ರ, ಹಾಗೂ ಗುರುತರವಾದುದು. ನಾನು ತಪ್ಪು ಅಥವಾ ಸರಿಯಲ್ಲದ ಉತ್ತರ ಬರೆದರೆ ಅದನ್ನು ಓದಿದವರು ಅದೇ ಪ್ರಮಾದ ಮಾಡಿ, ಆ ಪದವನ್ನು ವಿರೂಪಗೊಳಿಸಬಹುದು. ಇದು ಆ ಪದಕ್ಕೊಂದೇ ಅಲ್ಲ, ಭಾಷೆಗೂ ದೊಡ್ಡ ಅನ್ಯಾಯ. ಯುರೋಪಿನಿಂದ ಬಂದ ಕಿಟ್ಟೆಲ್ ಕನ್ನಡ ಕಲಿತು, ಕನ್ನಡ ಪದಗಳ ಅರ್ಥ ತಿಳಿಯಲು ಊರೂರು ಅಲೆದು ಸಂಗ್ರಹಿಸಿ ಕನ್ನಡದ ಪದಕೋಶವನ್ನು ಬರೆದಿರುವಾಗ ನನ್ನದೇನು ಬಂತು?' ಎಂದರು.

'ಈಗ ನೀವು ತಿಳಿಯಲು ಬಯಸಿರುವ ಪದದ ಅರ್ಥವೇನೆಂದು ಪತ್ರ ಬರೆದು ಕೇಳಿದ್ದರೆ, ನಾನು ಬರೆದು ತಿಳಿಸುತ್ತಿದ್ದೆನಲ್ಲಾ' ಎಂದರು ಗುಂಡಾಚಾರ್. ಅದಕ್ಕೆ ಪಾವೆಂ, 'ಒಂದು ಪದದ ಅರ್ಥ ನಮ್ಮದಾಗಬೇಕೆಂದರೆ ಇಷ್ಟು ಪರಿಶ್ರಮ ಪಡುವುದು ದೊಡ್ಡದಲ್ಲ. ಆಗ ನನಗೆ ನಿಮ್ಮ ಪರಿಚಯ ಆಗುತ್ತಿರಲಿಲ್ಲ. ನಿಮ್ಮ ಜತೆ ಆ ಪದದ ಅರ್ಥ ಚರ್ಚಿಸುವಾಗ ಇನ್ನಿತರ ಎಷ್ಟೋ ಸಂಗತಿಗಳು ನನಗೆ ಗೊತ್ತಾಗಬಹುದು. ಅವುಗಳನ್ನೆಲ್ಲ ಪತ್ರಮುಖೇನ ಮಾಡುವುದು ಅಸಾಧ್ಯ' ಎಂದು ಸಮಜಾಯಿಶಿ ನೀಡಿದರು.

ಕೊನೆಗೆ ಪಾವೆಂ ತಾವು ಅರ್ಥ ತಿಳಿಯಲು ಬಯಸಿದ 'ಮಾತಾವಿತಾಯ್' ಪದದ ಬಗ್ಗೆ ಗುಂಡಾಚಾರ್‌ರನ್ನು ಕೇಳಿದರು. ಆ ಪದವನ್ನು ಕೇಳಿದ ತಕ್ಷಣ 'ಈ ಪದ ಎಲ್ಲಿ ಸಿಕ್ಕಿತು? ಎಲ್ಲಿ ಓದಿದ್ದೀರಿ? ಯಾರಿಂದ ಕೇಳಿದ್ದೀರಿ?' ಎಂದು ಗುಂಡಾಚಾರ್ ಪ್ರಶ್ನಿಸಿದರು. 'ಕಸ್ತೂರಿ'ಯಲ್ಲಿ ಒಂದು ಲೇಖನದಲ್ಲಿ ಕನ್ನಡದ ಒಬ್ಬ ಆಯುರ್ವೇದ ವೈದ್ಯರು ಈ ಪದವನ್ನು ಬಳಸಿದ್ದಾಗಿ ಪಾವೆಂ ತಿಳಿಸಿದರು.

ಅದಕ್ಕೆ ಗುಂಡಾಚಾರ್‌ರು, 'ಇದು ಕನ್ನಡಿಗರು ತಮಿಳಿಗೆ ಮಾಡುವ ಅಪಚಾರ' ಎಂದರು. ಪಾವೆಂ ಅವರಿಗೆ ಅರ್ಥವಾಗಲಿಲ್ಲ. ಆಗ ಗುಂಡಾಚಾರ್‌ರು 'ನೋಡಿ, ಮಾತಾವಿತಾಯ್ ಪದವಿದೆಯಲ್ಲ, ಅದು ಕನ್ನಡದ್ದಲ್ಲ. ಅದು ತಮಿಳು ಪದ. ಕನ್ನಡಿಗರ ಬಾಯಲ್ಲಿ ಮಾತಾವಿತಾಯ್ ಆಗಿದೆ. ಆದರೆ ತಮಿಳಿನಲ್ಲಿ 'ಮಾದವಿಡಾಯ್' ಎಂದು ಉಚ್ಚರಿಸುತ್ತಾರೆ. ಹಾಗೆಂದರೆ ಹೆಂಗಸರ ಮುಟ್ಟು, ತಿಂಗಳಿಗೊಮ್ಮೆ ಉಂಟಾಗುವ ರಜಸ್ಸು, ಋತುಚಕ್ರ ಎಂದರ್ಥ' ಎಂದು ಈ ಪದದ ವ್ಯುತ್ಪತ್ತಿ, ರಚನೆ ಮುಂತಾದವುಗಳ ಬಗ್ಗೆ ಒಂದು ಗಂಟೆ ವಿವರಿಸಿದರು.

'ನೋಡಿದ್ರಾ ಗುಂಡಾಚಾರರೇ, ನಾನು ನಿಮ್ಮನ್ನು ಭೇಟಿ ಮಾಡದಿದ್ದರೆ, ಇಷ್ಟೆಲ್ಲ ಸಂಗತಿಗಳು ಗೊತ್ತಾಗುತ್ತಿತ್ತಾ? ನಾನು ಈ ಜನ್ಮದಲ್ಲಿ 'ಮಾದವಿಡಾಯ್' ಪದವನ್ನು ಮರೆಯುವುದುಂಟಾ? ಈ ನೆಪದಲ್ಲಿ ನೀವು ಪರಿಚಿತರಾದಿರಿ. ಅದರ ಜತೆ ನಿಮ್ಮ ಮಾಟ್ಟುಪ್ಪೆಣ್ (ಸೊಸೆ) ಮಾಡಿದ ಅಡುಗೆ ರುಚಿ ಸವಿಯುವಂತಾಯಿತು. ನಾನು ನಿಮ್ಮ ಮಾಣವನ್ (ಶಿಷ್ಯ) ಅಥವಾ ಮಾಣಾಕ್ಕನ್ ಆಗುವಂತಾ ಯಿತು. ಒಂದು ಪದ ನನಗೆ ಒಂದಷ್ಟು ಜೀವನಾನುಭವವನ್ನು ಕಟ್ಟಿಕೊಟ್ಟಿತು. ಅಷ್ಟಕ್ಕೂ ಪದಗಳ ಅರ್ಥ ಹುಡುಕುವುದೆಂದರೆ ಜೀವನದ ಅರ್ಥ ಹುಡುಕಿದಂತೆಯೇ ಅಲ್ಲವೇ?' ಎಂದರು ಪಾವೆಂ.

'ಪದಾರ್ಥ ಚಿಂತಾಮಣಿ'ಯಲ್ಲಿ ಬರೆದ ಒಂದೊಂದು ಪದದ ಅರ್ಥ ಹುಡುಕಾಟದಲ್ಲಿ ಇಂಥದೇ ರೋಚಕತೆಯಿದೆ, ಪರಿಶ್ರಮವಿದೆ, ಹೋರಾಟವಿದೆ, ಜೀವನಪ್ರೀತಿಯಿದೆ. ತಾಯಿಯನ್ನು ಹುಡುಕುತ್ತಾ ಅಲೆಯುವ ಕರುವಿನಂತೆ ಪಾವೆಂ, ಪದಗಳ ಅರ್ಥ ಹುಡುಕುತ್ತಾ ಅಲೆದಿದ್ದಾರೆ. ಅವೆಷ್ಟೋ ಊರುಗಳಿಗೆ ಹೋಗಿದ್ದಾರೆ. ಈ ಪದದ ಅರ್ಥ ಬಲ್ಲಿರಾ, ಅದನ್ನು ನನಗೆ ತಿಳಿಸುವಿರಾ ಎಂದು ಅಂಗಲಾಚಿದ್ದಾರೆ. ಹತ್ತು ಜನರನ್ನು ಕೇಳಿದರೂ ಸರಿಯೇ, ಒಂದೇ ಒಂದು ಪದವನ್ನು ಎದೆಗವಚಿಕೊಂಡು ಅದರ ಅರ್ಥ, ಮರ್ಮ ತಿಳಿಯಲು ಅರೆಹುಚ್ಚನಂತೆ, ಅಲೆಮಾರಿಯಂತೆ ಅಲೆದಿದ್ದಾರೆ.

ಇದು ಪಾವೆಂ 'ಕಸ್ತೂರಿ' ಸಂಪಾದಕರಾಗಿದ್ದಾಗ ಮಾತ್ರ ಮಾಡಿದ್ದಲ್ಲ, ಸಂಪಾದಕರಾಗಿ ನಿವೃತ್ತರಾದ ನಂತರವೂ ಈ ಚಾಳಿಯನ್ನು ಮುಂದುವರಿಸಿದ್ದರು. ಪದಬೇಟೆ, ಅರ್ಥ ಹುಡುಕಾಟ ಅವರಿಗೆ ನಿತ್ಯ ಕಾಯಕವೇ ಆಗಿತ್ತು. ನಿವೃತ್ತರಾಗಿ ಎಷ್ಟೋ ವರ್ಷಗಳ ನಂತರ, ಒಮ್ಮೆ ಅವರು 'ವಲ್ಲಕಾಡು'ಎಂಬ ಪದದ ಅರ್ಥ ಹುಡುಕಿಕೊಂಡು ಒಂದು ಕಾಲಕ್ಕೆ ತಾವು ಕೆಲಸ ಮಾಡುತ್ತಿದ್ದ ಹುಬ್ಬಳ್ಳಿಯ ಕೊಪ್ಪಿಕರ ರಸ್ತೆಯಲ್ಲಿರುವ 'ಸಂಯುಕ್ತ ಕರ್ನಾಟಕ' ಕಾರ್ಯಾಲಯಕ್ಕೆ ಬಂದಿದ್ದರು. ವೃದ್ಧಾಪ್ಯದಿಂದ ಕೃಶರಾಗಿದ್ದರೂ, ಅಸ್ತಮಾದಿಂದ ಜರ್ಝರಿತರಾಗಿದ್ದರೂ ಏದುಸಿರು ಬಿಡುತ್ತಾ, ಅಲ್ಲಿ ಕನ್ನಡ ಹಾಗೂ ತೆಲುಗು ಬಲ್ಲ ಮ್ಯಾಗಜಿನ್ ವಿಭಾಗದಲ್ಲಿ ಕೆಲಸ ಮಾಡುತ್ತಿದ್ದವರ ಜೊತೆ ತಾಸುಗಟ್ಟಲೆ ಹರಟೆ ಹೊಡೆದು, ವಲ್ಲಕಾಡು ಅಂದ್ರೆ ಶ್ಮಶಾನ, ಸೊಡ್ಡೆಗುಡ್ಡೆ, ರುದ್ರಭೂಮಿ ಎಂಭ ಅರ್ಥವನ್ನು ಟಿಪ್ಪಣಿ ಮಾಡಿಕೊಂಡು ಹೋಗಿದ್ದನ್ನು ಕೆಲವರು ನೆನಪಿಸಿಕೊಳ್ಳುತ್ತಾರೆ.

ಹುಬ್ಬಳ್ಳಿಯಲ್ಲಿ 'ಸಂಯುಕ್ತ ಕರ್ನಾಟಕ'ದ ಸುದ್ದಿಮನೆಗೆ ತಾಕಿಕೊಂಡೇ 'ಕಸ್ತೂರಿ' ಇತ್ತು. ಸಂಯುಕ್ತ ಕರ್ನಾಟಕದಲ್ಲಿ ಕೆಲಸ ಮಾಡುವವರಿಗೆ ಒಂದು ಕಠಿಣ ಪದ ಸಿಕ್ಕರೆ ನುಂಗಿಬಿಡುತ್ತಾರೆ, ಅದೇ ಪಾವೆಂ ಅವರಿಗೆ ಸಿಕ್ಕಿದರೆ ಅಗೆದು ಜೀರ್ಣಿಸಿಕೊಳ್ತಾರೆ ಎಂಬ ಮಾತು ಚಾಲ್ತಿಯಲ್ಲಿತ್ತು. 'ಕಸ್ತೂರಿ' ಸಂಪಾದಕರಾಗಿದ್ದಾಗ, ಲೇಖನ ಬರೆಯುವಾಗ ಯಾವುದಾದರೂ ಪದ, ವಿಷಯದ ಬಗ್ಗೆ ಹೆಚ್ಚಿನ ಮಾಹಿತಿ ಬೇಕಾದಾಗ, ಸಂಬಂಧಪಟ್ಟವರಿಂದ ಅಧಿಕೃತ ಮಾಹಿತಿ ಪಡೆಯಲು ಖುದ್ದಾಗಿ ಅವರನ್ನು ಭೇಟಿ ಮಾಡಲು ಹೋಗುತ್ತಿದ್ದರು.

ಆ ದಿನಗಳಲ್ಲಿ ಹುಬ್ಬಳ್ಳಿಯ 'ಸಂಯುಕ್ತ ಕರ್ನಾಟಕ'ದಲ್ಲಿ ಮುಖಪುಟದಲ್ಲಿ 'ಮುಂಬೈ ಪೇಟೆಧಾರಣೆ' ಪ್ರಕಟವಾಗುತ್ತಿತ್ತು. ಹುಬ್ಬಳ್ಳಿಯಿಂದ ಪ್ರಕಟವಾಗುವ ಕನ್ನಡ ಪತ್ರಿಕೆಯಲ್ಲಿ ಮುಂಬೈ ಪೇಟೆಧಾರಣೆಯನ್ನೇಕೆ ಪ್ರಕಟಿಸುತ್ತೀರಿ ಎಂದು ಓದುಗರೊಬ್ಬರು ಪತ್ರ ಬರೆದಿದ್ದು ಮುಂಬೈ ಪೇಟೆ ಬಗ್ಗೆ ಪಾವೆಂ ಮೂರು ಲೇಖನಗಳನ್ನು ಬರೆಯುವಂತಾಯಿತು. ಹುಬ್ಬಳ್ಳಿಯ ದಾಜಿಬಾನ್‌ಪೇಟೆ, ರಾಧಾಕೃಷ್ಣ ಗಲ್ಲಿ, ದುರ್ಗದಬೈಲಿನಲ್ಲಿರುವ ಹತ್ತಾರು ವರ್ತಕರನ್ನು ಭೇಟಿ ಮಾಡಿ ಸಂಗ್ರಹಿಸಿದ ವಿವರಗಳು ಪಾವೆಂ ಅವರ ಸವಿಸ್ತಾರ ವಿಷಯಸಂಗ್ರಹ ಹಾಗೂ ಸೂಕ್ಷ್ಮ ವಸ್ತು ಗ್ರಹಿಕೆಗೆ ನಿದರ್ಶನ.

ತಮ್ಮ ಮನೆಗೆ ಪಾವೆಂ ಆಚಾರ್ಯರು ಬಂದರೆ ಸಾಕು, 'ಪಾವೆಂ ಬಂದಿದ್ದಾರೆ ಅಂದ್ರೆ ಯಾವುದೋ ಪದದ ಅರ್ಥ ಹುಡುಕಿಕೊಂಡು ಬಂದಿದ್ದಾರೆಂದೇ ಅರ್ಥ. ಬೇಗ ಚಾ ಮಾಡು' ಎಂದು ಸಾಹಿತಿ ಶಂ.ಭಾ.ಜೋಶಿ ತಮ್ಮ ಮನೆಯವರಿಗೆ ಹೇಳುತ್ತಿದ್ದರಂತೆ. 'ಚಹ, ತಿಂಡಿ ಕೊಟ್ಟರೆ ಹೋಗೋನಲ್ಲ. ಪದಗಳ ಅರ್ಥ ಹೇಳಿದರೆ ಮಾತ್ರ ಹೋಗ್ತೇನೆ' ಎಂದು ಪಾವೆಂ ಹೇಳುತ್ತಿದ್ದರಂತೆ. ಒಂದು ಪದ ಹಿಡಕೊಂಡು ಇಬ್ಬರೂ ಮೂರ್ನಾಲ್ಕು ಗಂಟೆಗಳ ಕಾಲ ಜಗ್ಗಾಡುತ್ತಿದ್ದರಂತೆ. ಇದೇ ರೀತಿ ಪಾವೆಂ, ವಿಕೃ ಗೋಕಾಕರ ಮನೆಗೂ ಹೋಗುತ್ತಿದ್ದರು. ಪಾವೆಂ ಅವರನ್ನು ಕಂಡಕೂಡಲೇ ಗೋಕಾಕರು ಪತ್ನಿಗೆ 'ನೀನು ಇಂದು ನಮಗೆ ಬಗೆಬಗೆ ಪದಾರ್ಥ(ಅಡುಗೆ) ಮಾಡು. ಪಾವೆಂ ಪದಾರ್ಥ ಚಿಂತಾಮಣಿ ಉಣಿಸುತ್ತಾರೆ' ಎಂದು ತಮಾಷೆ ಮಾಡುತ್ತಿದ್ದರಂತೆ.

ಪಾವೆಂ ಅವರು 'ಕಸ್ತೂರಿ' ಮಾಸಪತ್ರಿಕೆಗೆ ತಮ್ಮನ್ನು ಸಂಪೂರ್ಣ ಸಮರ್ಪಿಸಿಕೊಂಡಿದ್ದರು. ಅವರು ಏನೇ ಮಾಡಲಿ, ಅಂತಿಮವಾಗಿ ಅದು 'ಕಸ್ತೂರಿ'ಗಾಗಿಯೇ. ಅವರ ಪರಿಶ್ರಮ, ಕಾಯಕ, ಚಿಂತನೆ, ಹೋರಾಟಗಳ ಝರಿಗಳೆಲ್ಲ 'ಕಸ್ತೂರಿ' ಎಂಬ ಅಣೆಕಟ್ಟೆಯಲ್ಲಿ ಬಂದು ಸಂಗ್ರಹವಾಗುತ್ತಿತ್ತು. 'ಕಸ್ತೂರಿ' ಒಂದು ಅಪರೂಪದ, ಆದರ್ಶ ಮಾಸಿಕವಾಗಬೇಕೆಂಬುದು ಅವರೇ ಹಾಕಿಕೊಂಡ ಮಾನದಂಡವಾಗಿತ್ತು. ಹೀಗಾಗಿ ಅವರೇ ಎಲ್ಲ ಲೇಖನಗಳನ್ನು ಖುದ್ದು ಎಡಿಟ್, ರೀರೈಟ್ ಮಾಡುತ್ತಿದ್ದರು. ಸಮಾಧಾನವಾಗದಿದ್ದರೆ ತಾವೇ ಖುದ್ದಾಗಿ ಬರೆಯುತ್ತಿದ್ದರು. ವಿಜ್ಞಾನ, ತಂತ್ರಜ್ಞಾನ, ಖಗೋಳಶಾಸ್ತ್ರ, ಗಣಿತ, ಪಾಶ್ಚಿಮಾತ್ಯ ಸಾಹಿತ್ಯ, ಇತಿಹಾಸ, ಅಂತಾರಾಷ್ಟ್ರೀಯ ವಿದ್ಯಮಾನ, ಕಲೆ ಮುಂತಾದ ವಿಷಯಗಳಿಗೆ ಸಂಬಂಧಿಸಿದ ಲೇಖನಗಳನ್ನು ಸುಮಾರು ಇಪ್ಪತ್ತೈದು ಕಾವ್ಯನಾಮಗಳಲ್ಲಿ ಬರೆಯುತ್ತಿದ್ದರು. ಒಮ್ಮೊಮ್ಮೆ ಇಡೀ ಪತ್ರಿಕೆಯಲ್ಲಿ ಶೇ.ತೊಂಬತ್ತರಷ್ಟು ಲೇಖನಗಳನ್ನು ಪಾವೆಂ ತಾವೇ ಬರೆದು ತುಂಬಿಸಿದ್ದೂ ಉಂಟು.

'ಕಸ್ತೂರಿ' ಒಂದು ಆದರ್ಶ ಮಾಸಿಕವಾಗಬೇಕೆಂಬುದು ಅವರೇ ಹಾಕಿಕೊಂಡ ಮಾನದಂಡವಾಗಿತ್ತು. ಹೀಗಾಗಿ ಅವರೇ ಎಲ್ಲ ಲೇಖನಗಳನು ಖುದ್ದು ಎಡಿಟ್, ರೀರೈಟ್ ಮಾಡುತ್ತಿದ್ದರು. ಸಮಾಧಾನವಾಗದಿದ್ದರೆ ತಾವೇ ಖುದ್ದಾಗಿ ಬರೆಯುತ್ತಿದ್ದರು. ಸುಮಾರು 25 ಕಾವ್ಯನಾಮಗಳಿದ್ದವು ಅವರಿಗೆ!

'ಪಾವೆಂ ಬದುಕು ಬರಹ: ಒಂದು ಅಧ್ಯಯನ' ಎಂಬ ಶೀರ್ಷಿಕೆಯಲ್ಲಿ ಅವರ ಕುರಿತು ಸಂಶೋಧನೆ ಮಾಡಿದ ಸರ್ವಮಂಗಳ ಆಚಾರ್ಯ ಹೇಳಿದ ಒಂದು ಸಂಗತಿ ನನಗೆ ಸದಾ ಅಚ್ಚರಿ ಹಾಗೂ ಪ್ರೇರಣೆ ನೀಡುವಂಥದ್ದು. 'ಕಸ್ತೂರಿ'ಯನ್ನು ಮುದ್ರಣಕ್ಕೆ ಕಳಿಸುವ ಮುನ್ನ ಪಾವೆಂ ಇಡೀ ಪತ್ರಿಕೆಯನ್ನು ಮೂರ್ನಾಲ್ಕು ಸಲ ಪ್ರೂಫ್ ರೀಡಿಂಗ್ ಮಾಡಿ, ಒಂದೇ ಒಂದು ಕಾಗುಣಿತ ದೋಷ ಇಲ್ಲವೆಂಬುದನ್ನು ಖಾತ್ರಿಪಡಿಸಿಕೊಳ್ಳುತ್ತಿದ್ದರು. ಅವರು ಸಂಪಾದಕರಾಗಿದ್ದ ಅವಧಿಯಲ್ಲಿನ ಕಸ್ತೂರಿಯಲ್ಲಿ ಒಂದೇ ಒಂದು ಕಾಗುಣಿತ ದೋಷವನ್ನು ಹುಡುಕುವುದು ಸಾಧ್ಯವೇ ಇಲ್ಲ. Factual mistakes ಕಂಡುಬಂದರೆ ಮುಂದಿನ ತಿಂಗಳ ಪತ್ರಿಕೆಯಲ್ಲಿ ಸರಿಪಡಿಸುತ್ತಿದ್ದರು. ಆದರೆ ಕಾಗುಣಿತ ದೋಷ ಮಾತ್ರ ಕಾಣಿಸಿಕೊಳ್ಳಲು ಸಾಧ್ಯವೇ ಇಲ್ಲ. ಪಾವೆಂ ಅವರು ಸಂಪಾದಕರಾಗಿದ್ದ ಆ ಎರಡು ದಶಕಗಳ 'ಕಸ್ತೂರಿ'ಯ ಪ್ರತಿ ಸಂಚಿಕೆಯನ್ನು ನೋಡಿದರೆ ಈ ಅಂಶ ವೇದ್ಯವಾಗುತ್ತದೆ. 'ಪ್ರೂಫ್ ರೀಡಿಂಗ್ ಮಾಡದೆ ನೀವು ಬರಹಗಾರರಾಗಲು ಸಾಧ್ಯವೇ ಇಲ್ಲ' ಎಂದು ಅವರು ಹೇಳುತ್ತಿದ್ದರು. ಮೂಲತಃ ಪಾವೆಂ ಅವರು ಜಾಬ್ ಸೆಕ್ಷನ್‌ನ ಮ್ಯಾನೇಜರ್ ಆಗಿದ್ದರು. ಅವರಿಗೆ ಹ್ಯಾಂಡ್ ಕಂಪೋಸಿಂಗ್ ಗೊತ್ತಿತ್ತು. ಅಚ್ಚುಮೊಳೆಗಳನ್ನು ಖುದ್ದಾಗಿ ಜೋಡಿಸುತ್ತಿದ್ದರು. ಆ ಕೆಲಸದಿಂದ ಸಂಪಾದಕನ ತನಕ ಸುದ್ದಿಮನೆಯ ಎಲ್ಲ ವಿಭಾಗಗಳಲ್ಲೂ ಅವರಿಗೆ ಕೆಲಸ ಮಾಡಿದ ಅನುಭವವಿತ್ತು.

ಪಾವೆಂ ಅವರಿಗೆ ಓದು, ಅಧ್ಯಯನ, ಬರವಣಿಗೆ, ತಿರುಗಾಟದ ಹೊರತಾಗಿ ಮತ್ತೇನೂ ಗೊತ್ತಿರಲಿಲ್ಲ, ಪತ್ರಿಕೋದ್ಯಮಕ್ಕಾಗಿ ತಮ್ಮ ಜೀವವನ್ನೇ ಸವೆಸಿದರು. ಎಂಟು ಮಕ್ಕಳಿರುವ ತುಂಬು ಸಂಸಾರಕ್ಕೆ ಅವರು ಅದೆಂಥ comfort ಕೊಟ್ಟರೋ ಗೊತ್ತಿಲ್ಲ, ಆದರೆ ಕನ್ನಡ ನಾಡಿಗೆ 'ಕಸ್ತೂರಿ'ಯಂಥ ಪರಿಮಳವನ್ನು ಕೊಟ್ಟರು. ಆ ಪರಿಮಳ ಇಂದಿಗೂ ಕನ್ನಡಿಗರ ಮನೆಮನೆಗಳಲ್ಲಿ ನೆಲೆಸಿರುವುದು ಪಾವೆಂ ಅವರ ಕಾರಣದಿಂದಲೇ.

ಕನ್ನಡದಲ್ಲಿ 'ಕಸ್ತೂರಿ'ಯನ್ನು ಮೀರಿಸುವ ಮತ್ತೊಂದು ಮ್ಯಾಗಜಿನ್ ಬಂದಿಲ್ಲ, ಕಾರಣ ಮತ್ತೊಬ್ಬ ಪಾವೆಂ ಹುಟ್ಟಿ ಬಂದಿಲ್ಲ!



ತಮ್ಮ ಬಹುಭಾಷಾ ಪಾಂಡಿತ್ಯದಿಂದ ಕನ್ನಡ ಶಬ್ದಕೋಶಕ್ಕೆ, ಕನ್ನಡ ಅಭಿವ್ಯಕ್ತಿ ಶೈಲಿಗೆ ಅರ್ಥವಿಸ್ತಾರ ತುಂಬಿದ ಪಾಡಿಗಾರು ವೆಂಕಟರಮಣ ಆಚಾರ್ಯರು ಹುಟ್ಟಿದ್ದು ಫೆ.6ರಂದು.

ನೋಡಯ್ಯ, ಈ ಎಂಟು ಗೇಣಿನ
ನರಕೀಟ ಕಾಲದ ಹೆದ್ದಾರಿಯಲ್ಲಿ
ಗೀರಿದ ರಥ ಚಕ್ರದ ಗೀಟ. ಇದು
ದೇವತೆಗಳಿಗೂ ಅನ್ನಿಸದೇ ಅದ್ಭುತ?

ಇವು 'ಪಾವೆಂ' ಅವರ ಕವನದ ಸಾಲುಗಳು. 'ಲೋಕದ ಡೊಂಕು'ಗಳನ್ನು 'ವಕ್ರದೃಷ್ಟಿ'ಯಿಂದಲೇ ಕಾಣುತ್ತಾ, ನೈಸರ್ಗಿಕವಾದ ನಗೆಯನ್ನು ಸಾವಿರಾರು ಜನರ ಮೊಗದಲ್ಲಿ, ಮನದಲ್ಲಿ ಅರಳಿಸಿದ 'ಲಾಂಗೂಲಾಚಾರ್ಯ' ಛಾಪಿನ ತಮ್ಮ ಬರಹಗಳಲ್ಲಿ 'ವಿಪರೀತ', 'ಪ್ರಹಾರ' ಮಾಡಿದವರು ಈ ಪಾಡಿಗಾರು ವೆಂಕಟರಮಣ ಆಚಾರ್ಯರು. ಕವಿಯಾಗಿ, ಕತೆಗಾರನಾಗಿ, ಪತ್ರಕರ್ತನಾಗಿ, ಕರ್ಮವೀರ, ಕಸ್ತೂರಿ ಪತ್ರಿಕೆಗಳ ಸಹಸಂಪಾದಕರಾಗಿ ತಮ್ಮ ಬಹುಭಾಷಾ ಪಾಂಡಿತ್ಯದಿಂದ ಕನ್ನಡ ಶಬ್ದಕೋಶಕ್ಕೆ, ಕನ್ನಡ ಅಭಿವ್ಯಕ್ತಿ ಶೈಲಿಗೆ ಅರ್ಥವಿಸ್ತಾರ ತುಂಬಿದವರು ಪಾವೆಂ. ಕನ್ನಡಿಗರ ಚಿಂತನೆಗಳಿಗೆ ಪ್ರಚೋದನೆ ಕೊಟ್ಟಿದ್ದಾರೆ. 'ಕಸ್ತೂರಿ' ಡೈಜೆಸ್ಟ್ ಅನ್ನು 'ಲೋಕಶಿಕ್ಷಣ' ಪಠ್ಯ(text)ವನ್ನಾಗಿ ಮಾಡಿದರು. ಅವರು ಸಂಯುಕ್ತ ಕರ್ನಾಟಕ, ಕರ್ಮವೀರ ಪತ್ರಿಕೆಗಳ ಮುದ್ರಣಾಲಯದ ಮೇನೇಜರ್ ಕೆಲಸಕ್ಕೆ ನೇಮಕವಾದರೂ ಅದೊಂದು ನೌಕರಿ ಎಂದವರು ಮಾಡಲಿಲ್ಲ.

ಭಾಷಾಜ್ಞಾನವನ್ನು ಪ್ರಯೋಗಿಸಿ, ಪ್ರತಿ ಸಂಚಿಕೆಯ ಕರಡುಪ್ರತಿ ತಿದ್ದುವುದರಿಂದ ಆರಂಭಿಸಿ, ಮುದ್ರಣ ವಿನ್ಯಾಸದ ಪ್ರಚಾರ, ಪ್ರಸಾರ ತಂತ್ರದ ಹೊಣೆ ಹೊತ್ತರು. ಪತ್ರಿಕಾ ಭಾಷೆಗೆ ಅಂದ ಚೆಂದ ತಂದುಕೊಟ್ಟರು. ಹೀಗೆ ಮಾಡಲು ಅವರಿಗೆ ಉಡುಪಿಯಲ್ಲಿದ್ದಾಗ 'ಅಂತರಂಗ', 'ನವಯುಗ', ಅಲ್ಲಿನ ಅನೇಕ ಪತ್ರಿಕೆಗಳಲ್ಲಿ ಕೆಲಸ ಮಾಡಿದ ಅನುಭವ ಇತ್ತು. ಕಸ್ತೂರಿಯ 18 ವರ್ಷಗಳ 222 ಸಂಚಿಕೆಗಳನ್ನು ಓದು ಅಧ್ಯಯನಕ್ಕೆ ಒಳಪಡಿಸಿದಾಗ ಆಚಾರ್ಯರ ಸಂಪಾದನ ಕೌಶಲ, ಸಂಪಾದಕ ಕಚೇರಿಯ ಸಮರ್ಥ ನಿರ್ವಹಣೆ, ಪ್ರಸಾರದ ಸತತ ಬೆಳವಣಿಗೆಗಾಗಿ ಅನುಸರಿಸಿದ ಪ್ರಯೋಗಶೀಲತೆ ಅರಿವಾಗುತ್ತದೆ. ಅವರ ವಿವಿಧ ಗುಪ್ತನಾಮ(Pseudonym)ಗಳು ಹೀಗಿವೆ. ಲಾಂಗೂಲಾಚಾರ್ಯ(ಹರಟೆ ಲೇಖಕ), ಮುರಳೀಧರ ರಾವ್, ರಾಧಾಕೃಷ್ಣ, ರಮಾನಂದ, ರಮಾರಮಣ, ಶ್ರೀನಿವಾಸಪ್ಪ, ವಿಚಾರಿ, ಸಾಗರತನಯಾ, ಪಿ. ಲಕ್ಷ್ಮಿಬಾಯಿ, ರಮಾತನಯ, ಶ್ರೀಶ, ವಿಜ್ಞಾನ ಭಕ್ತ, ಗಣಿತಪ್ರಿಯ, ಆಕಾಶನಿರೀಕ್ಷಕ, ಭಾಷಾಭ್ಯಾಸಿ, ಮನೋವಿಜ್ಞಾನಿ, ನಿವೃತ್ತ ಶಿಕ್ಷಕ ಮುಂತಾದ ಹೆಸರುಗಳಿಂದ ಬರೆದು ವಿವಿಧ ಕಾಲಂಗಳನ್ನು ತುಂಬುತ್ತಿದ್ದರು. ಇಲ್ಲಿಯ ಹೆಸರುಗಳಲ್ಲಿ ಕೆಲವು, ಮಕ್ಕಳ ಮತ್ತು ಮಡದಿಯ ಹೆಸರುಗಳಾಗಿದ್ದರೂ ಕೆಲವೊಮ್ಮೆ ತಮ್ಮ ವಾಚನದ ಅಭಿರುಚಿಗೆ ತಕ್ಕಂತೆ ಪೂರಕವಾದ ಹೆಸರುಗಳನ್ನು ಬರೆಯುತ್ತಿದ್ದರು.

ಕಸ್ತೂರಿ ಮೃಗದ ಗುಣಲಕ್ಷಣಗಳೆಲ್ಲ ಪತ್ರಿಕೆಯ ಆಶಯ, ಆಕೃತಿಗೆ ಅನುರೂಪವಾಗಿದೆ. ಕಸ್ತೂರಿಯಲ್ಲಿ ಅವರು ಪ್ರಪಂಚದ ಜ್ಞಾನರಾಶಿಯನ್ನು ಸ್ವಾರಸ್ಯಕರವಾಗಿ ಪ್ರಾಮಾಣಿಕವಾಗಿ ಉಲ್ಲೇಖಿಸುವ ಕೆಲಸ, ಸಮಕಾಲೀನ ಜೀವನದ ಚಲನಶೀಲತೆಯೊಂದಿಗೆ ಓದುಗನೂ ಚಲಿಸುವಂತೆ ಮಾಡಿತ್ತು. ಲೋಕ ಜ್ಞಾನ, ವಿಜ್ಞಾನ- ತಂತ್ರಜ್ಞಾನ, ಸಾಮಾಜಿಕ ವಿದ್ಯಮಾನ, ರಾಷ್ಟ್ರೀಯ, ಅಂತಾರಾಷ್ಟ್ರೀಯ, ರಾಜಕೀಯ ವಿಶ್ಲೇಷಣೆ, ಸಾಹಿತ್ಯ, ಪುರಾಣ, ಅನುವಾದ, ಆರೋಗ್ಯ, ಮನೋವಿಕಾಸ, ಕನ್ನಡದ ಕವಿ ಲೇಖಕರ ಸಾಧನೆ ಸಿದ್ಧಿಗಳ ಸಂಕ್ಷಿಪ್ತ ನೋಟ, ಕಲೆ ಕ್ರೀಡೆಗಳ ಕುರಿತು ಸಚಿತ್ರ ಪರಿಚಯ- ಇವೆಲ್ಲ ಹೂರಣಗಳು ಕಸ್ತೂರಿಯ ರುಚಿಯನ್ನು ಬೆಳೆಸಿದವು. ಇಂದಿಗೂ ಕಸ್ತೂರಿಯ ಸಂಚಿಕೆಗಳು ಮೂಲ ಆಕರಗಳಾಗಿವೆ.

ಪಾವೆಂ ಶುಷ್ಕ ಪಂಡಿತರಲ್ಲ, ಸರಳ ಸಜ್ಜನಿಕೆಯ ಚತುರಮತಿ ಲಾಂಗೂಲಾಚಾರ್ಯರಾಗಿ ಅವರು ಓದುಗರೊಡನೆ ಹೊಡೆದ ಹರಟೆಗಳು ಕನ್ನಡ ವಿನೋದ ಸಾಹಿತ್ಯದ ಅಜರಾಮರ ಭಾಗಗಳಾಗಿವೆ. ಅವರು ಉಭಯಭಾಷಾಕವಿಗಳು, 'ನವನೀರದ', 'ಕೆಲವು ಪದ್ಯಗಳು', 'ಹೌಸಿಂಗ್ ಕಾಲೋನಿ' ಕನ್ನಡ ಕಾವ್ಯಗಳ ಕೃತಿಗಳಾದರೆ 'ಬಯ್ಯ ಮಲ್ಲಿಗೆ' ತುಳು ಕಾವ್ಯ. ಕನ್ನಡದ ನವೋದಯ ಸಂಪ್ರದಾಯದಲ್ಲಿ ಪಾ.ವೆಂ ಅವರ ಕಾಲುಗಳಿದ್ದರೆ, ಅವರ ಮುಖ ನವ್ಯ ಪರಂಪರೆಯಲ್ಲಿ ಪ್ರಕಟವಾಗಿದೆ. ಲಂಕೇಶರ 'ಅಕ್ಷರ ಹೊಸಕಾವ್ಯ'ದಲ್ಲಿ ಪಾವೆಂ ಕವನಗಳು ಸ್ಥಾನ ಪಡೆದಿವೆ. ನವ್ಯ ಸಾಹಿತ್ಯ ಚಳವಳಿಯಲ್ಲಿ ಪಾವೆಂ ಪರೋಕ್ಷವಾಗಿ ಪಾಲ್ಗೊಂಡಿದ್ದಾರೆ. ನವ್ಯದ ಅರ್ಥಸತ್ವವನ್ನು ಬೆಂಬಲಿಸಿ ಅವರು ವಿಮರ್ಶೆ ಬರೆದುದಲ್ಲದೆ, ಅನಂತಮೂರ್ತಿ, ಲಂಕೇಶ್, ತೇಜಸ್ವಿ, ವೀಣಾ, ಚಂಪಾ, ಅಡಿಗರು, ಮೊಕಾಶಿ, ನಾಡಿಗ, ವಿ.ಜಿ ಭಟ್ಟ, ನಿರಂಜನ, ದಿನಕರ ದೇಸಾಯಿ ಮುಂತಾದ ಕವಿ ಲೇಖಕರ ಜತೆ ಪಾ.ವೆಂ ಸಂಪರ್ಕ ಸ್ನೇಹ ಇಟ್ಟುಕೊಂಡಿದ್ದರು. ನವೋದಯ- ಪ್ರಗತಿಶೀಲ ನವ್ಯ ಬಂಡಾಯ, ದಲಿತ ಸಾಹಿತ್ಯಗಳ ಚಳವಳಿಯ ಬಗ್ಗೆ ಆಸ್ಥೆ ವಹಿಸಿ ಅವುಗಳ ಕುರಿತು ಬರೆಸಿದ್ದಾರೆ.

'ಕಸ್ತೂರಿ ಡೈಜೆಸ್ಟ್' 1960– 90ರ ದಶಕಗಳಲ್ಲಿ ಸಾಹಿತ್ಯ ವಿಚಾರ ವೇದಿಕೆಯೂ ಆಗಿತ್ತು. ಓದುಗರ ಶಬ್ದಜ್ಞಾನ ಬೆಳೆದಾಗಲೇ, ಪತ್ರಿಕಾ ಸಾಹಿತ್ಯ ಬೆಳಗಲು ಸಾಧ್ಯ. ಅಂತೆಯೇ ಕನ್ನಡ ಪದಗಳ ನಿಷ್ಪತ್ತಿ ಸ್ವರೂಪವನ್ನು ಅಧ್ಯಯನ ಮಾಡಿ 'ಪದಾರ್ಥ ಚಿಂತಾಮಣಿ' ಅಂಕಣವನ್ನು ಬರೆಯುತ್ತಿದ್ದರು. ಅವರು ಸಂಸ್ಕೃತದ ಚಾಟುಕಾವ್ಯದ ಸುಭಾಷಿತಗಳ ಅನುವಾದ ಮಾಡಿದ್ದು ಗಮನಾರ್ಹ ಸಾಧನೆ. ಬಹುಭಾಷೆಗಳ ಸಂಬಂಧ ಅವರಿಗಿತ್ತು. ಒಟ್ಟಿನಲ್ಲಿ ಜ್ಞಾನ ಮತ್ತು ಮನರಂಜನೆಗಾಗಿ ತಮ್ಮದೇ ಆದ ನೀಲನಕ್ಷೆಯನ್ನು ಕಕ್ಷೆಯನ್ನು ಕಸ್ತೂರಿಗೆ ತೊಡಿಸಿ ಅದನ್ನು ಪ್ರಾಜ್ಞ ಕನ್ನಡಿಗರ ಕೈಗೆ ನೀಡಿದರು. ಇದು ಪತ್ರಿಕೋದ್ಯಮ ಕ್ಷೇತ್ರದಲ್ಲಿ ಯಶಸ್ವೀ ಪ್ರಯೋಗ. ಓರ್ವ ನುರಿತ ಪತ್ರಿಕೋದ್ಯಮಿ, ಸಮಾಜಕ್ಕೆ ಒಬ್ಬ ಆದರ್ಶ ಸಮರ್ಥ ಶಿಕ್ಷಕನಾಗಿ ನಿಲ್ಲಬಲ್ಲ ಎಂಬುದಕ್ಕೆ ಪಾಡಿಗಾರು ವೆಂಕಟರಮಣ ಆಚಾರ್ಯರೇ ನಿದರ್ಶನ.

– ಸರ್ವಮಂಗಳಾ ಪಿ. ಆರ್

ಒಳಗೆ ಬಾ ಓದುಗನೆ

2  ಸಾರಭರಿತ 80
ಪ್ರಿಯ ಕವಿಗೆ ಜನುಮದಿನದ ಶುಭಾಶಯ

4  ಅವಳ ಕವಿತೆಗಳು
ಕವಿತಾಗುಚ್ಛ

5 ಕಮಲಿ
ಶಾಂತಿ ಕೆ ಅಪ್ಪಣ್ಣ ಬರೆದ ಒಂದು ಮನಕಲಕುವ ಕತೆ